ಪ್ರತಿಭಾ ಗ್ರಂಥಮಾಲೆ, ಧಾರವಾಡ- ವರ್ಷ ೬—ಕಿರಣ ೩

# ಮರೆಯಲಾರದ ಮಡದಿ

( ಸ್ವತಂತ್ರ ಸಾಮಾಜಿಕ ಕಾದಂಬರಿ )



ಶ್ರೀ. ಪಣಂಬೂರು ಯೋಗೀಶರಾಯರು

ಮಾರ್ಚ

೧೯೪೯



ಬೆಲೆ :

ಎರಡು ರೂಪಾಯಿ.

# ಪ್ರತಿಭಾ ಗ್ರಂಥಮಾಲೆ, ಧಾರವಾಡ

## ಸಂಪಾದಕರು: ಭಾಲಚಂದ್ರ ಘಾಣೇಕರ

( ವಾರ್ಷಿಕ ಚಂದಾ:- ಅಂಚೆ ರಜಿಸ್ಟರ್ ಸೇರಿ ೬ ರೂ. ಮಾತ್ರ )

ವರ್ಷದಲ್ಲಿ ೬ ಕಿರಣಗಳು. ೮೦೦ ಪುಟಕ್ಕೆ ಮೇಲ್ಪಟ್ಟ ಸಾಹಿತ್ಯ! ಜನೆವರಿಯಿಂದ ಜನೆವರಿ ವರೆಗೆ ಹೊರಡುವ ಪ್ರಕಟನೆಗಳನ್ನೆಲ್ಲ ಚಂದಾದಾರರಿಗೆ ಕೊಡಲಾಗುವದು.

### ೧೯೪೯ರ ಕಾದಂಬರಿಗಳು

| | | | | |
|---|---|---|---|---|
| ೧. | ಪತಿ ( ನವಗಿರಿನಂದ ) | ೧ | ೪ | ೦ |
| ೨. | ಪೂಜಾಫಲ ( ನೇರಂಗ ) | ೧ | ೮ | ೦ |
| ೩. | ಮರೆಯಲಾರದ ಮಡದಿ ( ಯೋಗೀಶರಾವ್ ) | ೨ | ೦ | ೦ |
| ೪. | ಸ್ವರ್ಣಭೂಮಿ ( ವಾಮನಮಲ್ಯ ) | ೧ | ೮ | ೦ |

### ಮುಂದಿನ ಪ್ರಕಟನೆಗಳು

೫ನೇ ಕಿರಣ ಜುಲೈ ೧ನೇ ತಾರೀಖಿಗೆ
೬ನೇ ಕಿರಣ ನವೆಂಬರ್ ೧ನೇ ತಾರೀಖಿಗೆ

೬ ರೂ. ಚಂದಾ ಕಳಿಸಿ ಇಂದೇ ಚಂದಾದಾರರಾಗಿರಿ

**ಪ್ರತಿಭಾ ಗ್ರಂಥಮಾಲೆ, ಧಾರವಾಡ**

ಮುದ್ರಕರು:
ಎಂ. ಜ, ಖಾಲೇಕರ
ವಸಂತ ಮುದ್ರಣಾಲಯ
ಧಾರವಾಡ

ಪ್ರಕಾಶಕರು:
ಭಾಲಚಂದ್ರ ಘಾಣೇಕರ
ಪ್ರತಿಭಾ ಗ್ರಂಥಮಾಲೆ
ಧಾರವಾಡ

# ಮರೆಯಲಾರದ ಮಡದಿ

## ೧.

ಆಕಾಶದಿಂದ ದೃಷ್ಟಿಯನ್ನು ಗೋಡೆಯ ಕಡೆಗೆ ಹೊರಳಿಸಿದ ಲಲಿತೆಯ ಕಣ್ಣಿಗೆ ಮೊದಲು ಬಿದ್ದುದು, ಗೋಡೆಯ ಮೇಲಿನ ಕೆಲೆಂಡರಿನ ಆ ವರ್ಷದ ದಪ್ಪವಾದ ಅಂಕೆಗಳು. ಕೆಂಪಗಿದ್ದ ಅವುಗಳನ್ನು ನಿಜವಾಗಿಯೂ ರಕ್ತ-ಬೆಂಕಿಗಳಿಂದ ಬರೆದ ಹಾಗಿತ್ತು. ಸೂರ್ಯನು ನೆತ್ತಿಯ ಮೇಲಿಂದ ಮುಂದಕ್ಕೆ ಜಾರಿದ್ದರೂ ಬಿಸಿಲು ಪ್ರಖರವಾಗಿಯೇ ಇತ್ತು. ಕಿರಣ... ಚಪ್ಪರದ ಬಿರುಕು-ಕಂಡಿಗಳೊಳಗಿಂದ ತೂರಿಬಂದು ಸಿಮೆಂಟು ಹಾಕಿದ ಅಂಗಳವನ್ನು ಸುಡುತ್ತಿದ್ದವು. ಹೊರಗೆ ಮರಳು ಬೆಚ್ಚಗಾಗಿದ್ದುದರಿಂದ ಜನಸಂಚಾರವಿರಲಿಲ್ಲ. ಎಲ್ಲರೂ ಮಧ್ಯಾಹ್ನದ ನಿದ್ರೆಯಲ್ಲಿರುವ ಸಮಯ. ಸಮುದ್ರರಾಜನ ಕಠೋರ ಗರ್ಜನೆಯೇನೋ ಒಂದೇ ಸಮನೆ ಕೇಳಿ ಬರುತ್ತಿತ್ತು. ಆದರೆ, ಅದರಲ್ಲೇನೂ ನವೀನತೆಯಿರಲಿಲ್ಲ. ಸುತ್ತಣ ಗೇರು ಮರದ ಕಾಡುಗಳು ಸೂರ್ಯನ ಬೆಂಕಿಗೆ ಸಂಪೂರ್ಣವಾಗಿ ಬೆಂದು ಹೋಗಿದ್ದವು. ಆದರೆ, ಲಲಿತೆಗೆ ಇದಾವುದರ ಪರಿವೆಯೇ ಇದ್ದ ಹಾಗಿರಲಿಲ್ಲ. ಸೂರ್ಯನ ಬೆಂಕಿಗಿಂತಲೂ ಬಲವಾದ ಬೆಂಕಿಯನ್ನು ಆ ಕೆಲೆಂಡರಿನ ಕೆಂಪು ಅಂಕೆಗಳು ಅವಳ ಹೃದಯದಲ್ಲಿ ಹೊತ್ತಿಸಿದ್ದವು. ನಾಲ್ಕುವರ್ಷದ ಹಿಂದಿನಿಂದ ಇಂದಿನ ತನಕ ನಡೆದ ಘಟನೆಗಳೆಲ್ಲಾ ಆ ಕೆಂಪು ಅಂಕೆಗಳಿಂದ ಉದ್ಭವಿಸಿ ಅವಳೆಡೆಗೆ ಸಾಗಿ ಬರುವಂತಿತ್ತು.

ಲಲಿತೆಯ ಮದುವೆಯು ನಡೆದುದು ಇಂಥದೇ ಒಂದು ಬೇಸಗೆಯಲ್ಲಿ. ಆ ಮದುವೆಯ ವಿಷಯವೇ ಒಂದು ದೊಡ್ಡ ರಾಮಾಯಣ. ಮದುವೆಯಾದುದು ಇಪ್ಪತ್ತನೇ ವಯಸ್ಸಿನಲ್ಲಾದರೂ, ಅವಳ ಹದಿನಾರನೇ ವರ್ಷ

ಪ್ರಾಯದಿಂದಲೇ ವರ ಶೋಧನೆ ನಡೆದಿತ್ತು. ಅವಳ ತಂದೆ ಗಣೇಶರಾಯರು ಹುಟ್ಟಿದುದು ಇದೇ ತಣ್ಣೀರುಭಾವಿಯಲ್ಲಾದರೂ, ತಮ್ಮ ತಾರುಣ್ಯವನ್ನೆಲ್ಲಾ ಹೆಚ್ಚಾಗಿ ಕಳೆದುದು ತೆಲಗು, ತಮಿಳು ಜಿಲ್ಲೆಗಳಲ್ಲಿ. ಆದುದರಿಂದಲೇ ಅವರಿಗೆ ಕನ್ನಡಕ್ಕಿಂತಲೂ, ತೆಲುಗು, ತಮಿಳುಗಳಲ್ಲಿ ಪಾಂಡಿತ್ಯ ಹೆಚ್ಚು. ಕೊನೆಗೆ ರಿಟೈರ್ ಆಗುವುದಕ್ಕೆ ನಾಲ್ಕು ವರ್ಷಗಳ ಮುಂಚೆ ಮಾತ್ರ, ಅವರಿಗೆ ಮಂಗಳೂರಲ್ಲಿ ಮುನ್ಸೀಫರಾಗಿ ನೇಮಕವಾಯಿತು. ಮಂಗಳೂರಲ್ಲೇ ಅವರಿಗೆ ಎರಡನೆಯ ಮಗುವಾಗಿ ಲಲಿತೆ ಹುಟ್ಟಿದಳು. ಮೊದಲನೆಯ ಮಗು ದಾಮೋದರನು ಇದಕ್ಕೆ ನಾಲ್ಕು ವರ್ಷಗಳ ಒಂದೆಯೇ ಕೊಯಮುತ್ತೂರಿನಲ್ಲಿ ಜನಿಸಿದ್ದನು.

ನ್ಯಾಯವಾಗಿ ನಾಲ್ಕು ವರ್ಷ ಕೆಲಸ ಮಾಡಬೇಕಾಗಿದ್ದರೂ, ಗಣೇಶರಾಯರು ಮಂಗಳೂರಲ್ಲಿ ಮುನ್ಸೀಫ್‌ಗಿರಿ ನಡೆಸಿದ್ದು ಮೂರುವರೆ ವರ್ಷ ಮಾತ್ರ. ಆ ಮೂರುವರೆ ವರ್ಷವಾದೊಡನೆ ತಾವು ಇದು ತನಕ ತೆಗೆದುಕೊಳ್ಳದೆ ಬಾಕಿಯಾಗಿದ್ದ ಆರು ತಿಂಗಳ ರಜೆಯನ್ನು ಒಮ್ಮೆಲೇ ಪಡೆದುಕೊಂಡು, ಮಂಗಳೂರಿನಿಂದ ತಮ್ಮ ಬಿಡಾರವನ್ನು ಹುಟ್ಟೂರಾದ ತಣ್ಣೀರುಭಾವಿಗೆ ರವಾನಿಸಿದ್ದರು. ಈಗ ಹೊಸತನದ ಗಾಳಿ ಎಲ್ಲೆಲ್ಲಿಯೂ ಬೀಸುತ್ತಿತ್ತು. ಹಳ್ಳಿಯವರೇ, 'ಇದು ಹಳ್ಳಿ' ಎಂಬ ತಾತ್ಸಾರದಿಂದ, ಇದನ್ನು ಮರೆತು, ಪೇಟೆ-ಪಟ್ಟಣಗಳಿಗೆ ವಲಸೆ ಹೋಗುವಾಗ, ಪಟ್ಟಣದಲ್ಲೇ ಇದ್ದ ಗಣೇಶರಾಯರು ಮಾತ್ರ ಇದಕ್ಕೆ ವಿರುದ್ಧವಾಗಿ ಹಳ್ಳಿಗೆ ಬಂದ ದನ್ನು ನೋಡಿ, ಎಲ್ಲರಿಗೂ ಆಶ್ಚರ್ಯ ! ತಮ್ಮೊಡನೆ ಕೇಳುವವರಿಗೇನೋ ರಾಯರು ಒಂದೊಂದು ರೀತಿಯಾಗಿ ಹೇಳುತ್ತಿದ್ದರು. 'ಮಂಗಳೂರು, ಮಂಗಳೂರು ಎನ್ನುತ್ತೀರಾ. ಅಲ್ಲಿಗೆ ಹೋದ ಮೇಲೆಯೇ ಅಲ್ಲಿಯ ಕಷ್ಟ ಗೊತ್ತಾಗಬೇಕು. ಮಂಗಳೂರು ಎಂಬ ಹೆಸರು ಮಾತ್ರವೇ ದೊಡ್ಡದು. ಈಗ ಎಲ್ಲರೂ ಈ ಹಳ್ಳಿಯನ್ನು ಬಿಟ್ಟು ಮಂಗಳೂರಿಗೆ ಹೋಗಿದ್ದಾರಲ್ಲಾ, ನಾಲ್ಕು ದಿನದಲ್ಲಿಯೇ ಮಂಗಗಳಂತಾಗಿ ಹಿಂದೆ ಬರಲಿಕ್ಕುಂಟು. ಏನು ಹೇಳುತ್ತೀರಿ? ಮಂಗಳೂರಲ್ಲಿ ಲಕ್ಷಾಧಿಪತಿಯಾಗಿದ್ದವನೂ ಕೂಡಾ ಒಂದು ತರಕಾರಿ ತೆಗೆದುಕೊಳ್ಳುವುದರಲ್ಲೇ ಭಿಕ್ಷಾಧಿಪತಿಯಾಗಿ ಬಿಡುತ್ತಾನೆ. ಎಷ್ಟು ಸಂಬಳ ವಿದ್ದವನಾದರೂ ಕೂಡಾ ಮನೆ ಬಾಡಿಗೆ ಕೊಡುವದರಲ್ಲೇ ಬೇಡಿ ತಿನ್ನಬೇಕಾಗುತ್ತದೆ. ಇನ್ನು ವಿಲಾಸವೋ, ಕೇಳಬೇಡಿ. ಅಲ್ಲಿಯ ಸೂಳೆಯ ಸೇಲೆಗೆ

ಎಂಥ ವಿರಕ್ತನಾದರೂ ಮರುಳಾಗಿ ಬಿಡುವುದೇ! ನಾನು ಮುನ್ಸೀಫನಾಗಿ ದ್ದವನೇ ಹೇಳುತ್ತೇನಲ್ಲಾ! ಕೋರ್ಟಿನಲ್ಲಿ ಬರುವ ಕೇಸುಗಳಲ್ಲಿ ಮುಕ್ಕಾಲು ಪಾಲು ಕೇಸುಗಳು ಇಂಥವೇ. ಸಾಲದ ವಸೂಲಿ, ಬಾಡಿಗೆ ವಸೂಲಿ, ಗಂಡ ಸೂಳೆಗೆ ಮಾರಿ ಹೋಗಿ, ತನ್ನ ಚಿನ್ನಾಭರಣವನ್ನು ಕಸಿಯುತ್ತಾನೆ, ಹೊಡೆ ಯುತ್ತಾನೆ, ಎಂಬ ದೂರು...................' 'ಅಯ್ಯೋ, ಮಹರಾಯರೇ! ಮಂಗಳೂರಿನ ವಿಷಯ ಕೇಳುತ್ತೀರಾ? It is a dirty hell! ಮಂಗಳೂರಲ್ಲಿ ಬೀದಿ, ಬೀದಿಗಳೂ ದೊಡ್ಡ ದೊಡ್ಡ ಹಾಸ್ಪತಲ್‌ಗಳಾಗಿ ಬಿಟ್ಟಿವೆ. ಚರಂಡಿಗಳಲ್ಲಿರುವ ಕೊಳೆ ನೀರಿನ ವಾಸನೆ ಬೀಸಿತೆಂದರೆ, ಆಕಾ ಶಕ್ಕೇ ಹಾರಿ ಬಿಡೋಣ, ಎಂದು ಕಾಣಿಸುತ್ತದೆ. ಇನ್ನು ಬೀದಿಗಳೋ, ಮೆಟ್ಟು ಹಾಕದೆ ಇಳಿಯುವುದಕ್ಕೇ ಇಲ್ಲ. ಎಲ್ಲೆಂದಿಲ್ಲ, ಸಿಕ್ಕಿ ಸಿಕ್ಕಿದಲ್ಲಿ ಎಂಜಲು ಹಾಳೆಗಳು, ತಾಂಬೂಲದ ಓಕುಳಿ, ಎಂಜಲು ಮುದ್ದೆ, ಕಫವರಾಶಿ, ಅಬ್ಬಬ್ಬಬ್ಬಬ್ಬ................! Hopeless, I say hopeless!'

ಇದನ್ನೆಲ್ಲಾ ಅವರ ಬಾಯಿಯಿಂದಲೇ ಕೇಳಬೇಕು. ಅಭಿನಯ ಪೂರ್ವಕವಾಗಿ ಅವರು ಹೇಳುವಾಗ ಒಂದು ನಾಟಕವನ್ನೇ ನೋಡಿದಂತಾಗು ತ್ತದೆ. ಮಂಗಳೂರನ್ನು ದೂರಿ ಹಲವು ಕಾರಣಗಳನ್ನು ಕೊಟ್ಟರೂ, ಗಣೇಶ ರಾಯರು ಆರೋಗ್ಯ ದೃಷ್ಟಿಗಿಂತಲೂ ಹೆಚ್ಚಾಗಿ, ಆರ್ಥಿಕ ದೃಷ್ಟಿಯಿಂದಲೇ ಹಳ್ಳಿಗೆ ಬಂದುದೆಂದು ನನ್ನ ಅಭಿಪ್ರಾಯ. ಮಂಗಳೂರಲ್ಲೇ ಆಗಲಿ, ತೆಲುಗು–ತಮಿಳು ನಾಡಿನಲ್ಲೇ ಆಗಲಿ, ಅವರು ಮುನ್ಸೀಫರಾಗಿದ್ದಾಗ, ತರಕಾರಿ ಮಾರ್ಕೇಟು ಯಾವ ದಿಕ್ಕಿನಲ್ಲಿದೆ ಎಂದು ಕೂಡಾ ನೋಡಿದವರಲ್ಲ. ತಮಗೆ ಕಾಣಿಕೆಯಾಗಿ ಬರುತ್ತಿದ್ದ ಗುಳ್ಳ, ಬದನೆ, ಸೌತೆಗಳಿಂದಲೇ ಎಲ್ಲ ವನ್ನೂ ಸುಧಾರಿಸಿಬಿಡುತ್ತಿದ್ದರವರು. ಹಳ್ಳಿಯಲ್ಲಾದರೆ ತಾವೇ ತರಕಾರಿ ಬೆಳೆ ಯಿಸಬಹುದೆಂದು ಅವರ ಆಲೋಚನೆ. ಹೋಟಲಿಗಂತೂ ಕಾಲಿರಿಸಿದವರಲ್ಲ ವೆಂದು ಅವರೇ ಹೇಳುತ್ತಾರೆ. ಬಟ್ಟೆ ತೆಗೆದುಕೊಳ್ಳುವುದರಲ್ಲಿ ಕೂಡಾ ಅವರು ಬಹಳ ಸೂಕ್ಷ್ಮ. ವರ್ಷಕ್ಕೆ ಎರಡು ಸೀರೆ, ಧೋತರ, ತೆಗೆದುಕೊಂಡು ಬಿಟ್ಟರೆ, ಪುನಃ ಏನಾದರೂ, ಮರುವರುಷ ಯುಗಾದಿಗೇ ಜವಳಿ ಅಂಗಡಿಗೆ ಕಾಲಿಡುವುದಷ್ಟೇ! ಅದರಲ್ಲಿ ಕೂಡಾ ಅಗ್ಗನಾದ ವಸ್ತ್ರಗಳನ್ನೇ ಆರಿಸಿ ತೆಗೆಯಬೇಕು. ಹಳ್ಳಿಯಲ್ಲಾದರೆ ಈ ಗಲಾಟೆಯೇ ಇಲ್ಲವಲ್ಲ, ಹೆಂಗಸರನ್ನು ಬಿಟ್ಟು ಎಷ್ಟು ದೊಡ್ಡ ಗಂಡಸರಾದರೂ, ಲಂಗೋಟಿ ಉಟ್ಟೇ ತಿರುಗಿದರೆ

ಕೇಳುವವರಾರು ಎನ್ನುತ್ತಾರೆ. ಇನ್ನು ವಿಲಾಸಕ್ಕೋ, ಅವರು ಒಂದು ಪೈ ಕೂಡಾ ಕೈ ಬಿಟ್ಟವರಲ್ಲ. ಊರಲ್ಲಿ ಏನಾದರೂ ಸಿನೆಮಾ, ನಾಟಕ ಬಂದರೆ ಕೊಂಪ್ಲಿಮೆಂಟರಿ ಪಾಸಿದ್ದರೆ ಮಾತ್ರವೇ ಅವರು ಹೋಗುವವರು. ಇಲ್ಲದಿದ್ದರೆ ಎಷ್ಟು ಉತ್ತಮ ಕನ್ನಡ-ತಮಿಳು ಚಿತ್ರಗಳೇ ಬರಲಿ, ಹಣ ವ್ಯಯಿಸಿ ಹೋದವರಲ್ಲ. ಹಾಗೆಂದು ಎಷ್ಟು ಹಾಳು ಚಿತ್ರವೇ ಆಗಲಿ, ಪಾಸಿದ್ದರೆ ಹೋಗದೆ ಬಿಟ್ಟವರಲ್ಲ. ಹೀಗೆ ಅವರ ಜಿಪುಣತನ-ಜಿಪುಣತನ ವಲ್ಲದಿದ್ದರೆ ಮಿತವ್ಯಯವಾಗಿರಬಹುದು—ದ ಕುರಿತು ಒಂದು ದೊಡ್ಡ ಸಂಪುಟವನ್ನೇ ಬರೆಯಬಹುದು. ಪಟ್ಟಣದಲ್ಲಿ ದಿನ ದಿನಕ್ಕೆ ಅಧಿಕವಾಗು ತ್ತಿರುವ ಫೇಶನ್ನಿನ ಧಾಳಿಯನ್ನು ನೋಡಿ, ಎಲ್ಲಿ ತಮ್ಮ ಮಕ್ಕಳೂ ಬೆಳೆದ ಮೇಲೆ ಇದಕ್ಕೆ ಬಲಿಬಿದ್ದು, ಖಜಾನೆಯ ಭಾರ ಕಡಿಮೆಯಾಗುತ್ತದೋ ಎಂದು ಅಂಜಿ, ತಮ್ಮ ರಥವನ್ನು ತಣ್ಣೀರುಭಾವಿಯಲ್ಲಿ ಊರಿ ನಿಂತು ಬಿಟ್ಟಿದ್ದರು.

ತಣ್ಣೀರುಭಾವಿ ಅವರ ಪಾಲಿಗೆ ಅಳಕಾಪುರಿಯೇ ಆಯಿತೆನ್ನಬೇಕು. ಬೇರೆ ಕೆಲಸವಿಲ್ಲದಿದ್ದುದಕ್ಕೆ ಇಲ್ಲಿಗೆ ಬಂದಮೇಲೆ ಬೇಸಾಯವನ್ನೂ ಅವರು ವಹಿಸಿಕೊಂಡರು, ಇದರಿಂದ ಆದಾಯ ವೃದ್ಧಿಯಾದುದಲ್ಲದೆ, ಮನಸ್ಸಿಗೆ ಸುಖಶಾಂತಿಯೂ ಲಭಿಸತೊಡಗಿತು ಪೆನ್ಶನ್ ಬಂದುದೆಲ್ಲಾ ನೆಲ ಖಜಾನೆ ಯೊಳಗೆ ಸೇರುತ್ತಿತ್ತು. ಅದರೊಂದಿಗೆ ಈ ಬೇಸಾಯದ ಆದಾಯವೂ ಸೇರಿ, ರಾಯರ ಮನೆಯಲ್ಲಿ ಒಂದು ದೊಡ್ಡ ಹಣದ ಹುತ್ತ ನಿರ್ಮಾಣ ವಾಯಿತು. ಮೇಲಾಗಿ ಸಮಯವನ್ನು ಬೇಸರವಿಲ್ಲದೆ ಹೋಗಲಾಡಿಸಲಿಕ್ಕೂ ಇದೊಂದು ದಾರಿ. ಸಮುದ್ರತೀರಕ್ಕೆ ಹೋಗಿ, ಚಿಪ್ಪುಗಳನ್ನು ಹೆಕ್ಕಿಯೇ ಕಾಲಹರಣ ಮಾಡಬೇಕೆಂದಿಲ್ಲ. ಹೊಲದ ಸುತ್ತು ತಿರುಗುತ್ತಾ, ಹೊಲಕ್ಕೆ ನುಗ್ಗಿ, ಬೆಳೆಯನ್ನು ಹಾಳು ಮಾಡುವ ಗೋವುಗಳನ್ನು ಅಟ್ಟಿ ಬಿಟ್ಟರಾಯಿತು.

ಹೀಗೆ ಏನೂ ಬದಲಾವಣೆಯಿಲ್ಲದೆ, ಏರು-ತಗ್ಗುಗಳಿಲ್ಲದೆ ಹತ್ತು-ಹದಿ ನಾರು ವರ್ಷ ಕಳೆಯಿತು. ಇಷ್ಟು ವರ್ಷವೂ ರಾಯರು ಹಣ ಕೂಡಿ ಹಾಕು ವುದರಲ್ಲಿ ಮನಸ್ಸಿಟ್ಟಿದ್ದರಲ್ಲದೆ, ಬೇಕಾದುದಕ್ಕಾಗಲೀ, ಬೇಡದುದಕ್ಕಾಗಲೀ, ಅದನ್ನು ವ್ಯಯಿಸುವ ಗೋಜಿಗೆ ಹೋಗಿರಲಿಲ್ಲ. ಆದರೆ, ಈಗ ದೊಡ್ಡ ಖರ್ಚಿನ ವಿಚಾರವೊಂದು ಬಂದೊದಗಿತು. ಮಗ ದಾಮೋದರನ ಕೊರಳಿಗೆ, ಬ್ರಾಹ್ಮಣರಾಗಿ ಹುಟ್ಟಿದ ಕರ್ಮಕ್ಕೆ ಒಂದು ಬಹ್ಮಗಂಟಿನ ನೂಲನ್ನು ತೊಡ

ಕಿಸಬೇಕಾಗಿ ಬಂತು. ಆಚಾರ್ಯರು, "ಏನು ರಾಯರೇ, ಹತ್ತೊಂಭತ್ತು ವರ್ಷವಾದರೂ ಇನ್ನೂ ನಿಮ್ಮ ಮಗನಿಗೆ ಉಪನಯನವಿಲ್ಲ! ನಿವೇನು ಜಾತಿ-ಗೀತಿ ಬಿಡುವ ಮನಸ್ಸಿದೆಯೇ?" ಎಂದು ಬೆದರಿಸಿದ್ದರು. ಆ ಬೆದರಿಕೆಗಾದರೂ ರಾಯರು ಉಪನಯನ ಮಾಡಬೇಕಾಗಿ ಬಂತು. ನೆಲ-ಖಜಾನೆಯಿಂದ ಒಮ್ಮೆಲೇ ಎರಡು-ಮೂರು ಸಾವಿರ ರೂಪಾಯಿ ಹೊರಗೆ ಬರಬೇಕಾಯಿತು.

ಒಂದು ಮುಂಜಾನೆ ಉಪನಯನ ನಡೆಯಿತು. ಅದಕ್ಕೆ ಬಂದ ಜನರ ಸಂಖ್ಯೆ ಸಾಧಾರಣ ನಾಲ್ಕೈದು ಸಾವಿರವಾಗಬಹುದು. ಮಂಗಳೂರಿನಿಂದ ರಾಯರ ಮಿತ್ರರೂ ಬಂದಿದ್ದರು, ಗ್ರಾಮದವರೂ ಬಂದಿದ್ದರು. ಅದೇ ಗ್ರಾಮದ 'ಕುಬೇರನ ತಂಗಿ' ಎಂದು ಹೇಳಿಸಿ ಕೊಳ್ಳಲ್ಪಡುತ್ತಿದ್ದ ಕಮಲಮ್ಮನವೂ ಬರೋಣವಾಗಿತ್ತು. ಅವಳೇನು, ಹಾಗೆ ಊರಲ್ಲಾದ ಮದುವೆ-ಮುಂಜಿಗಳಿಗೆಲ್ಲಾ ಹೋಗುವವಳಲ್ಲ. ಆದರೆ, ರಾಯರ ಗೃಹಿಣಿ ಸುಶೀಲೆ ಬಹಳ ಒತ್ತಾಯ ಮಾಡಿದುದರಿಂದ ಬಂದಿದ್ದಳು. ಅವಳೀಗ ಗ್ರಾಮದಲ್ಲಿ ಸ್ವಲ್ಪ ಪ್ರಸಿದ್ಧ ವ್ಯಕ್ತಿ. ಅವಳ ಗಂಡ ಜೀವಿಸಿದ್ದ ಕಾಲದಲ್ಲಿ, ಏನೋ ಸರ್ಕಸ್-ಗಿರ್ಕಸ್ ಸೇರಿ ಬಹಳ ಹಣ ಮಾಡಿದ್ದನಂತೆ. ಮಗ ರತ್ನಾಕರನು ಕೂಡಾ ಏನು ನಾಲ್ಕು ಕ್ಲಾಸ್ ಪಾಸು ಮಾಡಿದ ಆಸಾಮಿಯಲ್ಲವಾದರೂ, ಈಗ ಮುಂಬಯಿಗೆ ಹೋಗಿ ದೊಡ್ಡ ಧೊರೆಯಾಗಿದ್ದಾನೆ. ಇದರಿಂದ ಧನದಿಂದ ಬರಬಹುದಾದ ಅಹಂಕಾರ, ಮೈ, ಗರ್ವ, ಎಲ್ಲಾ ಕಮಲಮ್ಮನಿಗೂ ಬಂದಿತ್ತು.

ರತ್ನಾಕರನಿಗೀಗ ಮದುವೆಯ ವಯಸ್ಸಂತೆ; ಪ್ರಾಯ ಕೇಳಿದರೆ ಸಾಧಾರಣ ಇಪ್ಪತ್ತು-ಇಪ್ಪತ್ತೆರಡಾಗಿರಬಹುದು. ಪ್ರಾಯ ಹಾಗೇನೂ ಮೀರಿ ಹೋಗಿರದಿದ್ದರೂ, ಗಡ್ಡ-ಮೀಸೆ ಹುಲುಸಾಗಿ ಬೆಳೆಯುವಷ್ಟರ ಮಟ್ಟಿಗೆ ದೊಡ್ಡವ. ಅವನಿಗೀಗ ಹುಡುಗಿಯನ್ನು ಹುಡುಕುವ ಭಾರ ಕಮಲಮ್ಮನ ಮೇಲಿತ್ತು. ಈ ಎರಡು ವರ್ಷಗಳಿಂದಲೂ, ಎಷ್ಟು ಪ್ರಯತ್ನಪಟ್ಟರೂ, ಒಂದಾದರೂ ಹುಡುಗಿ ದೊರೆತಿರಲಿಲ್ಲ. ಹಾಗೆಂದು ಊರಲ್ಲಿ ಹುಡುಗಿಯರಿಗೇನು ಬರಗಾಲವಿಲ್ಲ. ಆದರೆ, ಶ್ರೀಮಂತರ ಮಕ್ಕಳಿಲ್ಲ. ಹಾಗೆಲ್ಲಾ ಬಡವರ, ಭಿಕಾರಿಗಳ ಮಕ್ಕಳನ್ನು ಸೊಸೆಯೆಂದು ತಂದುಕೊಳ್ಳುವುದು ಕಮಲಮ್ಮನಿಗೆ ಇಷ್ಟವಿರಲಿಲ್ಲ. ತನ್ನ ತ್ರಾಸಿನ ತೂಕಕ್ಕೆ ಸರಿಯಾಗಿದ

ಬೇಕು. ಅಂಥವರನ್ನು ಹುಡುಕುವುದರಲ್ಲಿಯೇ ಅವಳೀಗ ತನ್ಮಯಳಾಗಿದ್ದಳು.

ತಂದೆ, ತಾಯಿಗಳಿಗರಿಯದಿದ್ದರೂ, ಲಲಿತೆ ಚೆನ್ನಾಗಿ ಬೆಳೆದು ನಿಂತು ಬಿಟ್ಟಿದ್ದಳು. ಸೌಂದರ್ಯವೂ ಬಂದು ಜೇರೆ ಸೇರಿಕೊಂಡಿತ್ತು. ಈ ಉಪನಯನದ ದಿನ ನಗು ನಗುತ್ತಾ ಅವಳು ಆಚೀಚೆ ಸುಳಿಯುತ್ತಿರುವಾಗ ಕಮಲಮ್ಮನ ಹುಡುಕುವ ಕಣ್ಣುಗಳಿಗೆ ಸಿಕ್ಕಿಬಿದ್ದಳು. ಕಮಲಮ್ಮನಿಗೆ, ಅವಳು ಯಾರೆಂದು ತಿಳಿಯುವ ತವಕವುಂಟಾಯಿತು. ಸುಶೀಲೆಯನ್ನೇ ಕರೆದು ಕೇಳಿದಳು;

" ಅದು, ಯಾರಮ್ಮಾ, ಆ ಹುಡುಗಿ? "

" ಅಯ್ಯೋ! ಅದೂ ಗೊತ್ತಿಲ್ಲವೇ? ನನ್ನ ಮಗಳು; ಲಲಿತೆ. "

" ಮದುವೆಯಾಗಿದೆಯೇ? "

" ಇನ್ನೂ ಚಿಕ್ಕವಳು. "

" ಎಷ್ಟಾಗಬಹುದು, ಪ್ರಾಯ? "

" ಹದಿನಾರು! "

" ಏನಮ್ಮಾ, ಇದು! ಪ್ರಾಯ ಹದಿನಾರು ಆಯಿತೆನ್ನುತ್ತೀರಿ. ಆದರೂ ಚಿಕ್ಕವಳೆನ್ನುತ್ತೀರಿ. ಬಹಳ ಚೆನ್ನಾಗಿದೆ ನಿಮ್ಮ ಮಾತು.........

ಇನ್ನೂ ಏನು ಹೇಳುತ್ತಿದ್ದಳೋ, ಆದರೆ ಸುಶೀಲೆಯನ್ನು ಯಾರೋ ಕರೆದುದರಿಂದ ಅವಳು ಅಲ್ಲಿಂದ ಹೊರಟು ಹೋದಳು.

ಕಮಲಮ್ಮನ ಮಾತುಗಳಿಂದ ಸುಶೀಲೆಯ ಹೃದಯದಲ್ಲಿ ವಿಚಾರದ ಕಿಡಿ ಉದ್ಭವವಾಯಿತು. ಇನ್ನು ಊರಲ್ಲೆಲ್ಲಾ ಇದೇ ಸುದ್ಧಿಯಾಗುತ್ತೋ ಏನೋ ಎಂದು ಅಂಜಿಕೆಯಾಯಿತು. ಅದೇ ರಾತ್ರಿ ಗಂಡನೊಡನೆ ಹೇಳಿದಳು: "ನಿಮಗೇನು, ಲಲಿತೆಗೆ ಮದುವೆ ಮಾಡುವ ಆಲೋಚನೆಯಿಲ್ಲವೇ?"

" ಏಕಿಲ್ಲ; ಲಲಿತೆಯೇನು ಸನ್ಯಾಸಿನಿಯ ವ್ರತ ಹಿಡಿಯಲಿಲ್ಲ. "

" ಮತ್ತೆ ವರ ಶೋಧನೆ ಏಕೆ ಮಾಡುತ್ತಾ ಇಲ್ಲ? "

" ಅಯ್ಯೋ! ಹುಚ್ಚೀ! ಲಲಿತೆ ಇನ್ನೂ ಚಿಕ್ಕವಳು! "

" ಚಿಕ್ಕವಳೇ ಸರಿ; ಊರಲ್ಲೆಲ್ಲಾ ಏನು ಹೇಳುತ್ತಾರೆ, ಗೊತ್ತೇ? "

" ಏನು ಹೇಳುತ್ತಾರೆ? "

" ಹದಿನಾರು ವರ್ಷದ ಹುಡುಗಿ ಚಿಕ್ಕವಳೇ? ಬಹಳ ಚೆನ್ನಾಗಿದೆ ಎಂತ. "

" ಊರಲ್ಲಿ ಸಾವಿರ ಹೇಳುತ್ತಾರೆ. ಹಾಗೆಂದು ನಾವು ಸಾಯಲಿಕ್ಕಾಗುತ್ತದೆಯೇ? ಹೇಳು! ನೀನು ಸುಮ್ಮನಿರು. "

ಆದರೆ, ರಾಯರ ಉಪದೇಶ ಪ್ರಯೋಜನವಾಗಲಿಲ್ಲ. ಮರುದಿನ ಸಾಜೆ ಹೊಲದಿಂದ ಹಿಂದೆ ಮರಳುವಾಗ ಅವರೂ ಮ್ಲಾನವದನರಾಗಿಯೇ ಬಂದರು. ದಾರಿಯಲ್ಲಿ ಸಂಧಿಸಿದ ಅವರ ಸ್ನೇಹಿತರೊಬ್ಬರು, " ಏನಯ್ಯಾ, ಗಣೇಶರಾಯರೇ ! ಹದಿನಾರು ವರ್ಷ ಪ್ರಾಯದ ನಿಮ್ಮ ಮಗಳನ್ನು ಚಿಕ್ಕವಳು ಎಂದರಂತೆ ನಿಮ್ಮ ಹೆಂಡತಿ. ಹಾಗಾದರೆ ಇನ್ನು ಗಡ್ಡ-ಮೀಸೆ ಬೆಳೆದ ಮುದುಕರನ್ನೂ ಕೂಸೆಂದು ಕರೆಯಬಹುದು. " ಎಂದು ಹಾಸ್ಯ ಮಾಡಿದರು.

ಗಣೇಶರಾಯರಿಗೆ ಲಲಿತೆಯ ಮದುವೆಯ ಚಿಂತೆ ಸುರುವಾಯಿತು. ಮಂಗಳೂರಲ್ಲಿರುವ ತಮ್ಮ ರಾವ್ ಬಹಾದ್ದೂರ್, ದಿವಾನ್ ಬಹಾದ್ದೂರ್ ಮಿತ್ರರಿಗೆಲ್ಲಾ ತಮ್ಮ ಮಗಳಿಗೆ ವರ ಶೋಧನೆ ಮಾಡುವಂತೆ ಬಿನ್ನವಿಸಿಕೊಂಡರು. ಅವರೂ, 'ನೋಡೋಣ, ನೋಡೋಣ' ಎಂದರು. ಆದರೆ, ಅದರಲ್ಲೆಲ್ಲಾ ನಂಬಿಕೆಯಿಡುವಂತಿರಲಿಲ್ಲ. ಮದುವೆಯೆಂಬುದು ಮನೋಭವನ ಕಾರ್ಯಕ್ಕಿಂತಲೂ, ಕಮಲಭವನ ಕಾರ್ಯವೆಂದೇ ಹೆಚ್ಚು ನಂಬಿದ್ದ ಗಣೇಶರಾಯರು, ಬ್ರಹ್ಮ ಲಲಿತೆಗೆ ಗಂಡನನ್ನು ಎಲ್ಲಿ ಸೃಷ್ಟಿಸಿದ್ದಾನೋ ಎಂದು ಹಗಲಿರುಳೂ ಚಿಂತಿಸತೊಡಗಿದರು. ಎಲ್ಲಿ ಹುಡುಕಲಿ? ಎಂದು ಚಿಂತೆಗೆ ಮೊದಲಾಯಿತು. ಚಿಂತೆಯಿಂದ ಅನ್ನಾಹಾರ ಸೇರದಾಯಿತು.

ಕೆಲವು ದಿನಗಳು ಕಳೆದುವು.

ಅಕಸ್ಮಾತ್ತಾಗಿ ಒಂದು ದಿನ ಸುಶೀಲೆಗೆ, ಕಮಲಮ್ಮ ದಾರಿಯಲ್ಲಿ ಸಂಧಿಸಿದವಳು, ನಿಂತು ಮಾತನಾಡಿಸಿದಳು;

" ಏನಮ್ಮ ! ಎಲ್ಲಾ ಸೌಖ್ಯವೇ? "

ಊರಲ್ಲಿ ತಮ್ಮ ಕುರಿತು ಏನೇನೆಲ್ಲಾ ಸುದ್ದಿ ಹಬ್ಬಿಸಿದ ಅವಳೊಡನೆ ಸರಿಯಾಗಿ ಮಾತನಾಡುವ ಮನಸ್ಸಿರಲಿಲ್ಲ ಸುಶೀಲೆಗೆ.

" ಸೌಖ್ಯ " ಎಂದು ಹೊರಡಲನುವಾದಳು.

" ತಡೆಯಿರಿ ; ನಾನೊಂದು ಹೇಳುತ್ತೇನೆ. ಆದರೆ, ನೀವೇನೂ ತಿಳಿದುಕೊಳ್ಳಬಾರದು. "

" ಇಲ್ಲ; ಹೇಳಿ. "

“ ನಿಮ್ಮ ಮಗಳನ್ನು ನನ್ನ ಮಗನಿಗೆ ತಂದುಕೊಳ್ಳಬೇಕೆಂದು ನನ್ನ ಆಶೆ.”

“ ಆಂ; ನಿಜವೇ? ”

“ ನಿಜವಲ್ಲದೆ ಮತ್ತೆ? ಸುಮ್ಮ ಸುಮ್ಮನೆ ಹೇಳುವ ಅಭ್ಯಾಸವೇ ನನಗಿಲ್ಲ. ನೀವು ನಿಮ್ಮ ಮಗಳೊಡನೆಯೂ, ಯಜಮಾನರೊಡನೆಯೂ ವಿಚಾರಿಸಿ, ಅವರ ತೀರ್ಮಾನವನ್ನು ನನಗೆ ತಿಳಿಸಿ. ಮುಂದೆ ನೋಡೋಣ. ”

ಈ ವಿಚಾರವನ್ನು ಕೇಳಿ ಗಣೇಶರಾಯರು, “ ನಾನು ಒಲ್ಲೆ ಎನ್ನುವುದುಂಟೇ? ” ಎಂದರು. ಲಲಿತೆಯೂ “ಹೂಂ!” ಎಂದಳು. ಜೋಯಿಸರು ದಕ್ಷಿಣೆ ತೆಗೆದುಕೊಂಡು ಜಾತಕವನ್ನು ಕೂಡಿಸಿಬಿಟ್ಟರು, ಕಮಲಮ್ಮನಿಂದ ರತ್ನಾಕರನಿಗೆ ಮುಂಬಯಿಗೆ ಕಾಗದ ಹೋಯಿತು.

ರತ್ನಾಕರನಿಗೂ ಮದುವೆಯಾಗುವ ಮನಸ್ಸು ; ತನಗೆ ಮದುವೆಯಾಗಬಹುದಾದ ಪ್ರಾಯ ಎಂದು ಅವನಿಗೆ ತಿಳಿದಿತ್ತು. ಸಿನೆಮಾಕ್ಕೆ ಹೋಗುವಾಗ, ಅಡ್ಡಾಡ ಹೋಗುವಾಗ, ಪಾರ್ಕಿನಲ್ಲಿ ಸುಳಿಯುವಾಗ, ಬೀಚಿನಲ್ಲಿ, ಎಲ್ಲಿ ಹೋದರೂ ತನ್ನ ಪ್ರಾಯದವರೆಲ್ಲ ಇಬ್ಬರಾಗಿಯೇ ಬರುವುದನ್ನು ನೋಡಿಯೇ ಅವನಿಗೆ ಮದುವೆಯಿಲ್ಲದ ಬಾಳು ವ್ಯರ್ಥ ಎಂದೆನಿಸಲು ಕಾರಣ. ಅಗ್ನಿಯ ಮುಂದೆ ಕೈ ಹಿಡಿವ ಹೆಂಡತಿಯಲ್ಲದಿದ್ದರೂ, ಆ ಮದುವೆಯಾದ ಹೆಂಡತಿಯು ಕೊಡುವ ಸುಖವನ್ನೇ ಕೊಡುವ ಮುಂಬಯಿಯ ಮಹಿಳೆಯರ ಕಡೆಗೆ ಹೋಗಬೇಕೆಂದು ಒಂಟಿ ಜೀವನದಿಂದ ಬೇಸತ್ತ ಅವನು ಎಷ್ಟೋ ಬಾರಿ ಆಲೋಚಿಸಿದರೂ, ಅವನ ವಿವೇಕ ಅವನನ್ನು ಎಚ್ಚರಿಸಿತ್ತು. ತಾಯಿಯ ಕಾಗದವನ್ನು ನೋಡಿ ಅವನಿಗೆ ದುಃಖವಾಯಿತೆಂದು ಹೇಳುವುದು ಹುಚ್ಚುತನವಾದೀತು. ಅವನ ಪತ್ರ ತಾಯಿಗೆ ತಲುಪಿತು; “ ಮದುವೆಯಾಗುವುದಕ್ಕೇನೂ ಅಭ್ಯಂತರವಿಲ್ಲ. ಆದರೆ, ಇದು ನಿಮ್ಮ ಹಳೆಯ ಕಾಲವಲ್ಲ; ಹೊಸಕಾಲ. ನೀವು ನೋಡಿ ಚುನಾಯಿಸಿದ ಹುಡುಗಿ ನನಗೆ ಬೇಡ. ನಾನೇ ನೋಡಿ ‘ ಛೂಸ್ ’ ಮಾಡಬೇಕು. ” ಕಮಲಮ್ಮ, “ ಆಗಲಿ! ” ಎಂದು ಉತ್ತರ ಬರೆದಳು. “ ಆದಷ್ಟು ಶೀಘ್ರದಲ್ಲಿ ರಜೆ ತೆಗೆದುಕೊಂಡು ಊರಿಗೆ ಬರಲಾದೀತು. ” ಎಂದು ಮರುಟಪ್ಪಾಲು ಬಂದಿತು.

ಒಂದು ತಿಂಗಳ ಮೇಲೆ ಫುಲ್ ಸೂಟಿನಲ್ಲಿ, ಸಿಗರೇಟು ಪೆಕೇಟುಗಳನ್ನು ಖಾಲಿ ಮಾಡುತ್ತಾ, ಹೇಗೂ ರತ್ನಾಕರನ ಮೂರ್ತಿ ಊರಿಗೆ

ಬಂದಿತು. ಮದುವೆಯಾಗುವುದಕ್ಕೆಂದೇ ಮೂರು ತಿಂಗಳ ರಜೆ ಪಡೆದು ಕೊಂಡು ಬಂದಿದ್ದನು. ಮನೆಗೆ ಬಂದ ಮರುದಿನದಿಂದಲೇ ಅವನಿಗೆ ಹುಡುಗಿಯನ್ನು ನೋಡುವ ತವಕವುಂಟಾಯಿತು.

" ನಾವೇ ಅಲ್ಲಿಗೆ ಹೋಗೋಣವೇನು? " ಎಂದು ಕಮಲಮ್ಮ ಕೇಳಿದಳು.

ರತ್ನಾಕರನಿಗೆ ಅದು ನಾಚಿಕೆಯೆಂದು ತೋರಿದ್ದರಿಂದ "ಬೇಡ"ವೆಂದ.

" ಹಾಗಾದರೆ ಅವರನ್ನೇ ಇಲ್ಲಿಗೆ ಬರಹೇಳಲೇನು? "

" ಹೂಂ! " ಎಂದ.

" ಹಾಗಾದರೆ, ನಾಳೆ ಬರುವಂತೆ ಹೇಳುತ್ತೇನೆ. "

ರತ್ನಾಕರ ಗಡಿಬಿಡಿಯಿಂದ " ಬೇಡವಮ್ಮಾ! " ಎಂದ.

" ಏನೋ, ಇದು. ಹುಚ್ಚನ ಹಾಗೆ ಮಾಡುತ್ತೀ! "

" ಹಾಗಲ್ಲವಮ್ಮಾ, ಹುಡುಗಿಯನ್ನು ನೋಡಲೆಂದು ಹೋಗುವುದು ನಾಚಿಕೆ. ಹಾಗೆಯೇ ಹುಡುಗನನ್ನು ನೋಡಲೆಂದು ಬರುವುದೂ ನಾಚಿಕೆ. ನೋಡು, ನೀನು ಹೀಗೆ ಮಾಡು. ನಾಡದು ಅಪ್ಪನ ಶ್ರಾದ್ಧವಲ್ಲವೇ? ಅವರನ್ನು ಊಟಕ್ಕೆ ಬರಹೇಳು. ಊಟಕ್ಕೆಂದೇ ಬರಲಿ. ಆಗ ಪರಸ್ಪರ ನೋಡಿ ಕೊಳ್ಳಬಹುದು. "

" ಭೇಷ್ ಉಪಾಯ! " ಎಂದು ಕಮಲಮ್ಮ ಹಾಗೆಯೇ ಮಾಡಿದಳು.

ಕಮಲಮ್ಮ ಊಟಕ್ಕೆಂದೇ ಬರಹೇಳಿದರೂ, ಇದು ಹುಡುಗಿಯನ್ನು ನೋಡಲು ಹೂಡಿದ ಉಪಾಯವೆಂದು ಗಣೇಶರಾಯರಿಗೂ ಸುಶೀಲೆಗೂ ಹೊಳೆಯದೆ ಇರಲಿಲ್ಲ. ಅವರು ತೆಳ್ಳಗಿನ ದೇಹದ ಅವಳಿಗೆ, ಅವಳು ಹೊರಲಾರದಂಥ, ಭಾರವಾದ ಜರಿಸೀರೆಯನ್ನುಡಿಸಿದರು. ತಲೆಗೂದಲು, ಹೆಸರಿಗೂ ಕಾಣಬಾರದು ಎಂಬಂತೆ ಜಲ್ಲಿ ಮುಡಿಸಿದರು. ಸುಶೀಲೆಯ ಆಭರಣಗಳು ಸಾಲದೆಂದು, ಊರ ಇತರ ಹೆಂಗಸರ ಆಭರಣವನ್ನೂ ಎರವಲಾಗಿ ತರಲಾಯಿತು. ಮುಖಕ್ಕೆ ಪವುಡರ್, ತುಟಿಗೆ ಲಿಪ್-ಸ್ಟಿಕ್ ಹಚ್ಚದಿದ್ದರೂ, ಬಟ್ಟಲಂಥ ಕುಂಕುಮವನ್ನು ಹಚ್ಚಗಿಡಲು ಮರೆಯಲಿಲ್ಲ. ಹೀಗೆ ವಿಚಿತ್ರವಾಗಿ, ಭೂತಶೃಂಗಾರ ಮಾಡಿ, ಅವಳನ್ನು ಕರೆದುಕೊಂಡು ಹೋದರು.

ಲಲಿತೆಯನ್ನು ರತ್ನಾಕರನಿಗೆ ಚೆನ್ನಾಗಿ ಪರೀಕ್ಷಿಸಿ ನೋಡಲು ಅನುಕೂಲವಾಗಲೆಂದು ಒಂದು ಪ್ರತ್ಯೇಕ ಕೋಣೆಯಲ್ಲಿ ಕುಳ್ಳಿರಿಸಿದರು. ರತ್ನಾಕರನಿಗೆ ಆ ಕೋಣೆಯೊಳಗೆ ಹೋಗಲೂ ತುಂಬಾ ನಾಚಿಕೆಯಾಯಿತು. ಆದರೂ

ಬಹಳ ಪ್ರಯತ್ನದಿಂದ ಲಜ್ಜೆಯನ್ನು ಬದಿಗೊತ್ತಿ ಹೇಗೂ ಒಮ್ಮೆ ಕೋಣೆಯೊಳಗೆ ಹೋದ. ಒಮ್ಮೆ ಹೋದುದೇ ಸರಿ, ಮತ್ತೆ ಹೋಗಲಿಲ್ಲ. ಆಗಲೇ ಅವನ ಮೋರೆ ಮೋಡ ಮುಸುಕಿದ ಚಂದ್ರನಂತಾಗಿ ಬಿಟ್ಟಿತ್ತು.

ಊಟವಾಗಿ ಎಲ್ಲರೂ ತಂತಮ್ಮ ಮನೆಗಳಿಗೆ ಹೋದ ಮೇಲೆ, ತಾಯಿ ಮಗನನ್ನು ಕರೆದು ಕೇಳಿದಳು;

" ಏನೋ, ಹುಡುಗಿಯನ್ನು ನೋಡಿದೆಯೋ? ಅಥವಾ, ನಾಚಿಕೆಯಿಂದು ಸುಮ್ಮನೆ ಕುಳಿತೆಯೋ? "

" ಅಮ್ಮಾ, ನಿನ್ನ ವರ್ಣನೆಯನ್ನು ಕೇಳಿ ನಾನು ಹುಚ್ಚಾಗಿದ್ದೆ. ಈಗ ನೋಡಿದರೆ ಸುಳ್ಳು ಹೇಳುವುದರಲ್ಲಿ ನಿನಗೂ ಚೆನ್ನಾಗಿ 'ಸರ್ವಿಸ್' ಆಗಿದೆಯೆಂದು ಕಾಣುತ್ತದೆ. "

" ಅದೇನು? ಹುಡುಗಿ ಚೆನ್ನಾಗಿಲ್ಲವೇ? ಒಳ್ಳೇ ಸುಂದರಿ; ಒಳ್ಳೆ ಬೆಳವಣಿಗೆ! "

" ರೂಪ, ಎತ್ತರವನ್ನು ಹೇಳುವದಲ್ಲವೇ ನೀನು? ಆಲ್ ರೈಟ್! ಒಪ್ಪುತ್ತೇನೆ. ಆದರೆ, ಅವಳ ಮೈಕಟ್ಟು, ದೇಹವನ್ನು ಪರೀಕ್ಷಿಸಿದ್ದಿಯಾ! ಈಗ ತಾನೇ ಹುಟ್ಟಿದ ಮಗುವೂ ಅವಳಿಂದ ತೋರವಾಗಿದ್ದೀತು. A shameful body! "

" ಗಣೇಶರಾಯರು ತುಂಬಾ ಶ್ರೀಮಂತರು............ "

" ಇರಬಹುದು; ನಾವೇನು ಕಡಿಮೆ ಶ್ರೀಮಂತರೇ? ಅವರ ಶ್ರೀಮಂತಿಕೆಯಿಂದ ನಮಗೇನಾಗಬೇಕು? ಅವಳನ್ನು ಮದುವೆಯಾಗುವುದು ಬಿಲ್‌ಕುಲ್ ಸಾಧ್ಯವಿಲ್ಲ. ಎಲ್ಲಿಯಾದರೂ ಆದರೆ, ನನ್ನ ಸಂಬಳವನ್ನೆಲ್ಲಾ ಅವಳಿಗೆ ವಿಟಮಿನ್, ಟಾಮೆಟೊ, ಕಾಡ್‌ಲಿವರ್ ಆಯಿಲ್, ವಾಟರ್ ಬರೀಸ್ ಕಂಪೌಂಡ್ ತೆಗೆದು ಕೊಡಲಿಕ್ಕೇ ಬೇಕಾದೀತು. ಬೇಡವೇ ಬೇಡ ಈ ಮಲಾಮತ್ತು. " ಎಂದು ಮುಂಬಯಿಗೆ ಹೊರಟು ಹೋದನು.

ರತ್ನಾಕರ ಮುಂಬಯಿಗೆ ಹೊರಟು ಹೋದನೆಂಬ ವಾರ್ತೆ ಗಣೇಶರಾಯರಿಗೂ ತಿಳಿಯಿತು. ಹಾಗಾದರೆ ಮದುವೆಯ ವಿಚಾರವೇನು........? ಸುಶೀಲೆ ಕಮಲಮ್ಮನ ಮನೆಗೆ ಹೋಗಿ ಕೇಳಿದಳು. ಕಮಲಮ್ಮ ಮುಖ ಸೊಟ್ಟಗೆ ಮಾಡಿಕೊಂಡು, " ಏನೋಮ್ಮಾ! ಏನೂ ಹೇಳದೆ ಮುಂಬಯಿಗೆ ಹೊರಟು ಹೋದ. " ಎಂದಳು. ಆಗ ಸುಶೀಲೆಗೆ ಗೊತ್ತಾಯಿತು, ಇದು

ಮದುವೆ ಆಗುವಂತಿಲ್ಲವೆಂದು.

ಗಂಡ-ಹೆಂಡಿರಿಬ್ಬರಿಗೂ ಕಳೆದ ಚಿಂತೆ ಪುನಃ ಪ್ರಾರಂಭವಾಯಿತು. ಇದರೊಂದಿಗೇ ರತ್ನಾಕರನು ಲಲಿತೆಯ ದೇಹವನ್ನು ಹಾಸ್ಯ ಮಾಡಿ ಹೋದ ನೆಂಬುದೂ ಅಲ್ಲಲ್ಲಿ ಕೇಳಬರತೊಡಗಿತು. ಮೊದಲೇ ಇದ್ದ ಚಿಂತೆ ಇನ್ನೂ ಗಾಢವಾಯಿತು. ರಾಯರು ವರದಕ್ಷಿಣೆಯ ಆಸೆಯನ್ನು ಹುಟ್ಟಿಸಿದರು. ಪೇಪರುಗಳನ್ನು ಒಂದೂ ಬಿಡದೆ ಜಾಹೀರಾತು ಕೊಟ್ಟರು. ಆದರೆ, ಏನೂ ಸಫಲತೆಯುಂಟಾಗಲಿಲ್ಲ.

ಈಗೀಗ ಲಲಿತೆಯ ಮದುವೆಯ ಚಿಂತೆ ರಾಯರನ್ನು ಬಹಳವಾಗಿ ಬಾಧಿಸತೊಡಗಿವೆ. ಚಿಂತೆಯೇ ಅವರಿಗೆ ಮುಪ್ಪಾಗಿದೆ. ಸಂಧ್ಯಾ ಸಮಯ ದಲ್ಲಿ ಹೊಲದ ಕಡೆಗೆ ಸುಳಿಯುವುದನ್ನು ಅವರು ಬಿಟ್ಟಿದ್ದಾರೆ. ಇದಕ್ಕೆ ವಯೋಧಿಕ್ಯವು ಸ್ವಲ್ಪಮಟ್ಟಿಗೆ ಕಾರಣವಾದರೂ, ಲಲಿತೆಯ ಮದುವೆಯ ಚಿಂತೆಯೇ ಬಹಳ ಮಟ್ಟಿಗೆ ಕಾರಣವಾಗಿತ್ತು. ಸ್ವಂತ ಬೇಸಾಯವನ್ನಂತೂ ಅವರು ಬಿಟ್ಟು ಒಂದು ವರ್ಷವಾಗಿದೆ. ಸಂಜೆ ಸಮಯದಲ್ಲಿ ಛಾವಡಿಯಲ್ಲಿ ಕುಳಿತುಕೊಂಡು ಗಗನವನ್ನು ನೋಡತೊಡಗಿದರೆ, ಎಲ್ಲಿಲ್ಲದ ಚಿಂತೆ ಬಂದು ಅವರನ್ನು ಕಾಡುತ್ತಿತ್ತು. ಆ ಎಲ್ಲಾ ಚಿಂತೆಯೂ ಲಲಿತೆಯ ಮದುವೆಯ ಚಿಂತೆಯೆ! ಸಶೀಲೆಯೂ ಬಳಿಯಲ್ಲೇ ಕುಳಿತುಕೊಂಡಿರುತ್ತಿದ್ದರೂ, ಅವಳಿ ಗೇನೂ ನುಡಿಯುವ ಧೃತಿಯಾಗುತ್ತಿರಲಿಲ್ಲ. ಇದೇ ರೀತಿಯಾಗಿ ಒಂದು ವರ್ಷ ಕಳೆದಿದೆ. ಇನ್ನೊಂದು ವರ್ಷ ಕಳೆಯುವುದರಲ್ಲಿದೆ.

ಕೊನೆಗೊಂದು ದಿನ ಸುಶೀಲೆ ಧೈರ್ಯ ತಂದುಕೊಂಡು ಕೇಳಿಯೇ ಬಿಟ್ಟಳು;

" ಇನ್ನೆಷ್ಟು ಸಮಯ ಹೀಗೆ ಸುಮ್ಮನೆ ಕುಳಿತುಕೊಳ್ಳುವುದು? "

" ಬ್ರಹ್ಮನಿಗೆ ಕರುಣೆ ಮೂಡುವ ತನಕ, ನಾನೇನು ಮಾಡಬೇಕೆನ್ನುತ್ತೀ ನಾನು ಮಾಡಿದ ಪ್ರಯತ್ನವೇನು ಅಲ್ಪಸ್ವಲ್ಪವೇ? "

" ಸುಮ್ಮನೆ ಕುಳಿತುಕೊಂಡರೆ ವರನೆಲ್ಲಿ ದೊರೆಯುತ್ತಾನೆ? ಬೇರೆ ಕಡೆಗೆ ಹೋಗಿಯಾದರೂ ನೋಡಬಹುದಿತ್ತು! "

" ನನಗೆ ಈ ಪ್ರಾಯದಲ್ಲಿ ಹಾಗೆಲ್ಲಾ ಹೋಗಲು ಸಾಧ್ಯವೇ? "

" ದಾಮುವನ್ನಾದರೂ ಕಳುಹಿಸಬಾರದೇ? "

" ಅವನಿಂದೇನಾದೀತು? ಅವನು ತೀಟು ದಡ್ಡ! "

ಆ ಬಳಿಕ ಯಾರೂ ಬಾಯಿತ್ತಲಿಲ್ಲ. ಕತ್ತಲೆ ಸಾವಧಾನವಾಗಿ ಹೆಚ್ಚುತ್ತಿತ್ತು.

ಕೊನೆಗೆಂದರು ಗಣೇಶರಾಯರು; " ಆಗಲಿ, ನೋಡೋಣ. ಪುತ್ತೂರಿನಲ್ಲಿ ನನ್ನ ಹಳೆಯ ಸ್ನೇಹಿತನೊಬ್ಬನಿದ್ದಾನೆ. ನಾಳೆ ಅವನಲ್ಲಿ ಹೋಗಿ ಕಟ್ಟ ಕಡೆಯ ಪ್ರಯತ್ನವೊಂದನ್ನು ಮಾಡುತ್ತೇನೆ. ಮುಂದೆ ದೇವರಿಚ್ಛೆಯಂತೆ ಆಗಲಿ. "

ಮರುದಿನ ರಾಯರು ಗಂಟು-ಮೂಟೆ ಕಟ್ಟಿಕೊಂಡು ಹೊರಡಲನುವಾದರು. ಹೊರಡುವ ಮುನ್ನ ದಂಪತಿಗಳಿಬ್ಬರೂ, ಈ ಬಾರಿಯಾದರೂ ಜಯವಾಗಲೆಂದು ದೇವರಿಗೆ ಕೈಮುಗಿದರು. ಮಂಗಳೂರಿನ ವರೆಗೂ ರಾಯರೊಡನೆ ದಾಮೋದರನೂ ಹೋಗಿದ್ದನು. ಬಸ್ ಏರುವಾಗ ರಾಯರು, " ಅಲ್ಲಿ ಹೋದಕೂಡಲೇ ಪತ್ರ ಬರೆಯುತ್ತೇನೆ. ಮನೆಯ ಕಡೆ ಜಾಗ್ರತೆ. " ಎಂದು ಎಚ್ಚರಿಸಿದರು. ದಾಮೋದರನು ನಾಲ್ಕು ಹಗಲಿರುಳು ಮಂಗಳೂರಿನಲ್ಲಿಳಿದು ಬಳಿಕ ಊರಿಗೆ ಮರುಳಿದನು.

ಬಸ್ ಓಡುತ್ತಿದ್ದಂತೆಯೇ ದಾರಿಯಲ್ಲಿ ಗಣೇಶರಾಯರಿಗೆ ಆಲೋಚನೆಗೆ ಮೊದಲಾಯಿತು. ತಾವು ಬಂದುದೇನೋ ನಿಜ. ಆದರೆ, ಜಯಶೀಲರಾಗಬಹುದೇ? ಈ ವಿಷಯವನ್ನು ತನ್ನ ಹಳೆ ಸ್ನೇಹಿತ ಗಣಪ್ಪನಿಗೆ ತಿಳಿಸುದಾದರೂ ಹೇಗೆ? ಕೇಳಿ, ಅವರು ಹಾಸ್ಯಮಾಡಿ ನಕ್ಕು ಬಿಡಲಿಕ್ಕಿಲ್ಲವೇ? ಮುಂತಾಗಿ, ಮುಂತಾಗಿ...................... ವಿಚಾರ ಸಮುದ್ರದಲ್ಲಿ ದಡಸೇರದ ನಾವಿಕನಂತಾದರು ಅವರು. ಅಂತೂ ಪುತ್ತೂರು ಬಸ್ ಸ್ಟೇಶನ್ ಬಂದಾಗ ಅವರ ವಿಚಾರ ಶರಧಿ ಇನ್ನೂ ಇಳಿದಿರಲಿಲ್ಲ. ಎಲ್ಲರೂ ಇಳಿದುದನ್ನು ನೋಡಿ, ವಿಚಾರಿಸುವುದನ್ನು ಅಲ್ಲಿಗೇ ಬಿಟ್ಟು ತಾವೂ ಇಳಿದರು.

ಇಳಿದ ಮೇಲೆ ಮಾತ್ರ ಕಕ್ಕಾಬಿಕ್ಕಿಯಾದರು. ಗಣಪಯ್ಯ ಅವರ ಸ್ನೇಹಿತರಾದರೂ, ಹುಟ್ಟಿದಂದಿನಿಂದ ಇಂದಿನ ತನಕ ಅವರು ಪುತ್ತೂರನ್ನೇ ನೋಡಿದವರಲ್ಲ, ಎಂದ ಮೇಲೆ ಗಣಪಯ್ಯನ ಮನೆಯನ್ನು ನೋಡಿದವರಲ್ಲವೆನ್ನಬೇಕೇ? ಹೀಗೆ ಆಚೀಚೆ ನೋಡುತ್ತಿರುವಾಗಲೇ, ದೂರದಲ್ಲಿ ಗಣಪಯ್ಯ ಇವರನ್ನು ನೋಡಿದರು. ತಮ್ಮ ಬಂಧವೊಬ್ಬನನ್ನು ಮಂಗಳೂರಿಗೆ ಕಳಿಹಿಸಿ ಕೊಡಲು ಅವರು ಸ್ಟೇಶನಿಗೆ ಬಂದಿದ್ದರು. ಮೊದಲು ಇವರೇ ಅವರ ಕಣ್ಣಿಗೆ ಬಿದ್ದರು.

" ಯಾರದು? ಗಣೇಶನೋ! "

" ಹೌದು ಗಣಪ! " ಎಂದರು ಗಣೇಶರಾಯರು.

ಗೆಳೆಯರಿಬ್ಬರೂ ಗಾಢವಾಗಿ ಆಲಿಂಗಿಸಿಕೊಂಡರು.

" ಹೂಂ, ಇರಲಿ ಗಣೇಶಾ! ಇಷ್ಟು ದಿನದ ಮೇಲಾದರೂ ಹಳೇ ಸ್ನೇಹಿತನ ನೆನಪು ಬಂತಲ್ಲ! " ಎಂದರು ಗಣಪಯ್ಯ.

ಗಣೇಶರಾಯರ ಉತ್ತರ; " ನಿನಗೇನು ಗೊತ್ತು ಮಹಾರಾಯ, ನನ್ನ ಸಂಕಷ್ಟ! ನನಗೆ ಪುರುಸೊತ್ತೆಲ್ಲಿತ್ತು? ಇವತ್ತು ಕೊಯಮುತ್ತೂರಾದರೆ ನಾಳೆ ಸೇಲಂ. ನಾಳೆ ಸೇಲವಾದರೆ, ನಾಡದು ಟ್ರಿಚಿ. "

" ಒಂದು ಕಾರ್ಡನ್ನಾದರೂ ಬರೆದು ಬದುಕಿದ್ದೀಯೋ, ಸತ್ತಿದ್ದೀಯೋ ಎಂದಾದರೂ ತಿಳಿಸುತ್ತಾ ಇರಬಹುದಿತ್ತಲ್ಲ. "

" ನಿನ್ನ ಎಡ್ರೆಸ್ಸೂ ಸರಿಯಾಗಿ ಗೊತ್ತಿರಲಿಲ್ಲಯ್ಯ! "

" ಆಗಲಿ; ನಡಿ, ಮನೆಗೆ ಹೋಗೋಣ. "

ಗಣೇಶರಾಯರದೂ, ಗಣಪಯ್ಯನದೂ ಬಹಳ ಹಿಂದಿನ ಸ್ನೇಹ. ಅವರು ಮಂಗಳೂರಿನಲ್ಲಿ ಒಂದೇ ಶಾಲೆಯಲ್ಲಿ ಒಂದೇ ಕ್ಲಾಸಿನಲ್ಲಿ ಕಲಿತವರು. ಗಣಪಯ್ಯ S. S. L. C. ಯಲ್ಲಿ ಮೂರನೆಯ ಬಾರಿ ಫೈಲಾದಾಗ, ಗಣೇಶರಾಯರು ಹಿಂದಿನ ಕ್ಲಾಸಿನಲ್ಲಿ ಪಾಸಾಗಿ ಎಸ್. ಎಸ್. ಎಲ್. ಸಿ. ಗೆ ಬಂದು ಸೇರಿದರು. ಅಲ್ಲಿಯೇ ಇಬ್ಬರಿಗೂ ಸ್ನೇಹವುಂಟಾದುದು. ಗಣಪಯ್ಯನ ಹಾಸ್ಯಗುಣವೇ ಗಣೇಶರಾಯರನ್ನು ಹೆಚ್ಚಾಗಿ ಆಕರ್ಷಿಸಲು ಕಾರಣ. ಆದರೆ, ಮುಂದೆ ಗಣಪಯ್ಯನಿಗೆ ನಾಲ್ಕನೆಯ ಬಾರಿಯೂ ಪರೀಕ್ಷಕ ಕತ್ತೆಗಳು ಲತ್ತೆ ಕೊಟ್ಟವು. ಗಣೇಶ ಮೇಲೇರಿ ಕಾಲೇಜಿಗೆ ಹೋದ. ಗಣಪಯ್ಯ ' ವಿದ್ಯೆ ಯಾವ ಮಣ್ಣಿಗೆ? ' ಎಂದುಕೊಂಡು ಊರಿಗೆ ಹಿಂದಿರುಗಿ, ಅಡಿಕೆ ವ್ಯಾಪಾರ, ಹೊಲಬೇಸಾಯಗಳಲ್ಲಿ ತಲೆಹಾಕಿದ್ದ.

ಇಬ್ಬರೂ ಅರ್ಧದಾರಿಯಷ್ಟು ನೆಡೆದಿದ್ದರು. ಗಣಪಯ್ಯ ಒಮ್ಮೆಲೇ, " ಬಾ, ಮಹಾರಾಯ ! ಒಂದೊಂದು ಸಿಂಗಲ್ ಶರಾಬು ಕುಡಿಯೋಣ. " ಎಂದರು.

ಗಣೇಶರಾಯರಿಗೆ ಗಲಿಬಿಲಿಯಾಯಿತು. " ನನಗೆ ಬೇಡಪ್ಪ! "

" ಹೆದರಬೇಡವಯ್ಯಾ! ನಾನಿಲ್ಲವೇ? ಏನು ಅಮಲು ಗಿಮಲು ಹೆಚ್ಚಾಗ ಲಿಕ್ಕಿಲ್ಲ. " ಎಂದು ಎಳೆದುಕೊಂಡೇ ಹೋದರು.

ಅಲ್ಲೇ ಒಂದು ಸಣ್ಣ ಮನೆಯು ಹಾಗಿತ್ತು. ಮಾಡಿನ ಮೇಲಿನ ನಳಿಗೆಯಿಂದ ಹೊಗೆ ಹೋಗುವುದನ್ನು ನೋಡಿ ಯಾರಾದರೂ, ಕಾರ್ಖಾನೆ ಎಂದು ಕೊಳ್ಳಬೇಕು. ಇಬ್ಬರೂ ಒಳಹೋಗಿ, ಜೀರ್ಣವಾದ ಟೇಬಲಿನ ಮುಂದೆ ಕಾಲುಮುರಿದ ಬೆಂಚಿನಲ್ಲಿ ಮಂಡಿಸಿದರು. ಕೂಡಲೇ ಹರಿದ ಚಲ್ಲಣದ ಕೊಳಕು ಪ್ರಾಣಿ—ಅಲ್ಲ—ಮಾಣಿಯೊಂದರ ಅವತಾರವಾಯಿತು; 'ಏನು ಕೊಡಲಿ ತಿಂಡಿ?' ಗಣೇಶರಾಯರು, 'ಇವನೇನು ಹೇಳುತ್ತಾನೋ?' ಎಂದು ಹೆದರಿದರು. ಗಣಪಯ್ಯನದ ಲಾಡು, ಹಲವಾ, ಚಿರೋಟಿ, ಮಸಾಲೆಗಳಿಗೆ 'ಒರ್ಡರಾ'ಯಿತು. ಗಣೇಶರಾಯರಿಗೆ ಅತ್ಯಾಶ್ಚರ್ಯ! ಗಡಂಗಿನಲ್ಲಿಯೂ ಇವುಗಳನ್ನೆಲ್ಲಾ ತಯಾರಿಸುತ್ತಾರೆಯೇ?

ತಿಂಡಿಯ ಪ್ಲೇಟಿನೊಂದಿಗೆ ಎರಡು ಗ್ಲಾಸಿನಲ್ಲಿ ಬಿಸಿ ಬಿಸಿ ಕಾಫಿ ಬಂದಿತು. ಆಗ ಗಣೇಶರಾಯರಿಗೆ ಅರ್ಥವಾಯಿತು.

"ಇದೇ ಏನಯ್ಯಾ, ನಿನ್ನ ಶರಾಬು?"

"ಮತ್ತಲ್ಲವೇ?"

"ನೀನೊಬ್ಬ ಹುಚ್ಚ!"

"ಹಾಗಲ್ಲ, ಗಣೇಶಾ! ನಿನಗರಿಯದು. ಶರಾಬು, ಕಾಫಿ ಎರಡೂ ಸರಿಸಮಾನವೇ. ಒಮ್ಮೆ ಅಭ್ಯಾಸ ಮಾಡಿದೆವೋ, ಕೊನೆಗೆ ಸಾಯುವ ವರೆಗೂ ಅದೇ ದುರಭ್ಯಾಸವಾಗಿಬಿಡುತ್ತೇ!"

ಗಣೇಶರಾಯರು ನಗುತ್ತಾ, "ಚೆನ್ನಾದ ಮಾತು!" ಎಂದರು.

ಕಾಫಿ ಫಲಾಹಾರ ಮುಗಿಯುವಷ್ಟರಲ್ಲಿ ಗಣಪಯ್ಯನ ಎತ್ತಿನ ಬಂಡಿಯೇ ಅಲ್ಲಿಗೆ ಬಂದಿತು. 'ಇನ್ನು ಸುಲಭವಾಯಿತು' ಎಂದು ಇಬ್ಬರೂ ಅದನ್ನೇರಿದರು. ಬಂಡಿ ಹೊರಟಿತು. ಗಣಪಯ್ಯ ಜೇಬಿನಿಂದ ಬೀಡಿ ಕಟ್ಟನ್ನೂ, ಬೆಂಕಿಪೆಟ್ಟಿಗೆಯನ್ನೂ ಹೊರಗೆ ತೆಗೆಯುತ್ತಾ "ಸೇದುವ ಅಭ್ಯಾಸವಾಗಿದೆಯೇ?" ಎಂದು ಕೇಳಿದರು. "ಇಲ್ಲ." ಎಂಬ ಉತ್ತರ ದೊರೆಯಿತು. "ಮಾಡದಿದ್ದುದೇ ಒಳ್ಳೆಯದಾಯಿತು!" ಎಂದು ತಾವು ಕಣ್ಣುಮುಚ್ಚಿ ಸೇದತೊಡಗಿದರು. ಗಣೇಶರಾಯರು ಬಂಡಿಯ ಹೊರಗೆ ತಲೆಹಾಕಿ ಸುತ್ತಣ ನೋಟವನ್ನವಲೋಕಿಸತೊಡಗಿದರು.

ಗಗನಚುಂಬಿಗಳಾದ ತೆಂಗು, ಕಂಗುಗಳು, ಬೀಸುತ್ತಿರುವ ತಂಗಾಳಿಯಲ್ಲಿ ಅವುಗಳ ಮನೋಮೋಹಕವಾದ ನರ್ತನ, ಹರಿತ ಹೊಲಗಳ ಸಾಮ್ರಾಜ್ಯ,

ಸರ್ಪ ನಡಿಗೆಯ ದಾರಿ, ಎಡಗಡೆಯಲ್ಲಿ ಉತ್ತುಂಗವಾದ ಪರ್ವತಶ್ರೇಣಿ, ಅವುಗಳ ಮೇಲೆ ಗೊಲ್ಲರ, ಗೋವುಗಳ ಮೇಳ, ಮೆರವಣಿಗೆ, ದೂರದ ಶಾಂತಾರದಿಂದ ತೀಡುವ ಕಾಳ್ಕುಸುಮಗಳ ಮಧುರ, ಸುಂದರ, ರುಚಿರ ಸುರಭಿ, ದೃಷ್ಟಿಗದೃಶ್ಯವಾದ ಹಳ್ಳ, ಹೊಳೆಗಳ 'ಜುಳು, ಜುಳು' ಎಂಬ ಚಲ ಸಾರವ, ತಂಪಾದ ಹೊಂಬಿಸಿಲು ಎಲ್ಲಕ್ಕೂ ಮಿಗಿಲಾಗಿ ಎತ್ತುಗಳ ಕೊರಳ ಗಂಟೆಯ 'ಗಿಣಿ, ಗಿಣಿ' ನಾದ, ಗಾಡಿಯಾಳಿನ ಮೃದು ಮಧುರವಾದ ಲಾಲಿ, ಮೊದಲೇ ಪ್ರಕೃತಿ ಪ್ರೇಮಿಯಾದ ರಾಯರ ಮನಸ್ಸಿನಲ್ಲಿ ಭಾವ ತರಂಗಗಳ ನ್ನೆಬ್ಬಿಸಿದವು. ಆ ಸಂಧ್ಯಾಸಮಯದ ರಮಣೀಯ ಸೌಂದರ್ಯಾನುಭೂತಿ ಯಿಂದ ಮನಸ್ಸು ಹರ್ಷಿತವಾಗಿ ಪುಲಕಿತವಾಯಿತು. ಗಣಪಯ್ಯ ಯಾವಾ ಗಲೋ ನಿದ್ರಿಸಿ ಗುರುಕಾಯಿಸುತ್ತಿದರು. ಇವರೂ ಒರಗಿದ ತಕ್ಷಣವೇ ಸುಪ್ತ್ಯಾವಸ್ಥೆಯನ್ನೈದಿದರು.

ಗಾಡಿಯಾಳು ಬಂದು ಇಬ್ಬರನ್ನೂ ಎಚ್ಚರಿಸಿದನು. ಮನೆ ಬಂದಿತ್ತು. ಗಣೇಶರಾಯರು ತಲೆಯೆತ್ತಿ ನೋಡಿದರು. ಹಳೆಯದಾದರೂ ಬಂಗಲೆ ಯಂಥ; ವಿಶಾಲವಾದ ಮನೆ. ವಿಸ್ತಾರವಾದ ಅಂಗಳ. ದೊಡ್ಡ ಕಂಪೌಂಡು.

"ಬಾರಯ್ಯಾ, ಬಾ, ಒಳಗೆ ಬಾ." ಎಂದು ಗಣಪಯ್ಯ ಮನೆಯೊಳಗೆ ಕರೆದುಕೊಂಡು ಹೋದರು. ಅಂಗಳದಲ್ಲಿ ಸರಪಳಿಯ ಹಾರದಿಂದ ಸಿಂಗರಿಸಿ ಕೊಂಡಿದ್ದ ನಾಯಿ, 'ಔ!' ಎಂದು ಬಗುಳಿತು.

ದಿನವೆರಡು ಮಹಾ ಸಂಭ್ರಮದಲ್ಲೇ ಕಳೆಯಿತು. ಮಧ್ಯಾಹ್ನ ಭೋಜನ, ಪರಮಾನ್ನ, ಖೀರಿನ ಔತಣ, ಸಮಾರಾಧನೆ, ಸಾಯಂಕಾಲ ವಾದರೆ ಮೈಸೂರಪಾಕ್, ಇಡ್ಲಿ, ಬಿಸ್ಕೂಟಂಬಡೆ, ಕ್ಷೀರ, ರಿಮ್ಜಿನ್ ಕಾಫಿ ಗಳ ಪಾರ್ಟಿ, ಕಾಫಿಯಾದ ಮೇಲೆ, ಕೌಂಗಿನ ತೋಟಕ್ಕೋ, ಕೆಯ್ವೊಲದ ಕಡೆಗೋ, ಗುಡ್ಡದ ಮೇಲಕ್ಕೋ ಪಯಣ. ಆ ಎರಡು ದಿನಗಳಲ್ಲಿ ಗಣಪಯ್ಯ ತಮ್ಮ ಊರಿನಲ್ಲಿದ್ದ ವೈಶಿಷ್ಟ್ಯಗಳನ್ನೆಲ್ಲಾ ತೋರಿಸಿದರು. ಸಾಧಾರಣ ನಾಲ್ಕೈದು ಎಕರೆಯಷ್ಟಿದ್ದ ತಮ್ಮ ಕಂಗಿನ ತೋಟಕ್ಕೆ ಕರೆದು ಕೊಂಡು ಹೋದರು. ಒಂದು ಮೈಲಷ್ಟು ವಿಸ್ತಾರವಾದ ಬಾಳೆ ತೋಟದ ಸಂದರ್ಶನವನ್ನು ಮಾಡಿಸಿದರು. ಈ ವರ್ಷ ಅವರ ಪೂಗ ವನಕ್ಕೆ ಕೊಳೆ ರೋಗ ತಗಲಿ ಬಹಳ ಹಾವಳಿಯಾಯಿತಂತೆ. ಸಾಧಾರಣ ಒಂದು ಲಕ್ಷ

ರೂಪಾಯಿಗಳಷ್ಟು ಹಾನಿ. ಬಾಳೆ ಮರಗಳಂತೂ ಒಂದಾದರೂ ಗೊನೆ ಹಾಕದೆ ಬಂಜೆಯರಾಗಿಬಿಟ್ಟವೆ.

ಅಲ್ಲಿಂದ ಪರಿವಾರ ಕಾಡಿನ ಕಡೆಗೆ ಹೊರಟಿತು. ಕಾನನದ ಕಡೆಗೆ ಹೋಗುವುದೆಂದರೆ ಸರಿ, ಗಣಪಯ್ಯ ದೊಡ್ಡ ಕಲಿಯಾಗಿಬಿಡುತ್ತಿದ್ದರು. ಏನು, ವೀರಾವೇಶ! ಹುರುಪು! ಉತ್ಸಾಹ! ಧೈರ್ಯ! ಸುಮ್ಮನೆಯೇ? ಈಗ ನಾಲ್ಕು ತಿಂಗಳ ಹಿಂದೆ, ಯಾವ ದೊಡ್ಡ ಧೊರೆಗಳಿಂದಲೂ, ಪ್ರಸಿದ್ಧ ಬೇಟೆಗಾರರಿಂದಲೂ ಸಂಹರಿಸಲಿಕ್ಕಾಗದ ಒಂದು ದೊಡ್ಡ ಹೆಬ್ಬುಲಿಯ ಹರಣವನ್ನು, ಅವರು ಒಂದೇ ಗುಂಡಿನಿಂದ ಈಚೆಗೆ ತೆಗೆಯಲಿಲ್ಲವೇ? ಆ ಆಖ್ಯಾನವನ್ನೇ ಇಂದು ಅವರು ಗಣೇಶರಾಯರಿಗೆ ನಿರೂಪಿಸುತ್ತಿದ್ದರು.

ಗಣಪಯ್ಯ ಆ ದಿನ ಮಧ್ಯಾಹ್ನ ನಿದ್ದೆಯಿಂದೆದ್ದು ಹೊರಗೆ ಬರುವಾಗ, ಗೊಲ್ಲರ ಮಾದ ಕಣ್ಣೀರು ಸುರಿಸುತ್ತಾ ನಿಂತಿದ್ದ. ಗಣಪಯ್ಯನಿಗೆ ಅಚ್ಚರಿಯಾಯಿತು.

" ಏನಾಯಿತೋ? " ಎಂದು ಬಳಿಗೆ ಬಂದು ಕೇಳಿದರು.

ಮಾದನು ಹಾಗೆಯೇ ಕಣ್ಣೀರು ಸುರಿಸುತ್ತಾ " ಕಾಡಿನಲ್ಲಿ ಹುಲಿ ಬಂದಿದೆ. " ಎಂದನು.

ಗಣಪಯ್ಯ ಒಂದೇ ಮೆಟ್ಟಿಗೆ ಹಾರಿಬಿದ್ದರು. ಹಾಗಾದರೆ ತಮ್ಮ ಪಶುಗಳ ಹರಣಕ್ಕೇನಾದರೂ ಸಂಚಕಾರ ಬಂದಿದೆಯೋ? ಅದನ್ನೇ ಕೇಳಿದರು

" ದನವನ್ನೇನಾದರೂ ಕೊಂದು ಹಾಕಿದೆಯೇ? "

" ನರಸಪ್ಪಯ್ಯನವರ ಕಾಳಿಯನ್ನು! "

ಹಾಗಾದರೆ ತಮ್ಮದನ್ನಲ್ಲ. ಅಬ್ಬಬ್ಬಾ! ಗಣಪಯ್ಯನಿಗೆ ಸಂದ ಹರಣ ಮರಳಿ ಬಂದಂತಾಯಿತು.

" ಆಗಲಿ: ನೀನೀಗ ಹೋಗು. ನೋಡೋಣ. " ಎಂದು ಅವನನ್ನು ಅತ್ತ ಕಳುಹಿಸಿದರು.

ಅದೇ ದಿನವೇ ಗಣಪಯ್ಯ ತಮಗೆ ಪರಿಚಯವಿದ್ದ ಬೇಟೆಗಾರರಿಗೆಲ್ಲಾ ಟಪ್ಪಾಲು ಬರೆದರು. ವೃತ್ತಾಂತ ಪತ್ರಿಕೆಗಳಿಗೂ ಬರೆದು ಕಳುಹಿಸಿದರು. ಅದನ್ನು ಲಕ್ಷಿಸಿಯೇ ಎಷ್ಟೋ ಮಂದಿ ಬೇಟೆಗಾರರು ಪುತ್ತೂರಿಗೆ ಬಂದರು. ಆದರೆ, ಯಾರೂ ಆ ಹುಲಿಯ ಹರಣಗೊಂಡು ಕೃತಾರ್ಥರಾಗಲಿಲ್ಲ.

ಊರಲ್ಲಾದರೋ ದಿನಕ್ಕೊಂದೊಂದೇ ದನ ಕಡಿಮೆಯಾಗುತ್ತಿತ್ತು. ಕೊನೆಗೆ ಗಣಪಯ್ಯ ತಾವೇ ಆ ಹುಲಿಯನ್ನು ಕೊಲ್ಲುವ ನಿರ್ಧಾರ ಮಾಡಿದರು. ಅವರ ಮನೆಯಲ್ಲಿ ಹಿಂದೆ ಅವರ ಜನ್ಮದಾತರು ಉಪಯೋಗಿಸಿದ್ದ ಹಳೆಯ ಕೋವಿಯೊಂದಿತ್ತು. ಅದನ್ನೇ ಹಿಡಿದುಕೊಂಡು ಒಂದು ನಡುವಿರುಳು ಬೇಟೆಗಾಗಿ ತೆರಳಿದರು.

ನಕ್ಷತ್ರದ ಸಹಾಯದಿಂದ ರಾತ್ರಿ ಹನ್ನೆರಡು ಗಂಟೆಯ ತನಕವೂ ನಿದ್ರಾವಶರಾಗದೆ ಕುಳಿತರು. ಅವರು ಕುಳಿತ ವೃಕ್ಷದ ಕೆಳಗೇ ಹುಲಿ ಅರ್ಧಮರ್ಧ ತಿಂದು ಬಿಟ್ಟುಹೋಗಿದ್ದ ಪಶುವಿನ ಶವವಿತ್ತು. ರಾತ್ರಿ ಹನ್ನೆರಡು ಗಂಟೆ ಹೊಡೆಯಿತು. ಅದೇ ಸಮಯಕ್ಕೆ ಸರಿಯಾಗಿ ಹುಲಿಯ ಆಗಮನವಾಯಿತು. ಆ ಘೋರಾಂಧಕಾರದಲ್ಲಿ ಅದರ ದೃಷ್ಟಿಗಳೆರಡೂ ಪಂಜಿನಂತೆ ಡಾಳಿಸಿದವು. ಅದನ್ನು ನೋಡಿದ ಕೂಡಲೇ ಗಣಪಯ್ಯನ ಎದೆಯೊಮ್ಮೆ ತನ್ನ ಬಡಿದಾಟವನ್ನು ಸಂಪೂರ್ಣವಾಗಿ ನಿಲ್ಲಿಸಿತು. ಮಹಾಕಾರದ ಹೆಬ್ಬುಲಿ..........? ಕೋವಿಯನ್ನು ಸಿದ್ಧಪಡಿಸಿಕೊಂಡು ಕುಳಿತರು.

ಹುಲಿ ಭೋಜನಕ್ಕಾರಂಭಿಸಿತು. ಗಣಪಯ್ಯ ಯೋಗ್ಯ ಸಮಯವನ್ನೇ ಎದುರು ನೋಡುತ್ತಾ ಕುಳಿತುಕೊಂಡಿದ್ದರು. ಒಮ್ಮೆ ಹುಲಿರಾಯನು ತನ್ನ ಮೊಗವನ್ನು ಗಣಪಯ್ಯ ಆಶೀನವಾಗಿದ್ದ ವೃಕ್ಷದ ದಿಕ್ಕಿಗೆ ಸರಿಯಾಗಿ ತಿರುಗಿಸಿತು ಆಗಲೇ ಗಣಪಯ್ಯನ ಗುಂಡು ಹಾರಿತು. ಭೂಕಂಪವಾದಂತಾಯಿತು. ಹುಲಿ ಗುಡುಗಿ ಮೇಲೆ ಹಾರಿತು. ಆದರೆ ಮೇಲೇರಲಾಗಲಿಲ್ಲ. ಗುಂಡು ಮರ್ಮಸ್ಥಳಕ್ಕೆ ನಾಟಿತ್ತು. ಗಣಪಯ್ಯ ಇನ್ನೊಂದು ಗುಂಡುಹೊಡೆಯುವ ಮೊದಲೇ ಹುಲಿ ಗತಾಸುವಾಗಿತ್ತು.

ಸೂರ್ಯನು ಆಕಾಶ ಸಿಂಹಾಸನದ ಮೇಲೆ ಪಟ್ಟಾಭಿಷಿಕ್ತನಾದನು. ಅಶನಿಯಂತೆ ಈ ಸುದ್ದಿ ಎಲ್ಲೆಲ್ಲಿಗೂ ವ್ಯಾಪಿಸಿಕೊಂಡಿತು. ಸರಕಾರದವರು ಚಿನ್ನದ ಪದಕವನ್ನಿತ್ತು ಗಣಪಯ್ಯನನ್ನು ಮನ್ನಿಸಿದರು. ಅದೃಷ್ಟಮಹಿಮೆಯಿಂದಾದ ಈ ಕಾರ್ಯವನ್ನು ತಮ್ಮ ಸಾಹಸದಿಂದಾದ ಕಾರ್ಯವೆಂದೇ ಗಣಪಯ್ಯ ತಿಳಿದುಕೊಂಡಿದ್ದರು!

ಇದೇ ರೀತಿಯಾಗಿ ಎರಡು ದಿನ ಕಳೆಯಿತು. ಹಗಲೆಲ್ಲಾ ಈ ಮಾತುಕಥೆ, ಊಟ, ಉಪಚಾರ, ವಿನೋದ, ಹಾಸ್ಯಗಳಲ್ಲೇ ಕಳೆಯಲಾಗುತ್ತಿತ್ತು. ಗಣೇಶರಾಯರಿಗೆ ತಾವು ಬಂದ ಉದ್ದೇಶ ಸಾಧನೆಗೆ ಸ್ವಲ್ಪವೂ ಅವಕಾಶ

ದೊರೆಯಲಿಲ್ಲ. ಆದರೆ ರಾತ್ರಿ ಪವಡಿಸಿದರೆಂದರೆ, ಅವರ ವಿಚಾರವಾಹಿನಿ ಹೊನಲಿಡಲು ಮೊದಲಾಗುತ್ತಿತ್ತು. ಬಂದುದೇನು? ಏತಕ್ಕೆ? ಇಲ್ಲಿ ಮಾಡುತ್ತಿರುವುದೇನು? ಏನು ಮಾಡಲಿ? ಇನ್ನೂ ಬೊಮ್ಮನಿಗೆ ನನ್ನ ಮೇಲೆ ಕರುಣೆಯಿಲ್ಲವೇ? ನಿದ್ರೆ ಬಂದರೂ ಅದೇ ಕನಸು, ಮರುಕ್ಷಣವೇ ಎಚ್ಚರ..... ಗಣೇಶರಾಯರ ಮನಸ್ಸಿನಲ್ಲಿ ಮಹಾಕ್ರಾಂತಿಯಾಗಿತ್ತು. ಲಲಿತೆಗೆ ಮದುವೆಯಾಗದೆ ಅದು ಶಾಂತವಾಗುವಂತಿರಲಿಲ್ಲ.

ಮೂರನೆಯ ದಿನ; ಮದ್ರಾಸಿನಲ್ಲಿ ಎಂ. ಎ. ಆನರ್ಸ್ ಕಲಿಯುತ್ತಿದ್ದ ಗಣಪಯ್ಯನ ಮಗ ಶಂಕರನದು ಊರಿಗೆ ಬರೋಣವಾಯಿತು. ರಜೆ ದೊರೆತು ಎಷ್ಟೋ ಸಮಯವಾಗಿದ್ದರೂ, 'ರಿಝಲ್ಟ್' ಬಾರದೆ ಊರಿಗೆ ಹೋಗುವದಿಲ್ಲವೆಂದು ಅವನು ಛಲವಿಡಿದುದರಿಂದ, ಊರಿಗೆ ಬರಲು ಇಷ್ಟು ತಡವಾಯಿತು. ಮಗನಿಗೆ ಗೈದ ಉಪಚಾರದೊಂದಿಗೆ ಗಣೇಶರಾಯರಿಗೂ ಉಪಚಾರವಾಯಿತು.

ಗಣೇಶರಾಯರಿಗೆ ಈ ಊಟ, ಉಪಚಾರವೊಂದೂ ಬೇಕಾಗಿರಲಿಲ್ಲ. ಅವರು ತಮ್ಮ ಉದ್ದೇಶ ಸಾಧನೆಗೆ ಅನುಕೂಲವಾದ ಸಮಯವನ್ನು ಇದಿರು ನೋಡುತ್ತಿದ್ದರು. ಅಂಥಃ ಸಮಯವೂ ಬಂತು ಆ ದಿನ ಮಧ್ಯಾಹ್ನ ಊಟ ಮಾಡುತ್ತಿರುವಾಗ ಗಣಪಯ್ಯ ಹೇಳಿದರು:

" ನೋಡಯ್ಯಾ, ಗಣೇಶ! ನಿನ್ನಿಂದ ಒಂದು ಉಪಕಾರವಾದೀತೋ? "

" ಏನದು? "

" ನಮ್ಮ ಶಂಕರ ಎಂ. ಎ. ಆನರ್ಸ್ ಪಾಸಾಗಿದ್ದಾನಷ್ಟೆ; ಅವನಿಗೀಗ ಇಂಗ್ಲಾಂಡಿಗೆ ಹೋಗಿ ಬಾರ್-ಅಟ್-ಲಾ ಕಲಿಯಬೇಕೆಂಬಾಸೆ. "

" ಒಳ್ಳೆಯದೇ! "

" ಒಳ್ಳೆಯದಲ್ಲವೆಂದು ನಾನೆಂದೆನೇ! ಆದರೆ, ದುಡ್ಡಿನ ವಿಚಾರ ಆಲೋಚಿಸಬೇಡವೇ? ಇವನು ವಿಲಾಯತಿಗೆ ಹೋಗಿ ಬೆರಿಸ್ಟರ್ ಆಗಿ ಬರುವುದರೊಳಗಾಗಿ ನಾನು ಅಡಿಕೆ ತೋಟ, ಹೊಲಗದ್ದೆಗಳನ್ನೆಲ್ಲಾ ಕಳೆದುಕೊಂಡು ಬರಿಗೈಯಾಗುವುದು ಖಂಡಿತ. ಆದದರಿಂದ ಇವನ ವಿದ್ಯೆಯ ಖರ್ಚಿಗೆ ಸಹಾಯವಾಗುವ ದಾರಿ ಹುಡಕೋಣ ಅಂತಿದ್ದೇನೆ. "

" ಯಾವುದದು? "

" ಇವನಿಗೊಂದು ಮದುವೆ ಮಾಡೋಣವೆಂಬ ಆಲೋಚನೆ. ಹಾಗೇನು

ಪ್ರಾಯ ಮೀರಿ ಹೋಗದಿದ್ದರೂ, ಮದುವೆಯಾಗದಿರುವಷ್ಟು ಚಿಕ್ಕ ಪ್ರಾಯ ವೇನಲ್ಲ, ಇವನಿಗೆ. ಹಾಗೆ ಹೆಣ್ಣು ಕೊಡುವವನು ಸ್ವಲ್ಪ ಹಣವಂತನಾಗಿರ ಬೇಕು. ನಾನು ಇಲ್ಲೆಲ್ಲಾ ಹುಡುಕಿದೆ. ಆದರೆ ಸರಿಯಾದುದು ಒಂದೂ ಸಿಕ್ಕಲಿಲ್ಲ. ಹಣವಿದ್ದಲ್ಲಿ ಹೆಣ್ಣಿಲ್ಲ, ಹೆಣ್ಣಿದ್ದಲ್ಲಿ ಹಣವಿಲ್ಲ. ನಿಮ್ಮತ್ತಲಾಗೆ ಎರಡೂ ಅನುಕೂಲವಾದುದು ಯಾವುದಾದರೂ ಉಂಟೋ? "

" ಹಾಂ! ನಮ್ಮ ಕಡೆಯಲ್ಲಿ ಒಂದು ಹೆಣ್ಣಿದೆ. ವರದಕ್ಷಿಣೆ, ನೀವು ಹತ್ತು ಸಾವಿರ, ಹದಿನೈದು ಸಾವಿರವೆಂದರೆ ಹದಿನೈದು ಸಾವಿರ ಅವರು ಕೊಟ್ಟಾರು."

" ಹಾಗಾದರೆ ತೊಂದರೆಯೇ ಇಲ್ಲ. "

" ಏನೋ ಶಂಕರ? "

" ಹುಡುಗಿಯನ್ನು ನಾನು ನೋಡಬೇಕಲ್ಲಾ, ಗಣೇಶರಾಯರೇ! "

" ನೋಡಲಿಕ್ಕೆ ಅದೇನು ಸಿನೆಮಾ ಪ್ರದರ್ಶನವಲ್ಲ. ಅಥವಾ ನಾವೇನು ರಕ್ಕಸಿಯನ್ನು ತಂದು ನಿನಗೆ ಮದುವೆ ಮಾಡಲಿಕ್ಕಿಲ್ಲ. "

" ಹಾಗಾದರೆ, ನನಗೆ ಮದುವೆಯೂ ಬೇಡ, ಬಾರ್-ಎಟ್-ಲಾವೂ ಬೇಡ. "

" ಆಯಿತಪ್ಪ; ನಿನ್ನ ಹಟಕ್ಕೆ ಮತ್ತೇನು ಮಾಡುವುದು? ಏನೋ, ಗಣೇಶ."

" ಸರಿ; "

" ಹುಡುಗಿಯನ್ನು ನೋಡುವುದಕ್ಕೆ ಯಾವಾಗ ಬರುತ್ತೀರಿ? "

" ಯಾವಾಗೆಂದರೆ ಆವಾಗ; ನಾಳೆಯಾದರೆ, ನಾಳೆ, ನಾಡದಾದರೆ, ನಾಡದು. ಯಾವಾಗಾದೀತು ಶಂಕರ? "

" ನಾಡದು ಹೋಗೋಣ. "

ಗಣೇಶರಾಯರು ಮನೆಗೆ ಅವಸರವಸರವಾಗಿ ಪತ್ರ ಬರೆದು ಸರ್ವ ವಿಚಾರವನ್ನೂ ತಿಳಿಸಿದರು. ಈ ಮದುವೆ ಆದ ಹಾಗೆಯೇ! ಎಂದು ಮನಸಿನಲ್ಲಿ ತೀರ್ಮಾನಿಸಿದರು.

ಆ ನಾಡದು ಬಂದಿತು. ಗಣಪಯ್ಯ, ಗಣೇಶರಾಯರು, ಶಂಕರ ಮೂವರು ಹೊರಟರು. ಮಂಗಳೂರಿನಿಂದ ಬೋಳೂರಿನ ತನಕ ಸಿಟಿ ಬಸ್ಸಿನಲ್ಲಿ ಹೋದದ್ದಾಯಿತು. ಆ ಮೇಲೆ ದೋಣಿಯ ಪ್ರಯಾಣ. ಬಿಸಿಲು ಏರುತ್ತಾ ಬರುತ್ತಿದ್ದರೂ, ಪಯಣಿಗರನ್ನು ಅದು ಚೆನ್ನಾಗಿ ಸುಡುತ್ತಿದ್ದರೂ, ಅವರಾರಿಗೂ ಅದರ ಗಮನವಿರಲಿಲ್ಲ. ಅವರೆಲ್ಲರೂ ಚಿಂತೆಯಲ್ಲಿ ಮುಳುಗಿ

ದ್ದರು. ಒಬ್ಬೊಬ್ಬರಿಗೆ ಒಂದೊಂದು ಬಗೆಯ ಚಿಂತೆ. ಗಣಪಯ್ಯನಿಗೆ ಹೆಣ್ಣಿನ ತಂದೆಯಿಂದ ವರದಕ್ಷಿಣೆಯೆಂದು ಎಷ್ಟು ಸುಲಿಗೆಮಾಡಲಿಕ್ಕೆ ಬಂದೀತು? ಎಂಬ ಚಿಂತೆ. ಶಂಕರನು, ಹೆಣ್ಣು ಹೇಗಿರಬಹುದು? ರೂಪವತಿಯಾಗಿರ ಬಹುದೇ? ಮುಂತಾದ ಚಿಂತೆಯಲ್ಲಿ ಮುಳುಗಿದ್ದನು. ಗಣೇಶರಾಯರ ಚಿಂತೆಯೇ ಬೇರೆಯಾಗಿತ್ತು. ಈ ಮದುವೆಯಾದರೂ ಸಾಂಗವಾಗಿ ನಡೆ ದೀತೋ, ಇಲ್ಲವೋ? ಎಂಬ ಭಯ ಅವರನ್ನಾವರಿಸಿತ್ತು.

ನಾವೆ ದಡವನ್ನು ಸೇರಿತು.

" ಈಗ ಮೊದಲು ಎಲ್ಲಿಗೆ ಹೋಗುವುದು? " ಎಂದು ಬೆಸಗೊಂಡರು ಗಣಪಯ್ಯ ದೋಣಿಯಿಂದಿಳಿಯುತ್ತಾ.

" ನಮ್ಮ ಮನೆಗೇ! "

" ಹಾಗಾದರೆ, ಹುಡುಗಿಯನ್ನು ನೋಡಲು ಹೋಗುವುದು ಯಾವಾಗ? "

" ನಮ್ಮ ಮನೆಗೆ ಬನ್ನಿಯಪ್ಪ; ಹುಡುಗಿಯನ್ನು ತೋರಿಸುತ್ತೇನೆ. "

" ಹಾಗಾದರೆ, ವಧು..............? "

" ನನ್ನ ಮಗಳೇ! "

ಗಣಪಯ್ಯ ನಕ್ಕು ಗಣೇಶರಾಯರ ಬೆನ್ನು ತಟ್ಟುತ್ತಾ, " ಹೋ! ಹೋ! ಹೀಗೆ ಮೊದಲೇ ಹೇಳಬಾರದಾಗಿತ್ತೇನಯ್ಯ! " ಎಂದರು.

ಲಲಿತೆ ದಾಮೋದರ ಇಬ್ಬರೂ ಕೂಡಿ ಆ ದಿನ ಮನೆಯನ್ನು ಚೆನ್ನಾಗಿ ಸಿಂಗರಿಸಿದ್ದರು. ಗಣೇಶರಾಯರು ಗಣಪಯ್ಯ, ಶಂಕರ ಇಬ್ಬರನ್ನೂ ಕರೆದು ಕೊಂಡು ಹೋಗಿ ಟೇಬಲ್ ಕ್ಲಾತ್ ಹಾಸಿದ ಮೇಜಿನ ಮುಂದೆ ಖುಷನ್ನಿನ ಖುರ್ಚಿಯಲ್ಲಿ ಕುಳ್ಳಿರಿಸಿದರು. ಗ್ರೀಷ್ಮಕಾಲವಾದುದರಿಂದ ಕಾಫಿ, ಇಡ್ಲಿಗಳ ಬದಲಾಗಿ ಶರಬತ್ತು ಐಸ ಕ್ರೀಮುಗಳೇ ಬಂದವು. ಎರಡನ್ನೂ ಮುಗಿಸಿ, ಶಂಕರ ಸಿಗರೇಟಿಗೆ ಬೆಂಕಿ ಹಚ್ಚಿ ಅತ್ತಿತ್ತ ನೋಡಿದ.

ಗಣೇಶರಾಯರಿಗೆ ಗೊತ್ತಾಯಿತು.

" ಹೋ! ಅಳಿಯರಾಯರು ಹೆಂಡತಿಯನ್ನು ನೋಡಲು ಅವಸರಪಡುತ್ತಿ ರುವ ಹಾಗೆ ಕಾಣುತ್ತದೆ. ಆಗಲಿ; ಬರಲು ಹೇಳುತ್ತೇನೆ. " ಎಂದು ಒಳಗೆ ಹೋದರು.

ಶಂಕರ ನಕ್ಕ.

ಲಲಿತೆ ಬಿಜಯಂಗೈದಳು.

ಕೈಯ್ಯಲ್ಲೊಂದು ಲೋಟ ತಣ್ಣೀರನ್ನು ತಂದು ಮೇಜಿನ ಮೇಲಿರಿಸಿದಳು. ಬನಾರಸ್ ಸೀರೆ, ಜರತಾರಿ, ಕುಪ್ಪುಸಗಳನ್ನು ತೊಟ್ಟು. ಚಿನ್ನದ ಹಾರವನ್ನು ಸೀರೆಯ ಮೇಲೆ ಕಾಣುವಂತೆ ಇಳಿಸಿದ್ದಳು. ತುರುಬಿನಲ್ಲಿ ಮಲ್ಲಿಗೆ ಹೂವು. ಅದರ ಮಧುರ ಸುವಾಸನೆ ಛಾವಡಿಗೆಲ್ಲಾ ಬೀಸಿತು. ಶಂಕರ ಅವಳಿಗೆ ಮೆಚ್ಚಿಗೆಯಾದ. ಆದರೆ........ಅವನಿಗೆ........ಅವಳು........?

" ಮಗೂ! ನಿನ್ನ ಮಾವನಿಗೆ ನಮಸ್ಕಾರ ಮಾಡು. " ಎಂದರು ಗಣೇಶರಾಯರು.

ಲಲಿತೆ ನಮಸ್ಕರಿಸಿದುದಾಯಿತು.

" ಆಗಲಿ; ಆಗಲಿ; " ಎಂದು ಗಣಪಯ್ಯ, " ಕುಳಿತು ಕೊಳ್ಳಮ್ಮಾ! "

ಲಲಿತೆ ಅಲ್ಲೇ ಹಾಸಿದ ಜಮಖಾನದ ಮೇಲೆ ಮಂಡಿಸಿದಳು.

" ಸಂಗೀತ ಗಿಂಗೀತ ಏನಾದರೂ ಬರುತ್ತೋ? " ಗಣಪಯ್ಯನ ಪ್ರಶ್ನೆ.

" ಓಹೋ ! ನಾಲ್ಕು ವರ್ಷ ಪ್ರ್ಯಾಕ್ಟೀಸ್ ಆಗಿದೆ. ಹೇಳಮ್ಮಾ 'ಲಂಬೋದರ ಲಕುಮಿಕರ' " ಗಣೇಶರಾಯರ ಆಣತಿಯಾಯಿತು.

ದಾಮೋದರನೂ ನಕ್ಕು ಹೇಳಿದ: " ಹೂಂ, ಪ್ರಾರಂಭವಾಗಲಿ ಸಂಗೀತ! ತಾಳ–ತಂಬೂರಿ ಏನಾದರೂ ಬೇಕೋ? "

ಲಲಿತೆ ಸುರುಮಾಡಬೇಕೆಂದಿರುವಷ್ಟರಲ್ಲಿ ಶಂಕರ, " ಸಂಗೀತವೇನೂ ಬೇಡ! ನನಗೆ ಅದರಲ್ಲಿ ಅಷ್ಟೊಂದು ಅಭಿರುಚಿಯಿಲ್ಲ " ಎಂದು ಬಿಟ್ಟ.

' ಸಂಗೀತದಲ್ಲಿ ಅಭಿರುಚಿಯಿಲ್ಲದ ಇವನೆಂಥ; ಮನುಷ್ಯ! ' ಎಂದು ಕೊಂಡಳು ಲಲಿತೆ.

ಆ ಮೇಲೆ ಮಾತು ಸಾಗಲಿಲ್ಲ. ಸ್ವಲ್ಪ ಹೊತ್ತು ಕುಳಿತಿದ್ದು ಲಲಿತೆ ಒಳಗೆ ಹೋದಳು. ಅವಳು ಒಳಗೆ ಹೋದುದನ್ನು ನೋಡಿದವನೇ ಶಂಕರ;

" ರಾಯರೇ! ನಿಮ್ಮ ಮಗಳಿಗೆ ಟೀ. ಬಿ. 'ಗೀಬಿ' ಏನಾದರೂ............ "

" ಅಯ್ಯಯ್ಯೋ! ಇಲ್ಲಪ್ಪ; ದೇವರ ದಯದಿಂದ ಅದು ಬಾರದಿರಲಿ. "

" ಹಾಗಲ್ಲ; ಮತ್ತೇನು ಅಷ್ಟು ಸಪೂರವಾಗಿದ್ದಾಳೆಂದು ಕೇಳಿದೆ. "

" ಸಪೂರವಾಗಿದ್ದಾಳೆ. ಅದಕ್ಕೇನು ಮಾಡುವದಪ್ಪ! ಒಬ್ಬೊಬ್ಬರ ದೇಹ ಪ್ರಕೃತಿ ಒಂದೊಂದು ರೀತಿ. ಇವಳು ಹುಟ್ಟಿದಾಗ, ಇವಳು ನಾಲ್ಕು ದಿನ ಬದುಕುವದಿಲ್ಲವೆಂದು ಪ್ರತಿಯೊಬ್ಬರೂ ಕಣಿಯಿಟ್ಟು ನುಡಿದವರೇ! ಆದರೆ, ನೋಡಿ. ಇಷ್ಟರ ತನಕ ಬದುಕಿದ್ದಾಳೆ. ಆಗಲೇ ಸತ್ತು ಬಿಡುತ್ತಿದ್ದರೆ,

ನನಗೆ ಈ ವರಶೋಧನೆಯ ತೊಂದರೆಯಾದರೂ ತಪ್ಪುತ್ತಿತ್ತು. ”

“ ಸ್ವಲ್ಪ ಮೆಲ್ಲ, ಮೆಲ್ಲ; ಎಲ್ಲಿಯಾದರೂ ಕೇಳಿಬಿಟ್ಟರೆ ಗತಿ...........? ” ಗಣಪಯ್ಯನ ಎಚ್ಚರಿಕೆಯಾಯಿತು.

ಶಂಕರ ಮಗುದೊಂದು ಸಿಗರೇಟಿಗೆ ಬೆಂಕಿ ಹಚ್ಚುತ್ತಾ, “ ಇನ್ನು ಹೋಗೋಣವೇನಪ್ಪ? ” ಎಂದ ತಂದೆಯೊಡನೆ.

“ ಬರುತ್ತೇವೆ, ಗಣೇಶರಾಯರೇ! ” ಎಂದು ಇಬ್ಬರೂ ಹೊರಟರು. ಗಣೇಶರಾಯರು ಹಿಂಬಾಲಿಸಿದರು. ಅಂಗಳಕ್ಕೆ ಕಾಲಿಡುತ್ತಲೇ ಹೇಳಿದ ಶಂಕರ; “ ಹೋದ ಮೇಲೆ ಯಾವುದಕ್ಕೂ ಬರೆಯುತ್ತೇವೆ ರಾಯರೇ! ” ಗಣೇಶರಾಯರು ಮನೆಯೊಳಗೆ ಬಂದರು.

“ ಏನಂತೆ? ಏನಂತೆ? ” ಎಂದು ಸಶೀಲೆ ಓಡಿಬಂದಳು.

“ ಹೋಗಿ ಬರೆಯುತ್ತಾರಂತೆ. ”

“ ಇವನಾದರೂ ಮದುವೆಯಾಗದೆ ಇರಲಿಕ್ಕಿಲ್ಲ. ”

“ ಹೇಗೆ ಹೇಳುವುದು? ”

ಹೋದ ಕೂಡಲೇ ಬರೆಯುತ್ತೇವೆ, ಎಂದವರು ಹೋಗಿ ನಾಲ್ಕು ತಿಂಗಳಾದರೂ ಬರೆಯಲಿಲ್ಲ ಗಣೇಶರಾಯರೂ, ಸುಶೀಲೆಯೂ. ಏನಿರಬಹುದು? ಏನಿರಬಹುದು? ಎಂದು ಆಲೋಚಿಸುತ್ತಿರುವಾಗಲೇ ಕೊನೆಗೊಂದು ಪತ್ರ ಬಂದಿತು. ಗಣೇಶರಾಯರು ಆತುರದಿಂದ ಕವರನ್ನೊಡೆದು ನೋಡಿದರು. ಆದರೆ, ಒಳಗಿದ್ದುದೇನು........? ಮದುವೆಯ ಆಮಂತ್ರಣ ಪತ್ರಿಕೆ! ಶಂಕರನಿಗೆ ಬೇರೆಕಡೆ ಮದುವೆ ನಿಶ್ಚಯವಾಗಿತ್ತು. ಗಣೇಶರಾಯರು ನಿರಾಶೆಯ ರಸಾತಳಕ್ಕೇ ಕುಸಿದು ಬಿದ್ದರು. ‘ ಇನ್ನು ಏನು ಬೇಕಾದರೂ ಆಗಲಿ, ಲಲಿತೆಗೆ ಮದುವೆಯಾಗಲಿ, ಆಗದಿರಲಿ, ನಾನಂತೂ ಇನ್ನು ಈ ವರ ಹುಲಿಗಳ ಬೇಟೆಗೆ ಹೋಗುವುದಿಲ್ಲ ’ ಎಂದುಕೊಂಡರು. ಪಾಪ! ಅವರಿಗೆ ಅಷ್ಟು ನಿರಾಶೆಯುಂಟಾಗಿತ್ತು.

ಲಲಿತೆಯ ಹರಯ ಇಪ್ಪತ್ತರ ಸಮೀಪ ನಡೆಯುತ್ತಾ ಬರುತ್ತಿತ್ತು. ಇದು ತನಕ ತನ್ನನ್ನು ನೋಡಲು ಬಂದು ತಾನು ಸಪೂರ, ಸಪೂರ ಎಂದು ತಿರಸ್ಕರಿಸಿ ಹೊರಟು ಹೋದವರ ಮೇಲೆಲ್ಲಾ ತಿರಸ್ಕಾರ, ಬೇಸರ, ಕೋಪ, ಎಲ್ಲಾ ಬಂದಿತ್ತು ಅವಳಿಗೆ. ‘ ನಾನು ಸಪೂರವಾಗಿದ್ದರೇನಾಯಿತು? ನನಗೆ ತೋರವಾಗಿ ಏನಾದರೂ ಕಾಡು ಕಡಿಯಲಿಕ್ಕಿದೆಯೇ ಅಥವಾ ಗುಡ್ಡ

ಮುಗುಚಲಿಕ್ಕಿದೆಯೇ? ಇನ್ನು ಹಾಗಾದರೆ, ಅವರೆಲ್ಲಾ ಹಂದಿಯಂತೆ ಮೈಯುಳ್ಳ ಕೊಳಕು ಜಾತಿಯವರನ್ನೇ ವಿವಾಹವಾಗಲಿ! ನಾನು ಆಜನ್ಮ ಬ್ರಹ್ಮಚಾರಿಣಿಯಾಗಿಯೇ ಇರುತ್ತೇನೆ.' ನಿರಾಶೆಯಪರಮಾವಧಿ!

ಲಲಿತೆ ಹೊಲಿಗೆ ಕೆಲಸದಲ್ಲಿದ್ದಳು; "ಲಲಿತೆ!" ಅವಳ ತಾಯಿ ಕರೆದಳು.

"ಏನಮ್ಮಾ?"

"ಸ್ವಲ್ಪ ನೆರೆಮನೆಗೆ ಹೋಗಿ ಬರೋಣ. ಬಾ!"

"ನೀನು ನೆರೆಮನೆಗೆ ಹೋಗುವುದಕ್ಕೆ ನಾನೇಕಮ್ಮಾ?"

"ಹೆಚ್ಚು ಮಾತಾಡಬೇಡ. ಸುಮ್ಮನೆ ಹೇಳಿದ ಹಾಗೆ ಕೇಳು. ಬಾ!"

ಲಲಿತೆ ಹೆಚ್ಚು ಮಾತಾಡದೆ ತಾಯಿಯನ್ನು ಹಿಂಬಾಲಿಸಿದಳು. ಅಂಗಳಕ್ಕೆ ಕಾಲಿಡುತ್ತಲೇ ತಾಯಿ, "ಸಾಯಲಿ; ನೆರೆಮನೆಗೆ ಹೋಗುವುದು ಬೇಡ. ಹಿಂದೆ ಹೋಗೋಣ." ಎಂದಳು. ಲಲಿತೆಗೆ ಅತ್ಯಾಶ್ಚರ್ಯವಾದರೂ, ಮೂಕಳಾಗಿ ಹಿಂದಿರುಗಿದಳು. ಅವಳು ಹೋಗುವಾಗ ನೋಡಿರಲಿಲ್ಲ. ಈಗ ಹಿಂದೆ ಬರುವಾಗ ಚಾವಡಿಯಲ್ಲಿ ತಮ್ಮ ಮದುವೆಗೆ ಉಡುಗೊರೆಯಾಗಿ ಸಿಕ್ಕಿದ್ದ ಆ ಹಳೆಯ ವಲ್ಲಿಯನ್ನೇ ಧರಿಸಿದ ಒಬ್ಬ ಮಂಗಳೂರಿನ ಧೊರೆಯೂ ಕುಳಿತುಕೊಂಡಿದ್ದಾರೆ. ಲಲಿತೆ, 'ಯಾರೋ ಏನೋ?' ಎಂದುಕೊಂಡು ಗಮನಿಸದೆ ಅವಸರವಸರವಾಗಿ ಒಳಗೆ ಹೋದಳು. ಆದರೆ ಹೊರಗಿನವರ ಮಾತು ಒಳಗೂ ಕೇಳಿಸಿತು.

"ಏನೋ, ರಾಜಾರಾಮ ಹುಡುಗಿಯನ್ನು ಚೆನ್ನಾಗಿ ನೋಡಿದೆಯೋ ಇಲ್ಲವೋ?"

"ನಾನು ಮೊದಲೇ ಹೇಳಿಲ್ಲವೇ, ಆಚಾರ್ಯರೇ ನಿಮಗೆ! 'ಹುಡುಗಿಯನ್ನು ನೋಡುವ ಅಗತ್ಯವೇ ಇಲ್ಲ' ಎಂತ."

"ಹಾಗಾದರೆ ಮದುವೆಯಾಗುವ ಮೊದಲು ಹುಡುಗಿಯನ್ನು ನೋಡಬಾರದೆಂಬ ಆ ಹಳೆ ಕಾನೂನಿನಲ್ಲಿ ಇನ್ನೂ ನಿಮಗೆ ನಂಬಿಕೆ ಇದೆ!" ಗಣೇಶರಾಯರು ಹೇಳಿದರು.

"ಹಾಗಲ್ಲ; ನೋಡಿದರೆ ಎಲ್ಲಿ ದೃಷ್ಟಿಯಾಗಿ ಬಿಡುತ್ತೋ ಎಂದು ಹೆದರುತ್ತಾನೆ."

"ಇನ್ನು ಹೋಗೋಣವೇನು, ಆಚಾರ್ಯರೇ!" ಎಂದು ರಾಜಾರಾಮ

ಕೇಳಿದಾಗ, " ನೀನು ಹೋಗು ನಾನೀಗ ಬರುತ್ತೇನೆ " ಎಂದರು ಆಚಾರ್ಯರು ರಾಜಾರಾಮ ಹೊರಟ.

" ಮದುವೆಯಾದ ಹಾಗೇ, ಗಣೇಶರಾಯರೇ! " ಎಂದರು ಆಚಾರ್ಯರು ರಾಜಾರಾಮ ಅತ್ತ ತೆರಳಿದ ಮೇಲೆ.

" ನಿಮ್ಮಿಂದು ಬಹಳ ಉಪಕಾರವಾಯಿತು, ಆಚಾರ್ಯರೇ! "

" ಅದರಲ್ಲೇನು, ರಾಯರೇ! ಮನುಷ್ಯರಾಗಿ ಹುಟ್ಟುವುದೇ ಉಪಕಾರ ಮಾಡುವುದಕ್ಕೆ. ಹಾಗೆ ನೋಡಿದರೆ, ಈಗ ನಿಮ್ಮಿಂದಲೂ ನನಗೆ ಉಪಕಾರ ವಾಗಲಿಲ್ಲವೇ? ನೀವೀಗ ನನ್ನ ಮಗನ ಉಪನಯನಕ್ಕೆ ಒಂದು ಸಾವಿರ ಕೇಳಿದ ತತ್‌ಕ್ಷಣ ಕೊಡಲಿಲ್ಲವೇ? "

" ಹುಡುಗಿ ಅವನಿಗೆ ಒಪ್ಪಿಗೆಯಾಯಿತೇನು? "

" ಅವನು ಹೇಳಿದ್ದಲ್ಲವೇ! ಆ ವಿಷಯ ಕೇಳುವುದೇ ಬೇಡ? ನೀವು ನಿಮ್ಮ ಹುಡುಗಿಗೆ ಹುಡುಗನಿಲ್ಲದೆ ಎಷ್ಟು ಕಷ್ಟ ಪಡುತ್ತಿದ್ದೀರೋ ಅಷ್ಟೆ ಕಷ್ಟಪಡುತ್ತಿದ್ದಾನೆ, ಅವನು ಹುಡುಗಿ ಸಿಕ್ಕದೆ. "

" ................ "

" ಇರಲಿ; ನಾನು ಶುಭಮುಹೂರ್ತ ನೋಡಿ ಮತ್ತೆ ಕಾಗದ ಬರೆಯು ತ್ತೇನೆ. ನಮಸ್ಕಾರ! "

" ನಮಸ್ಕಾರ! "

ಆಚಾರ್ಯರು ಹೊರಟು ಹೋದರು. ಗಣೇಶರಾಯರಿಗೆ ಸ್ವರ್ಗವೇ ಕೈಗೆ ಸಿಕ್ಕಿದಷ್ಟು ಸಂತೋಷವಾಯಿತು.

ಲಲಿತೆಯೂ ಹಿರಿ ಹಿರಿ ಹಿಗ್ಗಿದಳು. ಹಾಗಾದರೆ ಬ್ರಹ್ಮನು ತನಗೂ ಒಬ್ಬ ಗಂಡನನ್ನು ಸೃಷ್ಟಿಸಿದ್ದಾನೆ.

ಆಚಾರ್ಯರು ಹೇಳಿದಂತೆ, ಲಲಿತೆ ಗಂಡು ಸಿಕ್ಕದೆ ಕೊಳೆಯುತ್ತಿದ್ದಂತೆ, ರಾಜಾರಾಮನೂ ಹೆಣ್ಣು ಸಿಕ್ಕದೆ ಪೇಚಾಡುತ್ತಿದ್ದ. ಇದಕ್ಕೆ ಲಲಿತೆಯ ದೇಹಸ್ಥಿತಿ ಎಷ್ಟರ ಮಟ್ಟಿಗೆ ಕಾರಣವೋ, ಅಷ್ಟೇ ಕಾರಣ ರಾಜಾರಾಮನ ದೇಹಸ್ಥಿತಿ. ಅವನು ಜನನಿಯ ಉದರದಿಂದ ಕೆಳಗೆ ಬೀಳುವಾಗಲೇ ಇದು ವರ್ಷದ ಶಿಶುವಿನಷ್ಟು ದೀರ್ಘ ದೇಹ ಭಾರಿಯಾಗಿದ್ದ. ಇದಕ್ಕಾಗಿಯೇ ಅವನ ತಾಯಿ ಅವನನ್ನು ಪ್ರಸವಿಸುವಾಗ ನಾಲ್ಕುದಿನ ಹಗಲು ರಾತ್ರಿಯೆನ್ನದೆ ನೋವು ತಿನ್ನಬೇಕಾಯಿತು. ಮುಂದೆ ವರ್ಷಗಳು ಕಳೆದಂತೆ ಭೂತಗಳೂ

ಹೆದರುವಂತೆ ಅವನು ಬಳೆದು ಬಿಟ್ಟ. ಇತಿಹಾಸಕಾರರು ಬಾಬರನು ಕಂಕುಳಲ್ಲಿ, ಎರಡು ಆಳುಗಳನ್ನು ತುರುಕಿಕೊಂಡು ಗೋಡೆಯ ಮೇಲೆ ಓಡಾಡುತ್ತಿದ್ದ, ಎಂದು ಮುಂತಾಗಿ ಉಲ್ಲೇಖಿಸಿದ್ದಾರೆ. ರಾಜಾರಾಮ ಬಾಬರನಿಗಿಂತಲೂ ಮಹಾಪುರುಷ. ಅವನು ಶಿರದ ಮೇಲೆ, ತೋಳ್ದಲೆಯ ಮೇಲೆ, ಕರಗಳಲ್ಲಿ, ಬೆನ್ನಿನ ಮೇಲೆ, ಒಂದೇ ಬಾರಿ ಎಂಟು ಬಾಲಕರನ್ನೇರಿಸಿಕೊಂಡು ರಾಯಲ್ ಮೆಯಿಲ್ ಸ್ಪೀಡಿನಲ್ಲಿ ಹರದಾರಿಗಳ ದೂರಕ್ಕೆ ಓಡುತ್ತಿದ್ದ. ಅವನ ವೇಗಕ್ಕೆ ಕುಳಿತುಕೊಂಡವರಿಗೆ ಉಸಿರ್ಗಟ್ಟಿ, ಅವರೇ, 'ಸಾಕು ಮಹರಾಯ, ದಮ್ಮಯ್ಯ, ಇಳಿಸಿಬಿಡು' ಎನ್ನಬೇಕೇ ಹೊರತು, ಅವನಾಗಿಯೇ ಎಂದೂ ಇಳಿಸುವವನಲ್ಲ. ಇಷ್ಟಾದರೂ ಪುಣ್ಯಾತ್ಮನ ಹಣೆಯಲ್ಲಿ ಒಂದು ಹನಿಯಾದರೂ ಬೆವರು ಮೂಡುತ್ತಿರಲಿಲ್ಲ. ಮುಂದೆ ಪ್ರಾಯ ಹೆಚ್ಚಿ ಮದುವೆಗೆ ಸಿದ್ಧನಾದಾಗ ಒಬ್ಬರೂ ಇವನಿಗೆ ಹೆಣ್ಣು ಕೊಡಲು ಸಮ್ಮತಿಸಲಿಲ್ಲ. ಹುಡುಗಿಯರಂತೂ ಇವನನ್ನು ನೋಡಿದ ಮಾತ್ರಕ್ಕೇ ಹರದಾರಿ ದೂರ ಸರಿಯುತ್ತಿದ್ದರು. "ಇದು ಬೇಡವಪ್ಪ; ಇದು ಪೈಲವಾನರ ಜಾತಿ. ಎಲ್ಲಿಯಾದರೂ ಮದುವೆಯಾದರೆ, ಮುಂದೆ ನಮ್ಮನ್ನು ಕುಸ್ತಿಗೆ ಕರೆದರೆ ಏನು ಗತಿ?" ಎಂದು ಹೆದರುತ್ತಿದ್ದರು. ಇಂಥವನಿಗೂ, ಲಲಿತೆಗೂ ಬ್ರಹ್ಮಗಂಟು ಹಾಕಿದ್ದ.

ಆಚಾರ್ಯರು ಹೇಳಿದಂತೆ ಶುಭಮುಹೂರ್ತವನ್ನು ನೋಡಿ ಟಪ್ಪಾಲು ಬರೆದರು. ಒಬ್ಬಳೇ ಮಗಳ ಮದುವೆಯಾದುದರಿಂದ ವಿಜೃಂಭಣೆಗೇನೂ ಕಡಿಮೆಯಾಗಲಿಲ್ಲ. ಆಚಾರ್ಯರಿಗೆ ಕೈತುಂಬಾ ದಕ್ಷಿಣೆ, ಬಾಯ್ತುಂಬಾ ತವಲಾಯ ದೊರಕಿತು. ಬೆಟ್ಟದಂಥಃ ಹೊಟ್ಟೆಯವರ ಹೊಟ್ಟೆಯೊಳಗೆ ಬಿದ್ದ ಹೋಳಿಗೆ, ಲಾಡುಗಳ ಗಣಿತವನ್ನು ಯಾರೂ ಮಾಡಿದವರಿಲ್ಲ. ಆ ಹೋಳಿಗೆಗಳ ಮೇಲೆ ಸುರಿದ ತುಪ್ಪವೆಷ್ಟಾದೀತೋ, ಸುರಿದವರಿಗೇ ಗೊತ್ತು. ಆದರೆ, ವಧೂವರರು ಮಾತ್ರ ನಾಚಿಕೆಯಿಂದ ಒಂದೇ ಹೋಳಿಗೆಯನ್ನಾಗಲೀ ಮುಟ್ಟಿದವರಲ್ಲ. ಬಡಿಸುತ್ತಾ ಬಂದ ದಾಮೋದರನೇ ಹೇಳಿದನು:

"ಏನು ಭಾವಾ ಇದು? ಬಡಿಸಿದ್ದೆಲ್ಲಾ ಹಾಗೆಯೇ ಎಲೆಯಲ್ಲಿ ಇದೆಯಲ್ಲ! ನಿಮಗೇನು ಹೋಳಿಗೆ, ಲಾಡು ಸೇರುವುದಿಲ್ಲವೇ? ನೀವು ಎಂಥಃ ಭೀಮನಂಥಃ ಆಳು. ನೀವು ಕಡಿಮೆ ಪಕ್ಷ ಒಂದು ಖಂಡಿ ಹೋಳಿಗೆ, ಎರಡು ಹಂಡೆ ಪಾಯಸವನ್ನು ಖರ್ಚು ಮಾಡಲೇಬೇಕು."

ರಾಜಾರಾಮನು ಹೇಳಿದ: "ಸರಿ; ನೀನು ಹೇಳಿದಷ್ಟನ್ನು ತಿನ್ನು ಮಾತಿದ್ದರೂ, ಮದುವೆಯ ಸಮಯದಲ್ಲಿ ತಿನ್ನಲೇಬಾರದೆಂದು ಕಾನೂನೇ ಇದೆಯಲ್ಲ!"

"ಯಾರು ಹೇಳಿದವರು ನಿಮಗೆ?"

"ಮತ್ತೆ ಮದುವೆಯೆಂದರೆ ವಿಶೇಷವೇನು?"

"ಛೀ! ಇದೆಲ್ಲಾ ಸಾಗದು. ನೋಡಿ, ನೀವು ತಿನ್ನಲಿಲ್ಲವೆಂದು ಲಲಿತೆಯೂ ಮುಟ್ಟಲಿಲ್ಲ." ಎಂದು ರಾಜಾರಾಮು ಬೇಡವೆಂದರೂ ಕೇಳದೆ ತಂದದ್ದನ್ನೆಲ್ಲಾ ಎಲೆಯ ಮೇಲೆ ಸುರಿದು ಬಿಟ್ಟನು.

ರಾಜಾರಾಮನೂ ಏನೂ ವಿನೋದ ತಿಳಿಯದವನಲ್ಲ. "ಏನು ಮಹರಾಯ! ಮಾಡಿದ ಪಾಯಸವೆಲ್ಲಾ ಮುಗಿಯಿತೇ? ಇದ್ದರೆ ಇನ್ನಷ್ಟು ತಂದು ಹಾಕು. ಬೇಕಾದರೆ ಲಲಿತೆಯ ಪಾಲೂ ಇರಲಿ."

ಖರ್ಚಿನಲ್ಲಿ ಬಹಳ ಸೂಕ್ಷ್ಮರಾದ ಗಣೇಶರಾಯರೂ ದೂರದಲ್ಲೇ ಕುಳಿತುಕೊಂಡಿದ್ದರು. ಗಟ್ಟಿ ಹೇಳುವಂತಿಲ್ಲವಾದ್ದರಿಂದ ಮನಸ್ಸಿನಲ್ಲೇ ಎಂದುಕೊಂಡರು ಅವರು. "ಬೇಡವಾದರೆ ಬೇಡ. ಸುಮ್ಮನೆ ಬೇಡವಾದವರಿಗೆ ಹಾಕಿ ಯಾಕೆ ಹಾಳು ಮಾಡುತ್ತಾನಪ್ಪ!"

ಮದುವೆಯ ಮೂರೂ ದಿನಗಳೂ ಹೀಗೆ ಗದ್ದಲದಲ್ಲಿಯೇ ಇನ್ನಿಲ್ಲವಾದವು. ಈ ಮೂರೂ ದಿನವೂ ಊಟಮಾಡುವಾಗಲೂ, ಹಸೆಯ ಮೇಲೂ ಒಡನೆಯೇ ಕುಳಿತುಕೊಂಡಿದ್ದರೂ, ಲಲಿತೆ ಗಂಡನ ಮುಖವನ್ನು ನೋಡಿದವಳಲ್ಲ. ಹಾಗೆ ನೋಡಲು ಲಜ್ಜೆ ಬಿಡಲಿಲ್ಲ. ಒಂದು ವೇಳೆ ನೋಡುವುದಾದರೂ ಕಳ್ಳರಂತೆ ಓರೆಗಣ್ಣಿನಿಂದ ನೋಡಬೇಕು. ಅದೆಲ್ಲಾ ಲಲಿತೆಗೆ ಮನಸ್ಸಿರಲಿಲ್ಲ. 'ನೋಡುವುದಾದರೆ ಸರಿಯಾಗಿ ನೋಡಬೇಕು. ಇಲ್ಲವಾದರೆ ನೋಡುವುದೇ ಬೇಡ' ಎಂದು ತೀರ್ಮಾನಿಸಿಕೊಂಡಿದ್ದಳು.

ಮದುವೆಯ ಮರುದಿನ ಮದುಮಗಳು ಪತಿಗೃಹಕ್ಕೆ ಹೋಗಿ, ಮೂರನೆಯ ದಿನ ಗಂಡನೊಂದಿಗೇ ತವರು ಮನೆಗೆ ಬಂದಳು. ಆ ದಿನ ಮಾತ್ರ ಗಂಡನನ್ನು ಚೆನ್ನಾಗಿ ನೋಡುವುದಕ್ಕೆ ಯಾವ ಅಭ್ಯಂತರವೂ ಇರಲಿಲ್ಲ. ಎಂದೇ ಅವಳು ಆ ದಿನ ಗಂಡನನ್ನು ಚೆನ್ನಾಗಿ ನೋಡಿದಳು. ರಾಜಾರಾಮನ ದೇಹ ಹೇಸಿಗೆ ಹೊರತಾಗಿ ಮುಖವೇನೂ ಹೇಸಿಗೆಯಾಗಿರಲಿಲ್ಲ. ಅದೇ ರಾತ್ರಿ ಲಲಿತೆಯನ್ನು ತವರು ಮನೆಯಲ್ಲಿಯೇ ಬಿಟ್ಟು ರಾಜಾರಾಮು ಮಾತ್ರ

ತನ್ನ ಮನೆಗೆ ಹೋದ. ಆ ದಿನ ಇನ್ನೂ ಅವಳಿಗೆ ಚೆನ್ನಾಗಿ ಸ್ಮರಣೆಯಲ್ಲಿದೆ. ಆಕಾಶದಲ್ಲಿ ಶೀತಕರನುದಯಿಸಿ ಮೇಲೆರುತ್ತಾ ಬರುತ್ತಿದ್ದ. ತಂಗಾಳಿ ಎಡೆ ಬಿಡದೆ ತೀಡುತ್ತಿತ್ತು. ಹೊಳೆಯಲ್ಲಿ ಅಂಬಿಗ ದೋಣಿಯಲ್ಲಿ ಕಾಯುತ್ತಿದ್ದ. ಅಂಬಿಗನ ಹಾಡಿನೊಂದಿಗೆ ದೋಣಿ ತೇಲುತ್ತಾ ಹೋದಂತೆ, ರಾಜಾರಾಮನು ಲಲಿತೆಯ ಕಣ್ಣುಮುಂದಿಂದ ತೇಲುತ್ತಾ ಹೋದ. ದೋಣಿ ಕಣ್ಮರೆಯಾಗುವವರೆಗೂ ಅವಳು ನಿಂತು ನೋಡುತ್ತಿದ್ದಳು. ಆ ದಿನ ಬಹಳ ಹೊತ್ತಿನ ತನಕ ಅವಳಿಗೆ ನಿದ್ರೆ ಬರಲಿಲ್ಲ.

ಲಲಿತೆ ಈ ಮೊದಲೇ ಬಹಿಷ್ಠೆಯಾಗಿದ್ದಳು. ಮದುವೆಯಾದ ನಾಲ್ಕು ತಿಂಗಳ ಮೇಲೆ ಒಂದು ದಿನ ಗಣೇಶರಾಯರಿಗೆ ರಾಜಾರಾಮನ ಪತ್ರ ಬಂದಿತು. ಸಂಸಾರ ಹೂಡುವ ತನ್ನ ಅಭಿಲಾಷೆಯನ್ನು ಅದರಲ್ಲಿ ತಿಳಿಸಿದ್ದ. ಗಣೇಶರಾಯರ ಉತ್ತರ ಹೋಯಿತು.

ಚಿ। ರಾಜಾರಾಮನಿಗೆ,

ನಿನ್ನ ಪತ್ರ ತಲುಪಿ ಅಭಿಪ್ರಾಯವಾಯಿತು. ಅದಾಗಿ, ನಾವು ನಿನಗೆ ತಿಳಿಸುವುದೇನಂದರೆ, ನೀನು ನಿನ್ನ ತಾಯಿಯನ್ನು ಬಿಟ್ಟು, ನೀನೂ ಲಲಿತೆಯೂ ಇಬ್ಬರೇ ಸಂಸಾರ ಹೂಡಬೇಕು. ಹಾಗಾದರೆ ಮಾತ್ರ ಲಲಿತೆಯನ್ನು ಕಳುಹಿಸಿಕೊಡುವೆವು. ಇಲ್ಲವಾದರೆ ಕಳುಹಿಸಿಕೊಡಲು ಸಾಧ್ಯವಿಲ್ಲ ಎಂದು ತಿಳಿಸಲು ದುಃಖವಾಗುತ್ತದೆ.

ಇತಿ, ನಿನ್ನ ಮಾವ
ಗಣೇಶರಾಯ.

ರಾಜಾರಾಮನ ತಾಯಿ ಬಹಳ ಜೋರು, ದುಷ್ಟೆ ಎಂದು ಸುಶೀಲೆ ಕೇಳಿದ್ದಳು. ಅಂಥವಳ ನಡುವೆ ಲಲಿತೆಯ ಬಾಳು ಕಣ್ಣೀರಾಗಬಹುದೆಂದು ಅಂಜಿ, ಹಾಗೆ ಪತ್ರ ಬರೆಯಿಸಿದ್ದಳು.

ನೋಡಿ ರಾಜಾರಾಮನಿಗೆ ಕೋಪ ಬಂದಿತು. ಅವನಿಗೆ ತಾಯಿಯ ಮೇಲೆ ಪ್ರೀತಿ ಇದ್ದಿತೆಂದಲ್ಲ; ತನ್ನ ಹೆಂಡತಿಯ ಮನೆಯವರು ತನ್ನ ಮೇಲೆ ಅಧಿಕಾರ ನಡೆಯಿಸುವುದು ಆತನಿಗೆ ಮನಸ್ಸಿರಲಿಲ್ಲ. ಆದುದರಿಂದಲೇ ತಾಯಿ, “ಹಾಗಾದರೆ ಹಾಗೇ ಮಾಡಪ್ಪ; ನನಗೇನು? ನನಗೆ ಹೊಟ್ಟೆ-ಬಟ್ಟೆಗೆ ಕಡಿಮೆಯಾಗದಿದ್ದರೆ ಸರಿ!” ಎಂದರೂ ಒಲ್ಲದೆ ಹಿಂದೆ ಕಾಗದ ಬರೆದನು: ಅದರಲ್ಲಿ—

ಶ್ರೀ. ಸ. ಮಾವನವರಿಗೆ,

ನಿಮ್ಮ ಪತ್ರ ತಲ್ಪಿತು. ಓದಿ ಬಹಳ ಸಂತೋಷವಾಯಿತು. ಅದರಲ್ಲೂ ಲಲಿತೆಯನ್ನು ನಮ್ಮ ಮನೆಗೆ ಕಳುಹಿಸುವುದು ಮನಸ್ಸಿಲ್ಲವೆಂದು ತಿಳಿದು ಅತ್ಯಾನಂದವಾಯಿತು. ಚಿಂತಿಲ್ಲ. ನನ್ನ ತಾಯಿಯನ್ನು ಬೇರೆ ಹಾಕದೆ, ನನ್ನೊಂದಿಗೆ ಸಂಸಾರ ಹೂಡುವ ಹುಡುಗಿಯನ್ನೇ ನಾನು ಮದುವೆ ಯಾಗುತ್ತೇನೆ. ಲಲಿತೆ ಕೂಡಾ ಬೇರೆ ಮದುವೆ-ಯಾಗುವುದಕ್ಕೆ ಆಕ್ಷೇಪವಿಲ್ಲ.

ಇತಿ,

ರಾಜಾರಾಮ.

ಓದಿ ಗಣೇಶರಾಯರಿಗೆ ಸಿಡಿಲು ಒಡೆದಂತಾಯಿತು. ಕೂಡಲೇ ಕ್ಷಮೆ ಕೋರಿ ಕಾಗದಗಳನ್ನು ಬರೆದರು. ಎಷ್ಟು ಕಾಗದಗಳನ್ನು ಬರೆದರೂ ರಾಜಾರಾಮ ಬಗ್ಗಲಿಲ್ಲ. ಸುಶೀಲೆ, "ಒಹೋ! ಅವನಿಗೆ ಅಷ್ಟು ಅಹಂಕಾರವಿದೆಯೆಂದಾದರೆ, ಇಲ್ಲೇ ಇರಲಿ ಲಲಿತೆ. ನಮಗೇನು ನಮ್ಮ ಮಗಳು ಭಾರವಾಗಲಾರಳು." ಎಂದಳು. ಲಲಿತೆಗೆ ಕಷ್ಟದಿಂದ ಮದುವೆ ಯಾದರೂ, ಕೊನೆಗೆ ತವರು ಮನೆಯೇ ಗತಿಯಾಯಿತು.

ಹಾಗೆಯೇ ಎರಡು ಸಂವತ್ಸರಗಳು ಅದೃಶ್ಯವಾದವು. ಸುಶೀಲೆಯೂ, ರಾಜಾರಾಮನ ತಾಯಿಯೂ ಕಾಲವಾಗಿ ಹೋದರು. ತನ್ನ ತಾಯಿಯ ಪರಲೋಕನಿರ್ಯಾಣದ ಬಳಿಕ ರಾಜಾರಾಮನು ಮಂಗಳೂರನ್ನು ಬಿಟ್ಟು ಎಲ್ಲಿ ಹೋದನೆಂಬುದು ಯಾರಿಗೂ ಅರಿಯದ ವಿಷಯವಾಗಿತ್ತು. ಈಗ ನಾಲ್ಕು ಅಬ್ದಗಳೇ ಮುಗಿದಿವೆ. ಈ ನಾಲ್ಕು ವತ್ಸರವೂ ಲಲಿತೆ ಅಗಲಿದ ತನ್ನ ಸ್ವಾಮಿಯ ಧ್ಯಾನದಲ್ಲೇ ಇದ್ದಳು, ಆದರೆ, ತಾಯಿ ಸುಶೀಲೆ ಎಲ್ಲಕ್ಕೂ ಮೂಲವಾಗಿ ಅವಳ ಬಾಳ್ವೆಯನ್ನೇ ಕೆಡಿಸಿದ್ದಳು.

ಲಲಿತೆಯ ಪೂರ್ವಸ್ಮರಣೆಯ ಹೊನಲು ಬರಿದಾಗುತ್ತಿರುವಂತೆಯೇ, ಗಣೇಶರಾಯರು ತಮ್ಮ ಮಧ್ಯಾಹ್ನದ ಶ್ವಾಸನಿದ್ರೆಯನ್ನು ಮುಗಿಸಿಕೊಂಡು ಹೊರಗೆ ಬಂದರು.

"ಲಲಿತೆ!"

"ಏನಪ್ಪಾ?"

"ಗಂಟೆ ನಾಲ್ಕಾಯಿತಲ್ಲವೇ? ಇನ್ನು ಕಾಫಿಗೆ ಒಲೆಹಚ್ಚು. ಹಾಗೆಯೇ ಇವತ್ತು ಸಲ್ಪ ಹೆಚ್ಚು ಕಾಫಿ ತಯಾರಾಗಲಿ!"

“ ಅದೇಕಪ್ಪಾ, ಇವತ್ತು ಅಷ್ಟೊಂದು ಬಾಯಾರಿಕೆಯೇ? ”

“ ಅಯ್ಯೋ, ಹುಚ್ಚೀ! ಕಾಫಿಕುಡಿದರೆ ಬಾಯಾರಿಕೆ ಹೋಗುತ್ತದೆಯೇ ? ನಾನು ಹೇಳಲಿಲ್ಲವೇ ನಿನಗೆ? ”

“ ಏನದು? ”

“ ಹೇಳಲೇ ಇಲ್ಲವೇ, ಹಾಗಾದರೆ, ದಾಮುವಿನ ಮುಂಬಯಿಯ ಪತ್ರದ ಕುರಿತು! ”

“ ಇಲ್ಲ! ”

“ ಹಾಗಾದರೆ ಮರೆತೇ ಬಿಟ್ಟಿದ್ದೆ. ದಾಮುವಿಗೆ ಮುಂಬಯಿಯಲ್ಲಿ ರಾಜಾರಾಮು ಸಿಕ್ಕಿದ್ದಾನಂತೆ. ಇವತ್ತು ಅವನನ್ನು ಕರೆದುಕೊಂಡು ಬರುತ್ತೇನೆಂದು ಕಾಗದ ಹಾಕಿದ್ದಾನೆ. ”

“ ಅವರು ಬರಲು ಒಪ್ಪಿದರೇ? ”

“ ಫಕ್ಕನೆ ಒಪ್ಪಲಿಲ್ಲವಂತೆ. ನಾವು ಹಾಗೆ ಕಾಗದ ಹಾಕಿದ ಸಿಟ್ಟು ಇನ್ನೂ ಅವನಿಗೆ ಹೋಗಿಲ್ಲ. ಕೊನೆಗೆ ಇವನ ಒತ್ತಾಯಕ್ಕೆ ಹೂಂ, ಎನ್ನಬೇಕಾಯಿತು. ಮದ್ರಾಸ್ ಲೆಯಿನಿನಲ್ಲಿ ಹೊರಟಿದ್ದಾರೆ. ಇವತ್ತು ಬಂದಾರು. ”

“ ಹಾಗಾದರೆ, ಅವರು ಬರುವಾಗ ಒಂಭತ್ತು ಗಂಟೆ ಹೇಗೂ ಆಗುತ್ತದೆ. ಆಗ ಊಟದ ಸಮಯವಲ್ಲವೇ! ಕಾಫಿ ಏತಕ್ಕೆ? ”

“ ಏನಾಯಿತು? ಕಾಫಿ ಕುಡಿದೇ ಊಟ ಮಾಡುತ್ತಾರೆ. ನೀನೀಗ ಹೋಗು. ಕಾಫಿ ಮಾಡು. ”

ಲಲಿತೆ ಸಂತೋಷದಿಂದ ಅಡುಗೆ ಮನೆಗೆ ತೆರಳಿದಳು.

ದಾಮೋದರನು ತನ್ನ ಆಂಗ್ಲ ಗ್ರಂಥವೊಂದನ್ನು ಪ್ರಕಟನೆಗಾಗಿ ಮುಂಬಯಿಗೆ ಕಳುಹಿಸಿದ್ದನು. ಪ್ರಕಾಶಕರು ಸ್ವತಃ ಬಂದು ಮಾತಾನಾಡ್ಬವಂತೆ ಕಾಗದ ಬರೆದುದರಿಂದ ಮುಂಬಯಿಗೇ ಹೋಗಬೇಕಾಯಿತು. ಮುಂಬಯಿಯಲ್ಲಿ ಲಾಜ್ ಹೌಸಿನ ಮೂರನೆಯ ಮಾಳಿಗೆಯ ಮೂರನೇ ಕೋಣೆಯನ್ನೇ ಬಾಡಿಗೆಗೆ ತೆಗೆದುಕೊಂಡನು. ಅವನ ಕೋಣೆಯ ಆಚೆಗಿರುವುದು ಕಡೇ ಕೋಣೆ. ಒಂದು ದಿವ ಸಂಜೆ ಆ ಕೋಣೆಯವನು ಅಡ್ಡಾಡ ಹೋಗುವಾಗ ದಾಮೋದರನು ಅಕಸ್ಮಾತ್ ಅವನನ್ನು ನೋಡಿದನು– ರಾಜಾರಾಮು! ರಾಜಾರಾಮುನು ದಾಮೋದರನನ್ನು ನೋಡಿದರೂ, ನೋಡ

ದವನಂತೆ, ಗುರುತರಿಯದವನಂತೆ ಹೊರಟು ಹೋದನು. ಆದರೆ, ದಾಮೋದರ ಬಿಡಲಿಲ್ಲ. ಅದೇ ರಾತ್ರಿ ರಾಜಾರಾಮ ಬರುವುದನ್ನೇ ಕಾದುಕೊಂಡಿದ್ದು, ನೇರಾಗಿ ಅವನ ಕೋಣೆಗೇ ಹೋದನು.

" ಏನು, ಭಾವಾ! ನಿಮಗೆ ನನ್ನ ಮೇಲೆಯೂ ಸಿಟ್ಟೇ? "

" ನನಗೆ ಯಾರ ಮೇಲೆಯೂ ಸಿಟ್ಟಿಲ್ಲವಪ್ಪ! "

" ಮತ್ತೇಕೆ ನೋಡಿದರೂ ಮಾತನಾಡದೆ ಹಾಗೆಯೇ ಹೋದಿರಿ. "

" ನಾನು ನೋಡಲಿಲ್ಲ. "

" ಅಪ್ಪ ನಿಮ್ಮನ್ನು ಮನೆಗೆ ಕರೆದುಕೊಂಡು ಹೋಗಲು ನನ್ನನ್ನು ಕಳುಹಿಸಿದ್ದಾರೆ. " ಎಂದು ಸುಳ್ಳಾಡಿದನು.

" ನಾನು! ನಿಮ್ಮ ಮನೆಗೆ? "

" ಹೂಂ! ಏನು, ಬರುವುದು ತಪ್ಪೇ? "

" ನಮ್ಮ-ನಿಮ್ಮ ಸಂಬಂಧ ಅವತ್ತೇ ಕಡಿದು ಹೋಗಿದೆ. "

" ಹಾಗಾದರೆ, ಲಲಿತೆ ನಿಮ್ಮನ್ನು ಉರ್ಮಿಳೆಯಂತೆ ಕಾದುಕೊಂಡಿದ್ದಾಳಲ್ಲಾ! "

" ಅದು ಅಗತ್ಯವೇ ಇರಲಿಲ್ಲ. ಅವಳಿಗೆ ಮನಸ್ಸಿದ್ದರೆ, ಅವತ್ತೇ ನಮ್ಮ ಮನೆಗೆ ಬರಬಹುದಿತ್ತಲ್ಲ! ಹಾಗೆಲ್ಲಾ ಕಾಗದ ಬರೆಯುವ ಅಗತ್ಯವೇನಿತ್ತು? "

" ಓಹೋ! ಹಾಗಾದರೆ ಆ ಕಾಗದದ ಸಿಟ್ಟು ಇನ್ನೂ ನಿಮಗೆ ಹೋಗಿಲ್ಲವೆಂದಂತಾಯಿತು. ಕೇಳಿ, ಭಾವಯ್ಯಾ! ಅದೆಲ್ಲಾ ಅಮ್ಮನ ತಪ್ಪು; ಲಲಿತೆಗೂ ಆಗ ಬುದ್ಧಿಯಿರಲಿಲ್ಲ. ಏನೆಂದರೂ ಚಿಕ್ಕ ವಯಸ್ಸಲ್ಲವೇ? ಈಗ ಅಮ್ಮ ಸತ್ತ ಮೇಲೆ................ "

" ಏನು, ನಿನ್ನಮ್ಮ ಸತ್ತು ಹೋದಾಯಿತೋ? "

" ಎರಡು ವರ್ಷವಾಯಿತು. ಈಗ ಎಲ್ಲರಿಗೂ ಬುದ್ಧಿ ಬಂದಿದೆ. ಅಪ್ಪನೂ ನಿಮ್ಮ ಕಾಲು ಹಿಡಿದು ಕ್ಷಮೆ ಯಾಚಿಸಲು ತಯಾರಾಗಿದ್ದಾರೆ. "

" ಹಾಗಾದರೆ, ನಾನು ಬರಬೇಕೆಂದು ನೀನು ಹೇಳುವುದೇ? "

" ಹೂಂ! "

" ಆಯಿತು; " ಎಂದನು ರಾಜಾರಾಮ.

ರಾಜಾರಾಮನೂ, ದಾಮೋದರನೂ ರೈಲಿನಿಂದಿಳಿದು ಮನೆ ಮುಟ್ಟ

ಬೇಕಾದರೆ ರಾತ್ರಿ ಒಂಭತ್ತು ಗಂಟೆಯಾಗಿತ್ತು. ಗಣೇಶರಾಯರೇ ಸ್ವಾಗತಿಸಿದರು. ಲಲಿತೆಗೆ ರಾಜಾರಾಮ ಬಂದುದರಿಂದ ಸಂತೋಷವಾದರೂ, ನಾಚಿಕೆಯಿಂದ ಹೊರಗೆ ಬರಲಿಲ್ಲ. ಕೊನೆಗೆ ಗಣೇಶರಾಯರು ಕಾಫಿ ತರ ಹೇಳಿದಾಗಲೂ, ಲಜ್ಜೆಯಿಂದಲೇ ಹೊರಗೆ ಬಂದಳು.

"ಅಯ್ಯೋ! ಲಜ್ಜೆ ಬೇಡಾ! ನಾವೇನು ಪರಕೀಯರಲ್ಲ." ಎಂದು ರಾಜಾರಾಮನೂ ಹೇಳಿದನು. ಆದರೂ ಲಲಿತೆ ನಾಚಿಕೆಯಿಂದಲೇ ಒಳಗೆ ಹೋದಳು.

ದಾಮೋದರನೂ, ರಾಜಾರಾಮನೂ ಹೊರಗೆ ಭಾವಡಿಯಲ್ಲಿ ತಂಗಾಳಿಗೆ ಮೈಯೊಡ್ಡಿ ಮಾತುಕಥೆಯಾಡುತ್ತಿದ್ದರು. ಹನ್ನೊಂದು ಗಂಟೆಯಾಯಿತು. ಲಲಿತೆಯೇ ಊಟಕ್ಕೆ ಕರೆಯಬಂದಳು. ಊಟಕ್ಕೆ ಕರೆದು ಒಳಗೆ ಓಡುವುದರಲ್ಲಿದ್ದಳು. ರಾಜಾರಾಮ ಕೈಹಿಡಿದು ನಿಲ್ಲಿಸಿಕೊಂಡ.

"ಓಡಬೇಡಾ! ನಾವೇನು ಹುಲಿಗಳಲ್ಲ; ನಿನ್ನನ್ನು ತಿನ್ನಲಿಕ್ಕೆ ಬರುವುದಿಲ್ಲ!"

"ಹಾಂ! ಭಾವಾ! ನೀವು ಬೊಂಬಾಯಿಯಿಂದ ಲಲಿತೆಗೇನೋ ಬಹುಮಾನ ತಂದಿದ್ದೀರೆಂದು ಹೇಳಿದ್ದಿಲ್ಲವೇ! ಅದನ್ನು ಕೊಡಲಿಕ್ಕಿಲ್ಲವೇ?" ಎಂದು ಕೇಳಿದನು ದಾಮೋದರ.

"ಅದಕ್ಕಲ್ಲವೇ ಕೈಹಿಡಿದು ನಿಲ್ಲಿಸಿಕೊಂಡದ್ದು."

"ಅಯ್ಯೋ! ಕೈಬಿಡಿ." ಎಂದಳು ಲಲಿತೆ.

"ನಾಲ್ಕು ವರ್ಷದ ಹಿಂದೆಯೇ ಹಿಡಿದಿದ್ದೇನೆ ಕೈ. ಇನ್ನು ಬಿಡುವುದು ಹೇಗೆ?" ಎಂದನು ರಾಜಾರಾಮ.

"ಮೊದಲು ಬಹುಮಾನ ತೋರಿಸಿಯಪ್ಪ." ಎಂದನು ದಾಮೋದರ.

"ಆಗಲಿ, ಎಂದು ರಾಜಾರಾಮ ಟ್ರಂಕಿನ ಬಾಗಿಲು ತೆರೆದನು. ಒಳಗೆ ಒಂದು ಕರ್ಪೂರದ ಚೆಲುವಾದ ಗೊಂಬೆ ಸುಖವಾಗಿ ಮಲಗಿ ನಿದ್ದೆ ಮಾಡುತ್ತಿತ್ತು.

"ಹಾ! ಬೊಂಬೆ!" ಎಂದಳು ಲಲಿತೆ.

ದಾಮೋದರನೂ, "ಥೂ! ಇದು ಗಸಂಟ್ ಪ್ರಸೆಂಟ್!" ಎಂದನು.

"ಹಾಗಲ್ಲವಯ್ಯ! ನಿನಗರಿಯದು. 'ಬೊಂಬೇ' ಗೆ ಹೋದ ಮೇಲೆ ಬೊಂಬೆ ತರದೆ ಇದ್ದರೆ ಆಗುತ್ತದೆಯೇ?"

" ಓಹೋ! ಗೊತ್ತಾಯಿತು! ಕರ್ಪೂರದ ಗೊಂಬೆ ಹಿಡಿದು ಆಡುತ್ತಾ ಲಲಿತೆ, ಇನ್ನು ಸ್ವಲ್ಪ ಸಮಯದಲ್ಲಿಯೇ ಜೀವವುಳ್ಳ ಗೊಂಬೆಯನ್ನು ಹಿಡಿದು ಆಡಲಿ, ಎಂದಲ್ಲವೇ ನಿಮ್ಮ ಯೋಚನೆ? "

ಮೂವರೂ ನಕ್ಕರು.

ಒಳಗಿನಿಂದ " ಊಟಕ್ಕೆ ಬನ್ನಿಯಪ್ಪ! " ಎಂದು ಕರೆದರು ಗಣೇಶ ರಾಯರು. ಎಲ್ಲರೂ ಒಳಗೆ ಹೋದರು.

ಊಟವು ವಿಶೇಷವಾಗಿತ್ತು. ದಾಮೋದರನು, " ಭಾವಾ! ಇವತ್ತು ಮದುವೆಯಲ್ಲವಷ್ಟೆ! ಇವತ್ತು ಎರಡು ಮಣ ಮೈಸೂರ ಒಡೆ ಹೊಡೆಯ ಬಾರದೆಂದು ಕಾನೂನೇನೂ ಇಲ್ಲವಷ್ಟೆ! " ಎಂದನು.

" ಆದರೂ ಹೆಂಡತಿಯ ಮನೆಯಲ್ಲಿ ತಿನ್ನಬಾರದೆಂದು ಕಾನೂನಿದೆ ಮಹರಾಯ! " ರಾಜಾರಾಮನ ಉತ್ತರ ದೊರೆಯಿತು.

ಆ ದಿನವೂ ಕಳೆಯಿತು. ಮರುದಿನ ಸಂಜೆ ದಾಮೋದರನು ಭಾವ ನನ್ನು ಸಮುದ್ರ ತೀರಕ್ಕೆ ಕರೆದುಕೊಂಡು ಹೋದನು. ಸಮುದ್ರವು ಏರು ಮೊಗವಾಗಿತ್ತು. ನಗಗಳೊಂದಾದರೂ ಚಲಿಸುತ್ತಿರಲಿಲ್ಲ. ಅಂತರಿಕ್ಷವನ್ನೆಲ್ಲ ತಾನೇ ತಾನಾಗಿ ವ್ಯಾಪಿಸಿಕೊಂಡ ಬೆಳ್ಮುಗಿಲ ವರ್ಚಸ್ಸಿನಿಂದ ಆ ಮುನ್ನೀರ ವರ್ಣವು ನಸುನೀಲವಾಗಿತ್ತು. ಅಲ್ಲಲ್ಲಿ ಕೆಲವು ಬೆಸ್ತರು ಬಲೆಗಳನ್ನು ಬೀಸಿ ದ್ದರು. ದಾಮೋದರನೂ, ರಾಜಾರಾಮನೂ ಎಷ್ಟೋ ಹೊತ್ತು ಚಿಕ್ಕ ಮಕ್ಕಳಂತೆ ಮರಳ ಪುಂಜದ ಮೇಲೆ ' ಜುರ್, ಜುರ್ ' ಎಂದು ಸದ್ದಾಗು ವಂತೆ ನಡೆದರು. ಸುತ್ತ ಎಲ್ಲೆಲ್ಲೂ ಬಣ್ಣ ಬಣ್ಣದ ವಿವಿಧಾಕಾರದ ಚಿಪ್ಪು ಗಳು ಹರಡಿಕೊಂಡಿದ್ದವು. ಇಬ್ಬರೂ ಅದನ್ನು ಹೆಕ್ಕಲಾರಂಭಿಸಿದರು. ಹೆಕ್ಕುತ್ತಾ, ಹೆಕ್ಕುತ್ತಾ ಇಬ್ಬರೂ ಒಬ್ಬರೊಬ್ಬರ ಕಣ್ಣಿಗೆ ಕಾಣದಷ್ಟು ದೂರ ವಾಗಿ ಬಿಟ್ಟರು.

" ಹಲ್ಲೋ! ರಾಜಾರಾಂ! "

ರಾಜಾರಾಮ ಹಿಂದಿರುಗಿ ನೋಡಿದನು. ಕೊಂಚ ದೂರದಲ್ಲೇ ಯಾರೋ ಒಬ್ಬ ಬರುತ್ತಿದ್ದನು.

" ರತ್ನಾಕರನೇ? "

" ಹೂಂ! ಏನು ಮಹರಾಯ, ನೀನು ಮುಂಬಯಿಯಿಂದ ಹೇಳದೆ ಕೇಳದೆ ಜಾರಿಬಿಟ್ಟೆ. ನಮಗೆಲ್ಲಾ ಬಹಳ ಆಶ್ಚರ್ಯವಾಯಿತು! "

" ಪರಿಸ್ಥಿತಿ ಹಾಗೆ ಬಂತಯ್ಯಾ, ಅಲ್ಲದೆ ಮದುವೆಯಾದವರು ಎಷ್ಟು ಸಮಯ ತಾನೇ ಮುಂಬಯಿ, ಢಿಲ್ಲಿ ಎಂದಿರುವುದಕ್ಕಾಗುತ್ತೆ! "

" ನಿನಗೆ ಮದುವೆಯಾಗಿದೆಯೇ? ಆಶ್ಚರ್ಯ! ಇಷ್ಟರ ತನಕ ಕೇಳಿರಲಿಲ್ಲ. ನನಗೇತಕಯ್ಯ ಹೇಳಲಿಲ್ಲ? ನಾನು ಬಂದರೇನು ಎರಡು ಖಂಡಿ ಲಾಡು ಖರ್ಚಾದೀತೆಂದು ಹೆದರಿದಿಯಾ? "

" ಇವತ್ತು ಬಾ, ಮದುವೆಯ ಕಾಫಿಯನ್ನೂ ಕೊಡಿಸುತ್ತೇನೆ. ನನ್ನ ಹೆಂಡತಿಯನ್ನೂ ತೋರಿಸುತ್ತೇನೆ. "

" ಹೇಗೆ? "

" ನೀನೇ ನೋಡಿ ಹೇಳು. "

" ಸಂತೋಷ! "

" ಇರಲಿ; ನೀನೇತಕ್ಕೆ ಬಂದೆ ಈಗ? "

ಬರಬೇಕಾಯಿತು. ನನ್ನ ಹೆಂಡತಿ ಕ್ಷಯದಿಂದ ಸಂಪೂರ್ಣ ಸೊರಗಿದ್ದಾಳೆ. ಅವಳಿಗೆ ಹಳ್ಳಿಯ ಹವೆಯೇ ಒಳ್ಳೆಯದೆಂದರು ಡಾಕ್ಟರ್! "

" ಗ್ರಹಚಾರ! "

ದೂರದಲ್ಲಿ ದಾಮೋದರನು ಬರುತ್ತಿದ್ದನು

" ಯಾರು ದಾಮೋದರನೇ? " ಎಂದನು ರತ್ನಾಕರ.

" ರತ್ನಾಕರನಿಗೆ ಸಲಾಮು! " ಹೇಳಿದನು ದಾಮೋದರ.

ಮೂವರೂ ಮನೆಯ ಕಡೆಗೆ ಮೊಗದಿರುಗಿಸಿದರು. ಗಣೇಶರಾಯರು ಇವರನ್ನು ನೋಡಿದ ಕೂಡಲೇ

" ಏತಕ್ಕಾಗಿ ಇಷ್ಟು ಹೊತ್ತಾಯಿತು? " ಎಂದು ಕೇಳದಿರಲಿಲ್ಲ.

ರಾಜಾರಾಮನು ನಗುತ್ತಾ, " ಏನು, ನಾವು ಹೋದವರು ಸಮುದ್ರದಲ್ಲಿ ಮುಳುಗಿ ತೇಲಿ ಹೋದೆವೆಂದು ಭಾವಿಸಿದಿರಾ? " ಎಂದನು.

" ಸ್ವಲ್ಪ ಅಂಜಿಕೆಯಾಯಿತು. " ಎನ್ನುತ್ತಾ ಗಣೇಶರಾಯರು ರತ್ನಾಕರನ ಕಡೆಗೆ ತಿರುಗಿ, " ನೀನು ಯಾವಾಗಪ್ಪಾ ಬಂದೆ, ರತ್ನಾಕರ ? "

" ನಾಲ್ಕು ದಿನವಾಯಿತು. "

" ಹಾಗೋ! ಒಳಗೆ ಬನ್ನಿ. " ಎಂದು ಕರೆದುಕೊಂಡು ಹೋದರು. ರಾಜಾರಾಮನೂ ರತ್ನಾಕರನೂ ಖುರ್ಚಿಯ ಮೇಲೆ ಕುಳಿತುಕೊಂಡರು. ದಾಮೋದರನ ಸ್ವಾರಿ ಒಳಗೆ ಹೋಯಿತು.

ದಾಮೋದರನು ಕಾಫಿಯನ್ನೂ, ಲಲಿತೆ ತಿಂಡಿಯ ತಟ್ಟೆಯನ್ನೂ ತೆಗೆದುಕೊಂಡು ಬಂದರು. ಲಲಿತೆ ಒಳಗೆ ಹೋದ ಮೇಲೆ,

" ಏನು, ನಿನ್ನ ' ಎಸ್ಸೆಂಟ್ ' ಉಂಟೋ ಇಲ್ಲವೋ? " ಎಂದನು ರಾಜಾರಾಮ.

" ಅದೆಯೋ? "

" ಹೂಂ! "

" ನಾನು ನೋಡುವಾಗ ಬಹಳ ಸಪೂರವಾಗಿದ್ದಳಲ್ಲಾ! "

" ಹೌದು; ಇದ್ದಹಾಗೆಯೇ ಇರುತ್ತಾಳೇನು? ಈಗ ಬಳೆದು ಬಿಟ್ಟಿದ್ದಾಳೆ. "

ರತ್ನಾಕರನು ಪೆಚ್ಚಾದ. ಈಗಣ ಲಲಿತೆಯನ್ನೂ, ತನ್ನ ಪತ್ನಿಯನ್ನೂ ಹೋಲಿಸಿಕೊಂಡ. ನಾಲ್ಕು ವರ್ಷಗಳ ಹಿಂದೆ ಲಲಿತೆ ಸಪೂರವಾಗಿದ್ದಳು. ಅವನ ಪತ್ನಿ ತೋರವಾಗಿದ್ದಳು. ಈಗ ಲಲಿತೆ ತೋರವಾಗಿ, ಅವನ ಪತ್ನಿ ನಾಲ್ಕು ವರ್ಷದ ಹಿಂದಿನ ಲಲಿತೆಗಿಂತಲೂ ಸಪೂರವಾಗಿದ್ದಳು. ಇದೆಂಥ ವೈಪರಿತ್ಯ! ರೂಪ, ದೇಹಾಕೃತಿಗಳಿಗೆ ಮರುಳಾಗಬೇಡ ಎಂದು ದೇವರೇ ತನಗೆ ಹೀಗೆ ಬುದ್ಧಿಗಲಿಸಿದನೋ? ಎಂದು ಮುಂತಾಗಿ ವೇದಾಂತದ ಕಡೆಗೂ ಅವನ ಮನಸ್ಸು ಓಡಿತು.

ಮರುದಿನವೂ ಯಥಾ ಪರಿ ಕಡಲ ಕಿನಾರೆ: ಆ ದಿನ ಸಂಜೆ ರಾಜಾರಾಮನು ಮಂಗಳೂರಿಗೆ ಹೋಗುವವನಾದ ಕಾರಣ ಲಲಿತೆಯೂ, ರಜಾರಾಮನೂ ಮುಂಜಾನೆಯೇ ಕಡಲತಡಿಗೆ ತೆರಳಿದರು. ಅಲ್ಲಿ ಮರಳಿನಲ್ಲಿ ಸಾಧಾರಣ ಮೂರು-ನಾಲ್ಕು ತಾಸು ಕುಳಿತು ಏಳುತ್ತಾ ಬೀಳುತ್ತಿರುವ ತೆರೆಗಳ ಗಣಿತವನ್ನು ಮಾಡಿದರು. ಇವುಗಳ ಮಧ್ಯೆ ಪ್ರಣಯ ವಿಲಾಸ, ಹಾವ ಭಾವ, ಶೃಂಗಾರ ಚೇಷ್ಟೆಗಳೆಷ್ಟೋ ನಡೆದವು.

ಸಾಧಾರಣ ನಾಲ್ಕು ಗಂಟೆಗೆ ಹೊರಡಲು ಸಿದ್ಧನಾಗಿ ರಾಜಾರಾಮನು ಲಲಿತೆಯೊಡನೆಯೂ, ಗಣೇಶರಾಯನೊಡನೆಯೂ, ' ಹೋಗಿಬರುತ್ತೇನೆ. ' ಎಂದು ಹೇಳಿ ಮುಗಿಸಿ ದಾಮೋದರನ ಬಳಿಗೆ ಹೋದನು.

" ದಾಮೂ! ಹೋಗಿ ಬರುತ್ತೇನೆ. "

" ಹೂಂ! "

" ಬೆಳಿಗ್ಗೆ ನಿನ್ನೊಂದಿಗೆ ಸಮುದ್ರತೀರದಲ್ಲಿ ಒಬ್ಬ ಕಿಶೋರಿಯಿದ್ದಳಲ್ಲಾ!

ಯಾರವಳು? ”

ದಾಮೋದರನ ಮೋರೆ ಕೆಂಪು ಕೆಂಪಾಯಿತು.

“ ಓಹೋ! ಗೊತ್ತಾಯಿತು! ಹಾಗಾದರೆ ಇದೇ ರಜೆಯಲ್ಲಿ ಹೋಳಿಗೆ ಹಾಕಿಸಿಬಿಡು. ”

”ಅನುಕೂಲವಾದರೆ ನೋಡೋಣ. ” ಎಂದನು ದಾಮೋದರ.

ರಾಜಾರಾಮನು ಮಂಗಳೂರಿಗೆ ತೆರಳಿದನು.

೨

ರಾಜಾರಾಮ ಮಂಗಳೂರಿಗೆ ಹೋದ ಮೇಲೆ, ಲಲಿತೆಯನ್ನೂ ಮಂಗಳೂರಿಗೆ ಕರೆಯಿಸಿಕೊಳ್ಳಲು ಸಾಧಾರಣ ನಾಲ್ಕಾರು ತಿಂಗಳೇ ಹಿಡಿಯಿತು. ಅವನಿಗೆ ಗುಮಾಸ್ತೆಯ ಕೆಲಸವೇನೋ ಹುಜೂರ್ ಕಛೇರಿಯಲ್ಲಿ ಮಿತ್ರರೊಬ್ಬರ ಪ್ರಭಾವದಿಂದ ಅನಾಯಾಸವಾಗಿ ದೊರೆಯಿತು. ಆದರೆ, ಕೃಷ್ಣಭವನದಲ್ಲಿ ಬಾಡಿಗೆಗೆ ಒಂದು ಕೋಣೆ ಸಿಗಬೇಕಾದರೆ ಬಹಳ ಪೇಚಾಡಬೇಕಾಯಿತು. ಮಂಗಳೂರಲ್ಲಿ ನಾಲ್ಕಾರು ಮಾಳಿಗೆಯ ಕಟ್ಟಡದ ಊಟದ ಹೋಟಲುಗಳು ವರ್ಷದಲ್ಲಿ ನೂರಾರು ತಲೆಯೆತ್ತುತ್ತಿದ್ದವು. ಆದರೂ, ಬಾಡಿಗೆಯ ಕೋಣೆ ಸಿಗಲು ಕಷ್ಟವಾಗುತ್ತಿತ್ತು. ಹಾಗೆಂದು ಮಂಗಳೂರಲ್ಲಿ ಸಾಯುವವರ ಸಂಖ್ಯೆಯೇನೂ ಇಳಿದಿರಲಿಲ್ಲ. ಸಾಯುವವರ ಸಂಖ್ಯೆ ಹೆಚ್ಚಾಗಿದ್ದುದರಿಂದಲೇ ಸವುದೆಗೆ ಕೂಡಾ ಕ್ರಯ ಹೆಚ್ಚಾಗಿತ್ತು. ಆದರೆ ದಿನಕ್ಕೊಬ್ಬರು ಮಡಿದರೆ, ದಿನಕ್ಕೆ ಹತ್ತು ಮಂದಿ ಬೆಸನಾಗುತ್ತಿದ್ದರು. ಇಂಥಃ ಸ್ಥಿತಿಯಲ್ಲಿ ರಾಜಾರಾಮನಿಗೆ ಬಾಡಿಗೆಗೆ ಮನೆ ಸಿಕ್ಕಲಿಲ್ಲವೆಂದರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ. House To let ಎಂದು ಯಾವ ಮನೆಯ ಮುಂದೆಯೂ ಬೋರ್ಡ ತೂಗಾಡಿಕೊಂಡಿರಲಿಲ್ಲ. ಆದರೂ ಮನೆ ಹುಡುಕುವ ಅವನ ಕಾರ್ಯ ಭರದಿಂದ ಸಾಗಿಯೇ ಇತ್ತು

ಲಲಿತೆಗೆ ರಾಜಾರಾಮನಿಂದ ದಿನಕ್ಕೊಂದು ಪತ್ರ ಬರುತ್ತಿತ್ತು. ಲಲಿತೆ ಬರೆಯುತ್ತಿದ್ದ ಪ್ರತಿಯೊಂದು ಪತ್ರದಲ್ಲಿಯೂ ‘ ಮನೆ ಸಿಕ್ಕಿತೇ? ಸಿಕ್ಕಿತೇ? ’ ಎಂದು ಕೇಳಿಯೇ ಕೇಳುತ್ತಿದ್ದಳು. ರಾಜಾರಾಮನಿಗೆ ‘ಇಲ್ಲ, ಇಲ್ಲ’ ಎಂದು ಬರೆಯುವುದೇ ಕೆಲಸವಾಗಿತ್ತು. ನಾಲ್ಕಾರು ತಿಂಗಳುಗಳವರೆಗೂ ಈ ‘ಇಲ್ಲ, ಇಲ್ಲ’ ವನ್ನು ಓದಿ ಸಾಕಾಯಿತು ಲಲಿತೆಗೆ. ಬೇಸರ ಬಂದಿತು. ‘ ಒಂದು ಮನೆ ಹುಡುಕಾಡಲಿಕ್ಕಾಗದವರು ಇನ್ನು ಬಾಳ್ವೆ ಹೇಗೆ ಹೂಡುತ್ತಾರೋ?

ಎಂದುಕೊಂಡಳು. 'ಇನ್ನೇನಾದರೂ ಆಗಲಿ, ಮನೆಯ ಸುದ್ಧಿಯನ್ನು ಬರೆಯುವುದೇ ಇಲ್ಲ' ಎಂದು ನಿರ್ಣಯಿಸಿದಳು. ಆದರೆ, ರಾಜಾರಾಮನಿಂದಲೇ ಪತ್ರ ಬಂದಿತು.

ಚಿ। ಲಲಿತೆಗೆ,

ಆಶೀರ್ವಾದಗಳು. ನಿನಗೆ ಇನ್ನೂ ಇಲ್ಲಿ ಮನೆ ಸಿಗಲಿಲ್ಲವೆಂದ ತಿಳಿದು ಬಹಳ ಬೇಸರವಾಗಿದೆ ಎಂಬುದನ್ನು ನಾನು ಬಲ್ಲೆ. ಆದರೆ, ಏನು ಮಾಡಲಿ ಲಲಿತೆ? ಮನೆ ಹುಡುಕುವುದೆಂಬುದು ಬಹಳ ಪ್ರಯಾಸವಾಗಿದೆ. ಇನ್ನೊಂದು ತಿಂಗಳು ನಾನಿಲ್ಲಿದ್ದು ಮನೆ ಹುಡುಕುತ್ತೇನೆ. ಅಷ್ಟರೊಳಗೆ ಸಿಕ್ಕದಿದ್ದರೆ ನಾನೇ ನಿನ್ನ ಬಳಿಗೆ ಬರುತ್ತೇನೆ. ಬೇರೆಲ್ಲಿಗಾದರೂ ಹೋಗೋಣ. ಬೊಂಬಾಯಿಗಾದರೂ ಬೊಂಬಾಯಿಗೆ ಅಂತೂ ತಾಳ್ಮೆಯಿರಲಿ. ಬೇಸರ ಬೇಡ.

ರಾಜಾರಾಮ.

ಆದರೆ, ರಾಜಾರಾಮನು ಲಲಿತೆಯ ಬಳಿಗೆ ಬರಬೇಕಾಗಲಿಲ್ಲ. ಮುಂದೆ ನಾಲ್ಕಾರು ದಿನಗಳಲ್ಲಿಯೇ ಮನೆಸಿಕ್ಕಿದ ವಾರ್ತೆಯ ಪತ್ರ ಲಲಿತೆಗೆ ಬಂತು. ಲಲಿತೆ ಹಿರಿಹಿರಿ ಹಿಗ್ಗಿದಳು.

ರಾಜಾರಾಮನಿಗೆ ಗುಮಾಸ್ತೆಯ ಉದ್ಯೋಗವನ್ನು ದೊರಕಿಸಿಕೊಟ್ಟ ಮಿತ್ರನಿಂದಲೇ ಈ ಮನೆಯೂ ದೊರಕಿತು. ಅವನು ಇದು ತನಕ ಜೋಡು ಮಟದಲ್ಲಿರುವ ತನ್ನ ಚಿಕ್ಕ ಮನೆಯಲ್ಲಿಯೇ ಇದ್ದವನು. ಅವನಿಗಾಗಿ ಹೊಸ ಮನೆಯೊಂದು ಪೆಟ್‌ಲ್ಯಾಂಡ್ ಪೇಟೆಯಲ್ಲಿಸಿದ್ಧವಾಗಿತ್ತು. ಹೊಸಮನೆಗೆ ಹೋಗುವ ಮುನ್ನ ರಾಜಾರಾಮನನ್ನು ಕರೆದು ಅವನು ಹೇಳಿದನು:

"ರಾಜಾರಾಂ ರಾಯರೇ! ನೀವು ಮನೆಬೇಕು, ಮನೆಬೇಕು ಎಂದು ಹೇಳಿದ್ದಿಲ್ಲವೇ ನಮ್ಮೊಡನೆ?"

"ಹೌದು!"

"ಎಲ್ಲಿಯಾದರೂ ಸಿಕ್ಕಿತೇ?"

"ಇನ್ನೂ ಇಲ್ಲ!"

"ಹಾಗಾದರೆ ನಮ್ಮ ಮನೆಗೆ ಬನ್ನಿ."

"ನಿಮ್ಮ ಮನೆಗೋ? ನೀವು ಎಲ್ಲಿ?"

"ನಾವೇ? ನಿಮಗೆ ಗೊತ್ತಿಲ್ಲವೇ ನಾನು ಪೆಟ್ ಲಾಂಡ್ ಪೇಟೆಯಲ್ಲಿ

ಹೊಸಮನೆ ಕಟ್ಟಿಸಿದ್ದು. ಅದೀಗ ಪೂರ್ಣವಾಗಿ ಸಿದ್ಧವಾಗಿದೆ. ನಾಳೆಯಿಂದಲೇ ಅಲ್ಲಿ ವಾಸಿಸುವುದೆಂದು ತೀರ್ಮಾನಿಸಿದ್ದೇನೆ. ಹೇಗೆ? "

" ಸಂತೋಷ! ಹಾಗಾದರೆ ನಿಮ್ಮ ಈ ಮನೆಯಲ್ಲಿ? "

" ಅದೂ ಸಹಾ ಗೊತ್ತಿಲ್ಲವೇ? ಜೋಡುಮಠ ವಾಮನರಾಯನೆಂದು ಪ್ರಸಿದ್ಧನಾಗಿದ್ದೇನೆ ನಾನು ನಿಮಗೆ ಪುರಸೊತ್ತಿದ್ದರೆ ಬೇಕಾದರೆ ಈಗ ಬರಬಹುದು ಮನೆ ನೋಡಲಿಕ್ಕೆ. ಏನು, ಬರುತ್ತೀರಾ? "

" ಆಗಲಿ; ಹೋಗೋಣ. "

ಹೋಗಿ ನೋಡಿದರು ರಾಜಾರಾಮನಿಗೆ ಆ ಮನೆಯೇನೂ ತೃಪ್ತಿಯಾಗದಿದ್ದರೂ, ಮಂಗಳೂರಿಗೆ ಬರಬೇಕೆಂಬ ಲಲಿತೆಯ ಹಿರಿಯಾಸೆಗಾಗಿ 'ಆಗಬಹುದು' ಎಂದು ಒಪ್ಪಿದನು.

" ಬಾಡಿಗೆ ಯೆಷ್ಟು? "

" ಅಯ್ಯಯ್ಯೋ! ಬಾಡಿಗೆ ತೆಗೆದುಕೊಂಡು ಮಾಳಿಗೆ ಹಾಕಬೇಕೆಂಬ ಇಚ್ಛೆಯಿಂದ ನಾನು ಈ ಮನೆಯನ್ನು ನಿಮಗೆ ಕೊಡುತ್ತಿಲ್ಲ. ನೋಡಿ, ನಾವು ಬೇರೆ ಮನೆಗೆ ಹೋಗುತ್ತೇವೆ. ಈ ಮನೆ ಒಕ್ಕಲಿಲ್ಲದೆ ಹಾಳಾಗಬಾರದಷ್ಟೆ! ಹಾಗೆ ಏನಾದರೂ ಕೊಡಲೇ ಬೇಕೆಂದು ಮನಸ್ಸಿದ್ದರೆ ನಿಮಗೆ ನೋಡಿ, ತೋಟದಲ್ಲಿ ತೆಂಗು, ಅಡಿಕೆ, ಇನ್ನೂ ಕೆಲವು ಫಲವೃಕ್ಷಗಳಿವೆ. ಅವುಗಳಲ್ಲಿ ನಿಮ್ಮ ಉಪಯೋಗಕ್ಕೆ ಮಿಕ್ಕಿ ಏನಾದರೂ ಉಳಿದರೆ ಮಾರಿ ಬಂದ ನಫೆಯನ್ನು ನಮಗೆ ಕೊಟ್ಟುಬಿಡಿ. ಸಾಕು! "

" ಹಾಗಿದ್ದರೆ ಆಗಬಹುದು! "

" ಹಾಗಾದರೇನು ಬರುತ್ತೀರಾ? ನಾಳೆಯೇ ರಿಪೇರಿ ಮಾಡಿಸಲಿಕ್ಕೆ ಮೇಸ್ತ್ರಿಯನ್ನು ಕರೆಯಿಸಲೇ? "

" ಹೂಂ! "

ರಿಪೇರಿಯೆಲ್ಲಾ ಮುಗಿದು ಮನೆಯನ್ನು ವಾಮನರಾಯನು ರಾಜಾರಾಮರಾಯನ ವಶಕ್ಕೊಪ್ಪಿಸಿದ ಮೇಲೆ ಒಂದು ದಿನ ರಾಜಾರಾಮನೇ ಹೋಗಿ ಲಲಿತೆಯನ್ನು ಕರೆದುಕೊಂಡು ಬಂದನು. ಲಲಿತೆಯೊಂದಿಗೆ ದಾಮೋದರನೂ ಭಾವನ ಹೊಸಮನೆಯನ್ನು ನೋಡುವ ಅತ್ಯಾತುರದಿಂದ ಬಂದನು. ರಾಜಾರಾಮನು ಜೋಡುಮಠಕ್ಕೆ ಕರೆದುಕೊಂಡು ಬಂದು ' ಇದೇ ಮನೆ! ' ಎಂದಾಗ ಲಲಿತೆ ದಾಮೋದರ ಇಬ್ಬರಿಗೂ ಉಂಟಾದ ಅಚ್ಚರಿ ಅಷ್ಟಿಷ್ಟಲ್ಲ.

" ಅಯ್ಯೋ! ಇದುವೆಯೋ ಮನೆ? " ಎಂದಳು ಲಲಿತೆ. ಅವಳ ದನಿಯಲ್ಲಿ ಬೇಸರ-ಅಸಹ್ಯವಿತ್ತು.

" ಇದಾದರೂ ಸಿಕ್ಕಿದ್ದು ನಮ್ಮ ಭಾಗ್ಯವೆನ್ನಬೇಕು ಲಲಿತೆ! " ಎಂದನು ರಾಜಾರಾಮ.

" ಅಯ್ಯೋ! ಹಾಳು ಮಂಗಳೂರೇ! " ಎಂದಳು ಲಲಿತೆ.

ಆ ಮನೆ ಜೋಡುಮಠದ ಒಂದು ಮೂಲೆಯಲ್ಲಿತ್ತು. ಬಹಳ ಹಳತ್ತಾದ ಮನೆ. ಮಣ್ಣಿನ ಗೋಡೆ; ಮಾಡಿನ ತೊಲೆ, ಕಂಬಗಳು ಯಾವಾಗಲೋ ಜೀರ್ಣವಾಗಿದ್ದವು. ಮನೆಯಲ್ಲಿ ಚಿಕ್ಕ, ಚಿಕ್ಕ ಮೂರು ಕೋಣೆಗಳಿದ್ದವು. ಅವು ಕೂಡಾ ಜೈಲಿನ ಕೋಣೆಗಳಂತೆ. ಗಾಳಿ, ಬೆಳಕು ಎರಡಕ್ಕೂ ಬರಲು ಸರಿಯಾದ ದಾರಿಯಿರಲಿಲ್ಲ. ಮನೆಯ ಹಿಂಬದಿಯಲ್ಲಿ ಒಂದು ಚಿಕ್ಕ ತೋಟವಿದ್ದಿತು. ಅದರಲ್ಲಿಯೂ ಆಳೆತ್ತರಕ್ಕೆ ಹುಲ್ಲು ಬೆಳೆದು ನಿಂತಿದ್ದಿತಲ್ಲದೆ, ಹೂಗಿಡಗಳಿರಲಿಲ್ಲ. ಮನೆಯ ಮುಂದಿಂದ ಹಾದು ಹೋಗುವ ಬೀದಿ ಕೂಡಾ ರಾಜಮಾರ್ಗವಲ್ಲ. ಮಳೆ ನೀರು ಬಿದ್ದು ಅಲ್ಲಲ್ಲಿ ಕುಳಿಯೆದ್ದು ಅಂಕುಡೊಂಕಾದ ಆ ಬೀದಿಯ ಇಬ್ಬದಿಗಳಲ್ಲೂ ಹೊಳೆಯಷ್ಟು ಅಗಲವಾದ ಚರಂಡಿಗಳು. ಅವುಗಳಲ್ಲಿ ದಪ್ಪ ದಪ್ಪವಾದ ಕೆಸರು. ಅದನ್ನು ನೋಡಿದೊಡನೆ ದಾಮೋದರನು ' ಕಪ್ಪು ಮೊಸರು ' ಎಂದು ಅದಕ್ಕೆ ನಾಮಕರಣ ಮಾಡಿಬಿಟ್ಟನು. ಮಂಗಳೂರೆಂದರೆ ದಿವಿಜಮಂಡಲವೆಂದೇ ಭಾವಿಸಿದ್ದ ಲಲಿತೆಗೆ ಮಂಗಳೂರೆಂದರೆ ಭೂನರಕವೆಂಬುದರ ಕಲ್ಪನೆಯಾಯಿತು.

ಜೋಡುಮಠದಲ್ಲಿ ಲಲಿತೆ-ರಾಜಾರಾಮರ ಸಂಸಾರಕ್ಕೆ ಮೊದಲಾಯಿತು. ರಾಜಾರಾಮ ಬೆಳಿಗ್ಗೆ ಹತ್ತು ಗಂಟೆಗೆ ಊಟಮುಗಿಸಿ ಆಫೀಸಿಗೆ ಹೋದರೆ, ಮತ್ತೆ ಮರಳಿ ಬರುವುದು ರಾತ್ರಿ ಹತ್ತು ಗಂಟೆಗೇ ಸರಿ. ಅಷ್ಟು ಸಮಯವನ್ನೂ ಲಲಿತೆಯೊಬ್ಬಳೇ ಮನೆಯಲ್ಲಿ ಕುಳಿತು ವೃಥಾ ಕಳೆಯಬೇಕು. ಅಲ್ಲದೆ ಹುಟ್ಟಿದಂದಿನಿಂದಲೂ ಹೆಚ್ಚಾಗಿ ಹಳ್ಳಿಯಲ್ಲೇ ಬೆಳೆದ ಅವಳಿಗೆ ಈ ಪೇಟೆಯ ವಾತಾವರಣ ಮೆಚ್ಚಿಗೆಯಾಗಲಿಲ್ಲ. ಹಳ್ಳಿಯಲ್ಲಾದರೆ ಮನೆಯ ಮುಂದೆ ಕೊನೆಯಿಲ್ಲದಂತೆ ಹಾಸಿರುವ ಬಿಳಿ ಮರಳು. ಅವುಗಳ ಮುಂದೆ ಹಸುರು ಸೀರೆಯನ್ನುಟ್ಟ ಅನಂತವಾದ ಹೊಲಗಳು, ಅವುಗಳ ನಡುವೆ ಹಣೆಯ ಮೇಲೆ, ತುರುಬಿನ ಮೇಲೆ ಮುಡಿದಂತೆ ತೋರುವ ಕಿಸಗಾರ ಹೂಗಳು; ಎತ್ತ ನೋಡಿದತ್ತ ಸರಸುಗಳ ರಾಜ್ಯ; ನದಿ ಹರಿಯುವ ಮನೋಹರವಾದ

ನೋಟ; ಇವುಗಳ ಸೊಗಸೇನು? ಇಲ್ಲಾದರೋ ಮಾರ್ಗದಲ್ಲಿ ಗಂಟೆಗೊಮ್ಮೆ ಓಡಾಡುವ ಮೋಟಾರ್ ಗಾಡಿಗಳು ಧೂಳಿನ ಮೋಡಗಳನ್ನು ಮನೆಯೊಳಗೂ ಹಾರಿಸಿ, ಮಡಿವಾಳನ ಕಡೆಗೋ, ವೈದ್ಯನ ಕಡೆಗೋ ಹೋಗುವಂತೆ ಮಾಡು ತ್ತವೆ.

ಎಲ್ಲಕ್ಕಿಂತಲೂ ಮಿಗಿಲಾಗಿ ಜೋಷುಮಠದ ಆ ಬೀದಿ ಸೂಳೆಯರ ಗಲ್ಲಿಯೆಂದು ಪ್ರಸಿದ್ಧವಾಗಿತ್ತು. ಫಲತಃ ಅವರ ಮನೆಯ ಮುಂದಿನ ಇಡೀ ಸಾಲು ಸೂಳೆಯರಿಗಾಗಿಯೇ ಕಾದಿಡಲ್ಪಟ್ಟಂತಿತ್ತು. ಸೂರ್ಯನು ಮರೆಯಾ ದರೆ ಸಾಕು, ಅಲ್ಲಿಂದ ಮಲ್ಲಿಗೆ, ಗುಲಾಬಿಗಳ ಸುವಾಸನೆ, ಅಗರಬತ್ತಿಯ ಪರಿಮಳ, ಸೆಂಟಿನ ಗಂಧ ಹೊರಡಲು ಮೊದಲಾಗುತ್ತಿತ್ತು. ಸಾಲದುದಕ್ಕೆ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ನಾಚಿಗೆ ಮೊದಲು: 'ನಾಚೊ, ನಾಚೊ ಪ್ಯಾರೇ ಮನ್‌ಕೆ ಮೋರ್.' ಇದರ ಜೊತೆಗೇ ತಬಲೆಯ 'ಧಿಗಿಣ ಧಿಗಿಣ ತಂ' ಇತರರನ್ನು ನಿದ್ರಿಸಲು ಬಿಡದಂತೆ. ಕಣ್ಣು ಕುಕ್ಕುವಂತೆ ಇಲೆಕ್ಟ್ರಿಕ್ ಲ್ಯಾಟಿನ ಪ್ರಕಾಶ ಬೇರೆ —

ಇದು ರಾತ್ರಿಯ ವ್ಯವಹಾರ.

"ಈ ಮುಂಡೆಯರಿಂದಾಗಿ ಉಳಿಗಾಲವಿಲ್ಲವಪ್ಪ: ಒಂದು ನಿದ್ರಿಸಲಿಕ್ಕೂ ಇಲ್ಲ. ಹೀಗೆ ಊನುಬತ್ತಿ ಹಚ್ಚಲಿಕ್ಕೆ ಅಲ್ಲೇನು ಯಾರಾದರೂ ಸತ್ತಿದ್ದಾರೆಯೋ?"

ಲಲಿತೆಯ ಮಾತಿಗೆ ರಾಜಾರಾಮ ನಕ್ಕು ಹೇಳುತ್ತಿದ್ದ: "ನಿಜ ಲಲಿತಾ, ಮಾತು ಎರಡು ರೀತಿಯಲ್ಲಿ ನಿಜ."

"ಅದು ಹೇಗೆ?"

"ಹೋದವರು ಎರಡು ರೀತಿಯಿಂದ ಸತ್ತುಬರುತ್ತಾರೆ. ಒಂದು ದುಡ್ಡಿನ ವಿಷಯದಲ್ಲಿ ಎರಡನೆಯದಾಗಿ ಊರಲ್ಲಿಲ್ಲದ ರೋಗಗಳನ್ನೆಲ್ಲಾ ಹಿಡಿಸಿ ಕೊಂಡು ಬರುತ್ತಾರೆ."

ಮರಗಳ ಛಾಯೆಗಳು 'ಸಂಜೆಯಾಯಿತು' ಎನ್ನುತ್ತಿದ್ದವು ದಾರಿ ಯಲ್ಲಿ ಹೆಚ್ಚಾಗುವ ಜನಸಂಖ್ಯೆಯೂ, 'ಇನ್ನೇನು ಕತ್ತಲೆಯಾಗಲು ಹೆಚ್ಚು ಸಮಯವಿಲ್ಲ' ಎಂಬುದರ ಸೂಚನೆಯಾಗಿತ್ತು. ದಿನಾಪ್ರತಿಯೂ ಸಂಜೆ ಯಾದೊಡನೆ ಬಾಗಿಲ ಬಳಿ ನಿಂತುಕೊಂಡು ಬೀದಿಯಲ್ಲಿ ಹೋಗುವ ಜನರ ತಮಾಷೆಯನ್ನು ನೋಡುವುದು ಲಲಿತೆಯ ಕಾರ್ಯಕ್ರಮಗಳಲ್ಲೊಂದಾ

ಗಿತ್ತು. ಸಮಯವನ್ನು ಕಳೆಯಲು, ಅದಷ್ಟು ಬೇಸರವನ್ನು ಹೋಗಲಾಡಿಸಲು ಇದೂ ಒಂದು ಉಪಾಯ.

ಇಂದೂ ಅವಳು ಹಾಗೆಯೇ ನಿಂತುಕೊಂಡಿದ್ದಾಳೆ. ಎದುರುಮನೆಯ ಒಬ್ಬ ಸೂಳೆಯೂ ತನ್ನ ಬಾಗಿಲಿನಲ್ಲಿ ಬೀದಿಗೆ ಮುಖಮಾಡಿ ನಿಂತುಕೊಂಡಿದ್ದಳು. ಲಲಿತೆ ನಿಲ್ಲುವುದು ಬೇಸರವನ್ನು ಹೋಗಲಾಡಿಸಲಿಕ್ಕಾದರೆ, ಆ ಸೂಳೆ ನಿಲ್ಲುವುದು ಜೀವನ ಸಾಗಿಸಲಿಕ್ಕಾಗಿ; ದಾರಿಯಲ್ಲಿ ಹೋಗುವ ದುಡ್ಡಿದ್ದ ಗಂಡಸರ ಬೇಟೆಯಾಡಲು—ಹೀಗೆ ಲಲಿತೆಯ ಆಲೋಚನೆ.

ಲಲಿತೆ ಬೀದಿಯ ಜನಸಂಚಾರವನ್ನು ನೋಡುತ್ತಿದ್ದವಳು ಒಮ್ಮೆ ಫಕ್ಕನೆ ಆ ಕಡೆಗೆ ನೋಡಿದಳು. ಅವಳು ಇವಳನ್ನೇ ನೋಡುತ್ತಿದ್ದಳು. ಲಲಿತೆಯು ತನ್ನನ್ನು ನೋಡುತ್ತಲೇ ಮೆಲ್ಲನೆ ನಕ್ಕಳು. ಲಲಿತೆಗೆ ಮನಸ್ಸಿಲ್ಲದಿದ್ದರೂ, ಅವಳು ನಕ್ಕ ಮೇಲೆ ತಾನು ನಗದಿರುವುದು ಸಮವಲ್ಲವೆಂದು ತಾನೂ ಪ್ರತಿಯಾಗಿ ನಕ್ಕಳು.

" ಏನಮ್ಮಾ, ಬೇಸರವಾದುದಕ್ಕೆ ನಿಂತಿದ್ದೀರಾ? " ಆ ಹೆಂಗಸು ಕೇಳಿದಳು.

" ಹೂಂ! "

" ಯಜಮಾನರು ಹೊರಗೆ ಹೋಗಿದ್ದಾರೆಯೇ? "

" ಹೂಂ! "

" ಬರುವಾಗ ಹೊತ್ತಾಗುತ್ತದೆಯೋ? "

" ಹೂಂ! "

ಮುಂದೆ ಮಾತು ಸುದೀರ್ಘವಾಗಿ ಬೆಳೆಯಿತು. ಪರಸ್ಪರ ಹೆಸರುಗಳನ್ನು ವಿಚಾರಿಸಿಕೊಂಡುದಾಯಿತು. ಲಲಿತೆಗೆ ಆ ವ್ಯಭಿಚಾರಿಯ ಹೆಸರು 'ಹೀರಾ' ಎಂದು ತಿಳಿಯಿತು. ' ಹೀರೆಕಾಯಿ ' ಎಂದು ಕೊಂಡಳು ಮನಸ್ಸಿನಲ್ಲಿ ಲಲಿತೆ.

ಹೀರಾ ಮಾತನಾಡುತ್ತಾ, ಮಾತನಾಡುತ್ತಾ ಬೀದಿಗಿಳಿದು ನೆಟ್ಟಗೆ ಲಲಿತೆಯಿದ್ದಲ್ಲಿಗೇ ಬಂದಳು. ಲಲಿತೆಗೆ, " ಒಳಗೆ ಬನ್ನಿಯಮ್ಮ " ಎಂದು ಹೇಳದೆ ನಿರ್ವಾಹವಿರಲಿಲ್ಲ.

ಲಲಿತೆ ಹಾಸಿದ ಹಸೆಯ ಮೇಲೆ ಕುಳಿತುಕೊಂಡು ಎಲ್ಲಕ್ಕೂ ಮೊದಲಾಗಿಯೇ ಹೀರಾ, " ಕಾಫಿ–ಗೀಫಿ ಏನೂ ಮಾಡುವುದು ಬೇಡವಮ್ಮ! "

ಎಂದಳು.

“ ಎಲಾ! ಬೋ....ಮಗಳೇ! ” ಎಂದು ಮನಸ್ಸಿನಲ್ಲಿಂದುಕೊಂಡರೂ ಲಲಿತೆ, “ ಸ್ವಲ್ಪ ಕುಡಿದುಬಿಟ್ಟರೆ ಏನಾಗುತ್ತದೆ? ” ಎಂದು ಕಾಫಿ ಮಾಡಿ ತಂದಳು. ಆದರೆ, ನೀರಿಗೆ ಕಾಫಿ ಹುಡಿಯನ್ನು ಹಾಕುವಾಗ ಬಹಳ ಜಾಗ್ರತೆ ಮಾಡದೆ ಇರಲಿಲ್ಲ.

ಕಾಫಿ ಸತ್ಕಾರವಾದ ಮೇಲೆ ತಾಂಬೂಲ ಸೇವನೆ ನಡೆಯಿತು. ಅಂಗಳ ಮಾರಿಗುಡಿಯ ಅಂಗಳದಂತಾದಂತೆ, ಮಾತುಕಥೆಯೂ ಸರಾಗವಾಗಿ ಹರಿಯಿತು. ಆದರ ನಡುವೆ ಹೀರೆಯ ಸಂಪೂರ್ಣ ಇತಿಹಾಸವು ಲಲಿತೆಗೆ ಗೊತ್ತಾಯಿತು. ಅದು ಬಹಳ ಕರುಣಕಥೆ. ಹೇಳುತ್ತಿರುವವಳು ಕಣ್ಣೀರು ಸುರಿಸಿದಂತೆ, ಕೇಳುವವಳಿಗೂ ಕಣ್ಣೀರು ಸುರಿಸದಿರಲಾಗಲಿಲ್ಲ.

ಹೀರಾ ಹುಟ್ಟಿದಂದಿನಿಂದ ಅವಳ ತಾಯ್ತಂದೆಗಳಿಗೆ ಚಿಂತೆಗೆ ಮೊದಲಾಗಿತ್ತು. ಅವಳ ಜನ್ಮಪತ್ರಿಕೆಯಲ್ಲಿ ಅವಳು ನೀತಿಗೆಡುತ್ತಿದ್ದಾಳೆಂದೂ, ಕುಲಕಲಿಂಕಿನಿಯಾಗುತ್ತಾಳೆಂದೂ ಬರೆದಿದ್ದಿತು. ಇದೇ ಚಿಂತೆ ಅವರನ್ನು ಹಗಲಿರುಳು ಪೀಡಿಸುತ್ತಿದ್ದರೂ, ಮದುವೆಯಾಗುವ ಹುಡುಗಿ, ಈ ವಿಚಾರ ತಿಳಿದರೆ, ಒಬ್ಬನೂ ಮದುವೆಯಾಗಲಾರ ಎಂದು ಅಂಜಿ, ಇದನ್ನು ಬಹಿರಂಗ ಪಡಿಸಿರಲಿಲ್ಲ. ಅವರ ನೆರೆಮನೆಯಲ್ಲಿಯೇ ಇದ್ದ ಹೀರೆಗಿಂತ ನಾಲ್ಕುವರ್ಷ ಹಿರಿಯನಾದ ರಾಮಗೋಪಾಲನಿಗೆ ಅವಳನ್ನು ಮದುವೆಮಾಡಿಕೊಡುವದೆಂದು ಅವರು ಚಿಕ್ಕಂದಿನಲ್ಲಿಯೇ ನಿಷ್ಕರ್ಷಿಸಿದ್ದರು. ರಾಮಗೋಪಾಲನ ತಂದೆಗೆ ಬೇಂಕಿನಲ್ಲಿ ಸಾಧಾರಣ ಹತ್ತುಸಾವಿರ ರೂಪಾಯಿಗಳ ವರೆಗೆ ವ್ಯವಹಾರವಿತ್ತು. ಅಲ್ಲದೆ ಸ್ವಂತ ಮನೆ, ಹಿತ್ತಲು, ಜಮೀನು ಎಲ್ಲವೂ ಇತ್ತು. ಲಕ್ಷಾಧಿಪತಿಯಲ್ಲದಿದ್ದರೂ, ಭಿಕ್ಷಾಧಿಪತಿಯೇನಲ್ಲ. ಅವನೂ ಈ ಸಂಬಂಧಕ್ಕೆ ಒಪ್ಪಿದ. ಇನ್ನು ಹುಡುಗ-ಹುಡುಗಿಯರು ದೊಡ್ಡವರಾದ ಮೇಲೆ ಅವರ ಮನಸ್ಸು ಒಪ್ಪಿದರೆ ಈ ಮದುವೆಯಾಗುವದಕ್ಕೆ ಯಾವ ಅಭ್ಯಂತರವೂ ಇರಲಿಲ್ಲ. ಆದರೆ, ಈ ಹಕ್ಕಿಯ ಮೇಲೆ ಮುದಿಬೇಡನೊಬ್ಬನು ಬಲೆಬೀಸಿದ.

ರಾಮಯ್ಯ; ಅದೇ ಊರಿನ ದೊಡ್ಡ ಸಾಹುಕಾರ. ಅವನ ಐಸಿರಿಯನ್ನು ಹಳ್ಳಿಗರು ಒಂದೇಮಾತಿನಲ್ಲಿ ಹೇಳುತ್ತಿದ್ದರು; ಆ ಇಡೀ ಊರನ್ನೇ ಕ್ರಯಕೊಟ್ಟು ಕೊಳ್ಳುವಷ್ಟು ಅವನು ಶ್ರೀಮಂತನಂತೆ. ಪ್ರಾಯ ಅವನಿಗೆ ಐವತ್ತರ ಮೇಲೆ ಹತ್ತಾಗಿತ್ತು. ಯಾರಾದರೂ ವಯಸ್ಸು ಕೇಳಿದರೆ ಅವನು

ನಿಜವನ್ನೇ ಹೇಳುತ್ತಿದ್ದನಲ್ಲದೆ, ' ಇನ್ನೂ ಇಪ್ಪತ್ತಷ್ಟೆ! ' ಎಂದೆನ್ನುತ್ತಿರಲಿಲ್ಲ. "ನನಗೆ ಪ್ರಾಯ ಅರುವತ್ತಾಗಿದೆ. ಹುಡುಗಿ ಕೊಡಿ" ಎಂದು ಕೇಳುತ್ತಿದ್ದನು. 'ತಾನು ಇಷ್ಟು ಶ್ರೀಮಂತ; ಈ ಬಡ ಒಕ್ಕಲಿಗರು ತನಗೆ ಹುಡುಗಿಯನ್ನು ಕೊಡದೇ ಇದ್ದಾರೇ? ' ಎಂದು ಅವನ ಜಂಭ. ಆದರೆ, ಅವನ ಜಂಭ ವನ್ನು ಪೂರಾ ಇಳಿಸಿಬಿಟ್ಟರು ಒಕ್ಕಲಿಗರು ಹೆಣ್ಣು ಕೊಡದೆ. ಕೊನೆಯದಾಗಿ ಹೀರೆಯ ತಂದೆ ನಾರಾಯಣರಾಯನ ಸರದಿಯೂ ಬಂತು. ನಾರಾಯಣ ರಾಯ ಇವನಿಗೆ ಹೆದರಿ ಮಗಳನ್ನು ಬೇಗನೇ ರಾಮಗೋಪಾಲನಿಗೆ ದಾನ ಮಾಡಿಬಿಟ್ಟ. ರಾಮಗೋಪಾಲ ಹೀರೆಯನ್ನು ಮದುವೆಯಾದದ್ದೇ ತಡ, ಹೀರೆಯ ದೌರ್ಭಾಗ್ಯವೆನ್ನಬೇಕು. ಸಟ್ಟಾ ಆಡಿ ಸಂಪತ್ತೆಲ್ಲಾ ಅವನ ಕೈ ಬಿಟ್ಟು ಹೋಯಿತು. ಮುಂದೆ ಉದರ ನಿರ್ವಾಹಕ್ಕೆ ಅದೇ ಹಳ್ಳಿಯಲ್ಲಿ ನಾಕರಿಗಾಗಿ ಅಲೆಯಲಾರಂಭಿಸಿದ. ರಾಮಯ್ಯ ಯಾವುದೋ ಆಲೋಚನೆ ಯಿಂದ ಅವನನ್ನು ಕರೆದು ತನ್ನ ಗುಮಾಸ್ತೆಯನ್ನಾಗಿ ನೇಮಿಸಿಕೊಂಡನು. ಹೀರೆ ಸೂಳೆಯಾಗಲು ಇದೇ ಪೀಠಿಕೆಯಾಯಿತೆನ್ನಬೇಕು.

ಒಂದುದಿನ ರಾಮಯ್ಯ ತಮ್ಮ ಗುಮಾಸ್ತೆಯನ್ನು ಕುಳ್ಳಿರಿಸಿಕೊಂಡು ಎಲೆ ಅಡಿಕೆ ಕೊಟ್ಟು ಮಾತಿಗಾರಂಭಿಸಿದನು;

" ನೋಡು ಗೋಪಾಲ್, ನನಗೆ ನಿನ್ನಿಂದ ಒಂದು ಉಪಕಾರವಾಗ ಬೇಕಿತ್ತು. "

" ಏನದು, ಸ್ವಾಮಿ? ಹೇಳಿ!"

" ನೋಡು ಮೊನ್ನೆ ನಮ್ಮ ಮನೆಕೆಲಸದವಳು ಸೇಸಿ ನಮಗೆಲ್ಲಾ ಕಂಡಾಬಟ್ಟೆ ಬೈದು ಕೆಲಸಬಿಟ್ಟು ಹೋದದ್ದು ನಿನಗೆ ಗೊತ್ತೇ ಇದೆಯಲ್ಲ! "

" ಹೌದು ಸ್ವಾಮಿ! ಅವಳದು ಅಹಂಕಾರ ಬಹಳ ಹೆಚ್ಚಾಯಿತು. ನೀವು ಅವಳ ಸೊಂಟ ಮುರಿದೇ ಕಳಿಸಬೇಕಾಗಿತ್ತು. "

" ಸಾಯಲಿ, ಅವಳು! ಅವಳಿಗೆ ಬುದ್ಧಿಯಿಲ್ಲವೆಂದು ನನಗೆ ಬುದ್ಧಿ ಯಿಲ್ಲವೇ! 'ಈಗ ನೋಡು, ನನ್ನ ಅಡುಗೆ ಕೆಲಸದವಳು ಬಹಳ ನಿತ್ರಾಣಿ. ಮನೆಯೊಳಗಿನ ಕೆಲಸ, ಹೊರಗಿನ ಕೆಲಸ, ಎರಡೂ ಮಾಡುವದು ಅವಳಿಂದ ಸಾಧ್ಯವಿಲ್ಲ. ನೀನೇ ಯೋಚಿಸಿ ನೋಡು. ಯಾರಾದರೂ ಒಬ್ಬ ಕೆಲಸದವ ಳನ್ನು ನೀನೀಗ ' ತಲಾಸ್ ' ಮಾಡಿಕೊಡಬೇಕು. "

ಅಯ್ಯೋ, ಸ್ವಾಮಿ! ನಾನೆಲ್ಲಿ ಹುಡುಕಲು ಹೋಗಲಿ? ಈಗ ಕೆಲಸ

ದವರಿಗೆ ಬಂದಿರುವಷ್ಟು ಕೋಡು ಯಾರಿಗೂ ಬಂದಿಲ್ಲ. ಎಷ್ಟು ಕಾಫಿ-ತಿಂಡಿ ಕೊಟ್ಟರೂ ತೃಪ್ತಿಯಿಲ್ಲ. ಎಷ್ಟು ಸಂಬಳ ಕೊಟ್ಟರೂ ಸಂತೋಷವಿಲ್ಲ. ”

“ ಯಾರು ಯಾಕೆ ? ನಿನ್ನ ಹೆಂಡತಿಯೇ ಬರಬಾರದೇ? ”

ರಾಮಗೋಪಾಲನ ಮುಖ ಒಂದು ವಿಧವಾದುದನ್ನು ನೋಡಿ, “ಅದರಲ್ಲೇನು? ನಾವೇನು ಧರ್ಮಕ್ಕೆ ಕೆಲಸ ಮಾಡಿಸುವವರೇ, ಸಂಬಳ ಕೊಡುವದಿಲ್ಲವೇ? ನಿನಗೆ ಈಗ ಸಿಗುವ ಸಂಬಳ ಎಲ್ಲಿಗೆ ಸಾಕು? ಒಂದು ವೇಳೆ ಸಾಕಾದರೂ, ಸ್ವಲ್ಪ ಹೆಚ್ಚು ಹಣವಿದ್ದರೇನು ಕಹಿಯಾಗುತ್ತದೆಯೇ? ಅವಳು ಮನೆಯಲ್ಲಿ ವ್ಯರ್ಥ ಕಳೆಯುವ ಹೊತ್ತನ್ನು ಇಲ್ಲಿ ಬಂದು ಕೆಲಸ ಮಾಡಿ ಕಳೆದರಾಯಿತು. ” ಎಂದನು.

ರಾಮಗೋಪಾಲನಿಗೆ ಇದು ಮನಸ್ಸಿಲ್ಲದಿದ್ದರೂ, ಎಲ್ಲಿ ‘ಒಲ್ಲೆ’ ಎಂದರೆ ತನ್ನ ವೃತ್ತಿಗೂ ಸಂಚಕಾರ ಬರುತ್ತದೋ, ಎಂದು ಅಳುಕಿ ‘ಆಯಿತು’ಎಂದು ಒಪ್ಪಿದನು. ಹೀರೆ ಈ ಸುದ್ದಿಯನ್ನು ಕೇಳಿದೊಡನೆಯೇ ಹಿರಿ ಹಿರಿ ಹಿಗ್ಗಿ ಕುಣಿದಾಡಿದಳು. ಕ್ಷಣದಲ್ಲಿ ಅವಳ ಕಣ್ಣಮುಂದೆ ಚಿನ್ನದ ಹಾರ, ಬಳೆ, ಉಂಗುರುಗಳು ಸುಳಿದಾಡಿದವು.

ಹೀರೆ ರಾಮಯ್ಯನಲ್ಲಿ ಕೆಲಸಕ್ಕೆ ಸೇರಿ ಒಂದು ತಿಂಗಳಾಯಿತು. ಈ ಅವಧಿಯಲ್ಲಿ ರಾಮಯ್ಯ ಹೀರೆಯೊಡನೆ ಸರಸಸಲ್ಲಾಪಕ್ಕೆ ತೊಡಗಿದ್ದರು. ಹೀರೆಯೂ ಅವರನ್ನು ಸಂತೋಷ ಪಡಿಸಿದರೆ ತನಗೆ ಸಂಬಳ ಹೆಚ್ಚಾಗಬಹ. ದೆಂಬ ದುರಾಶೆಯಿಂದ ತಾನೂ ಸರಸವಾಗಿ ಮಾತನಾಡತೊಡಗಿದಳು ಒಂದುದಿನ ಏನೋ ನೆವನವನ್ನು ಮುಂದೂಡಿ, ರಾಮಯ್ಯ ರಾಮಗೋಪಾಲನನ್ನು ಪರವೂರಿಗೆ ಕಳುಹಿಸಿದನು. ಅವನ ಅನುಪಸ್ಥಿತಿಯಲ್ಲಿ ಹೀರೆಯ ಸರಸವೇ ಅವಳಿಗೆ ವಿರಸವಾಯಿತು.

ರಾಮಗೋಪಾಲ ಹಿಂತಿರುಗಿ ಬಂದಾಗ ಹೀರೆ ಮನೆಯಲ್ಲಿ ಹಾಸಿಗೆಯ ಮೇಲೆ ಮಲಗಿಕೊಂಡಿದ್ದಳು. ಏನು ಪ್ರಶ್ನಿಸಿದರೂ ಉತ್ತರವೇಇಲ್ಲ. ಅವನು ಹೆದರಿ ಹೋಗಿ ಬೇಗ ಡಾಕ್ಟರನನ್ನು ಕರೆದು ತಂದನು. ಡಾಕ್ಟರನು ಪರೀಕ್ಷಿಸಿ Mental Shock ( ಮಾನಸಿಕ ಆಘಾತ ) ಎಂದನು. ಬಹಳ ಪ್ರಯತ್ನದಿಂದ ಹೀರೆಯ ಬಾಯಿಬಿಡಿಸಿ ರಾಮಗೋಪಾಲನು ಇದರ ಕಾರಣವನ್ನು ತಿಳಿದು ಕೊಂಡನು. ತಿಳಿದ ಕೂಡಲೇ ಅವನಿಗೆ ಚಂಡಾಲ ಕೋಪಬಂದಿತು. ‘ ರಾಮಯ್ಯನನ್ನು ಕೊಂದು ತಾನೂ ಫಾಶಿಕಂಬಕ್ಕೇರುತ್ತೇನೆ ’ ಎಂದು

ಕೊಡಲಿಯನ್ನೇ ತೆಗೆದುಕೊಂಡು ಹೊರಟನು.

ಅರ್ಧ ದಾರಿಯಲ್ಲೇ ರಾಮಗೋಪಾಲನಿಗೆ ಅವನ ಸಾಲಿಗರು ಭೆಟ್ಟಿಯಾದರು. ಸಟ್ಟಾ ಆಡಿ ಸಂಪತ್ತನ್ನು ಕಳೆದುಕೊಂಡುದು ಮಾತ್ರವಲ್ಲದೆ, ದೊಡ್ಡ ಸಾಲದ ಹೊರೆಯನ್ನು ರಾಮಗೋಪಾಲನು ಹೊತ್ತುಕೊಂಡಿದ್ದನು.

" ಹೇಗೂ ಇವತ್ತೊಮ್ಮೆ ಸಿಕ್ಕಿದನಪ್ಪಾ, ಕತ್ತೇಮಗ!" ಒಬ್ಬನೆಂದ.

" ಏನೋ, ಮುಂಡೇ ಮಗನೇ ! ನಾವೇನು ನಿನಗೆ ಹಣವನ್ನು ಧರ್ಮಾರ್ಥವಾಗಿ ದಾನಮಾಡಿದ್ದೇವೆಂದು ತಿಳಿದುಕೊಂಡಿದ್ದೀಯಾ ?"

" ಯಾವಾಗ ಕೊಡುತ್ತೀ, ಬೇಗ ಬಗುಳೋ,........ಮಗನೇ! "

ರಾಮಗೋಪಾಲನಿಗೆ ಉಭಯ ಸಂಕಟ ಪ್ರಾಪ್ತವಾಯಿತು. ಒಂದು ಕಡೆ ರಾಮಯ್ಯನ ಮೇಲೆ ದ್ವೇಷ; ಇನ್ನೊಂದು ಕಡೆ ಸಾಲಕೊಟ್ಟವರ ಪೀಡೆ.

" ಒಳ್ಳೇ ಮಾತಿಗೆ ಹೇಳಿದರೆ ಆಯಿತು; ಇಲ್ಲವಾದರೆ ಬಿಗಿಯೋಣ ಇದೇ ಲಾಠಿಯಿಂದ. "

ಕೊನೆಗೂ ನಾಳೆ ಕೊಡುತ್ತೇನೆಂದು ಅವರನ್ನು ಸಮಜಾಯಿಸಿ ಕಳುಹಿಸಬೇಕಾದರೆ, ರಾಮಗೋಪಾಲನಿಗೆ ಸಾಕು ಬೇಕಾಯಿತು

" ನಾಳೆ ಹೇಳಿದ ಮಾತಿಗೆ ತಪ್ಪಿದರೆ ನೀನೇನು ಬದುಕಿ ಉಳಿಯುವ ಹಾಗಿಲ್ಲ, ಮಗನೇ!" ಎಂದು ಅವರು ಹೊರಟು ಹೋದರು.

ರಾಮಗೋಪಾಲ ಮುಂದುವರಿದ.

ರಾಮಗೋಪಾಲ ತನ್ನ ಸಂಹಾರಕ್ಕೆ ಬರುತ್ತಿದ್ದಾನೆಂಬ ಸುದ್ದಿ ತಿಳಿದು ರಾಮಯ್ಯ ನಡುಗಿದನು. ಬೇಗನೇ ಆಚಾರ್ಯರನ್ನು ಕರೆದು ಅವರ ಕೈ ಬೆಚ್ಚಗೆ ಮಾಡಿ ಬರುವ ಕಂಟಕವನ್ನು ನಿವಾರಿಸಬೇಕೆಂದು ಪ್ರಾರ್ಥಿಸಿದರು.

ರಾಮಗೋಪಾಲ ರಾಮಯ್ಯನ ಮನೆಯ ಹತ್ತಿರಕ್ಕೆ ಬಂದಿದ್ದ. ಆಚಾರ್ಯರು ಒಮ್ಮೆಲೇ ತಡೆದು;

" ಏನಪ್ಪಾ ರಾಮಗೋಪಾಲ ಇದು ? ಎಲ್ಲಿಗೆ ಪರಶುರಾಮನ ಹಾಗೆ ಹೊರಟೆ ?"

ರಾಮಗೋಪಾಲ ಉತ್ತರಿಸದೆ ಮುಂಬರಿದ.

" ನಿಲ್ಲೋ! ನಿಲ್ಲೋ! ಯಾಕಿಷ್ಟು ಗಡಿಬಿಡಿ ?" ಎಂದರು ಆಚಾರ್ಯರು

" ನನ್ನನ್ನು ತಡಿಯಬೇಡಿ, ಆಚಾರ್ಯರೇ !"

" ಸಂಗತಿಯಾದರೂ ಏನು ಹೇಳು ಮಹರಾಯ !"

ಸಂಗತಿಯನ್ನು ಕೇಳಿ ಆಚಾರ್ಯರು ನಕ್ಕು, "ಓಹೋ! ಇಷ್ಟೆಯೇ ? "ಎಂದರು

" ಏನದು ಆಚಾರ್ಯರೇ !"

" ಇದನ್ನು ಯಾರೂ ತಪ್ಪಿಸಲಾರರು ಹೀರಾ ಸೂಳೆಯಾಗುತ್ತಾಳೆಂದು ಅವಳ ಜಾತಕದಲ್ಲಿಯೇ ಇದೆ. "

" ಅದರಲ್ಲೆಲ್ಲಾ ನನಗೆ ನಂಬಿಕೆಯಿಲ್ಲ ನಾನು ರಾಮಯ್ಯನನ್ನು ಕೊಂದೇ ಮರಳಿ ಹೋಗುವದಷ್ಟೆ !"

" ನೀನೀಗ ರಾಮಯ್ಯನನ್ನು ಕೊಂದರೆ, ನಿನ್ನ ಗತಿಯೇನೆಂದು ಯೋಚಿಸಿದ್ದೀಯಾ ?"

" ನಾನು ಕೂಡಾ ಮಡಿಯುಲು ಸಿದ್ಧನಾಗಿಯೇ ಬಂದಿದ್ದೇನೆ. "

" ಮಡಿಯುವದು ಅಷ್ಟೇನು ಸುಲಭವೆಂದು ಭಾವಿಸಿದ್ದೀಯಾ ? ನೀನೀಗ ರಾಮಯ್ಯನನ್ನು ಕೊಂದರೆ ಸರಕಾರದವರೇನು ನಿನ್ನನ್ನ ಫಾಶೀ ಕಂಬಕ್ಕೇರಿಸುವುದಿಲ್ಲ. "

" ಮತ್ತೆ! ?"

" ಸಾಯುವ ತನಕವೂ ಕತ್ತಲೆ ಕೋಣೆಯಲ್ಲಿ ಹಾಕುತ್ತಾರೆ. ಇಲ್ಲವಾದರೆ ಅಂದಮಾನಿಗೆ ಕಳುಹಿಸುತ್ತಾರೆ. ಅಲ್ಲಿ ಯುಗಯುಗಗಳತನಕ ಕೊಳೆತು ಸಾಯಬೇಕು !"

" ಹೀಗಿದೆಯೇ ? ಹಾಗಾದರೆ ನಾನೀಗ ಏನು ಮಾಡಬೇಕೆಂದು ನೀವು ಹೇಳುವುದು ?"

" ರಾಮಯ್ಯನನ್ನು ಕೊಲ್ಲಬೇಡ !"

" ಏನು ? ಇದು ಒಳ್ಳೇ ಉಪಾಯ ! ಓಹೋ ! ಗೊತ್ತಾಯಿತು ! ನೀವು ಆ ದುರಾತ್ಮನ ಮುತ್ತಾಲಿಕರಾಗಿ ನನ್ನ ಬಳಿಗೆ ಬಂದಿದ್ದೀರಿ. "

" ನೋಡು ಒಮ್ಮೆ ಏನೋ ದುರದೃಷ್ಟವಶಾತ್ ರಾಮಯ್ಯ ತಪ್ಪಿಬಿದ. ಇನ್ನು ಸತ್ತರೂ ಹೀಗೆ ಮಾಡುವುದಿಲ್ಲವೆಂದು ಅವನು ನನ್ನ ಕಾಲು ಹಿಡಿದು ಹೇಳಿದ್ದಾನೆ. ನೀನೀಗ ಸುಮ್ಮನಿರುವುದಾದರೆ ನಿನ್ನ ೫,೦೦೦ರೂಪಾಯಿ ಸಾಲವಿಲ್ಲವೆ ? ಅವನು ಅದನ್ನು ತೀರಿಸುತ್ತಾನೆ "

" ನಿಜವೇ ?"

" ಮತ್ತೆ ಸುಳ್ಳೇ ? ನೀನು ಮಾತ್ರ ದುಡುಕಬಾರದು !"

ಕ್ಷಣದಲ್ಲಿ ರಾಮಗೋಪಾಲ ಎಲ್ಲವನ್ನೂ ಮರೆತುಬಿಟ್ಟ. ಆದರೆ ಊರವರ ಬಾಯಿಯಲ್ಲಿಮಾತ್ರ ಅವನು ಬಚಾವಾಗಲಿಲ್ಲ. ಎಲ್ಲರೂ ಅವನಿಗೆ ' ಹಣಕ್ಕಾಗಿ ಹೆಂಡತಿಯ ಮಾನವನ್ನು ಬಲಿಗೊಟ್ಟ ದುರಾತ್ಮ !' ಎಂದು ಛೀ ಹಾಕಿದರು. ಅವನು ದಾರಿಯಲ್ಲಿ ಹೋಗುವಾಗ ಮಕ್ಕಳು ಅಡಗಿಕುಳಿತಿದ್ದು ಅವನ ಮೇಲೆ ಕಲ್ಲುಗಳನ್ನೆಸೆಯ ತೊಡಗಿದರು ಹೆಂಗಸರು ಅವನ ಮುಖದ ಮೇಲೆಯೇ ' ಥೂ !' ಎಂದು ಉಗುಳತೊಡಗಿದರು. ರಾಮಗೋಪಾಲ ಆ ಊರಲ್ಲಿ ನಿಲ್ಲುವುದೇ ಅಸಾಧ್ಯವಾಯಿತು. ಇಷ್ಟೆಲ್ಲಕ್ಕೂ ಕಾರಣನಾದ ರಾಮಯ್ಯನ ಬಳಿಗೇ ಹೋಗಿ ಅವನು " ಮುಂದೇನು ಗತಿ ?" ಎಂದ.

" ಹಿಂದಿನದೇ ಗತಿ ! ಮಾನಮಾರಿಯೇ ಜೀವನ !"

ರಾಮಗೋಪಾಲ ಹೆಂಡತಿಯನ್ನು ಕಟ್ಟಿಕೊಂಡು ಮುಂಗಳೂರಿಗೆ ಬಂದ, ಆ ಮೇಲೆ ಹೀರಾ ಪಕ್ಕಾ ಸೂಳೆಯಾದಳು.

ಕಥೆಯನ್ನು ಕೇಳಿ ಲಲಿತೆ, "ಲೋಕದಲ್ಲಿ ಇಂಥ: ಗಂಡಂದಿರೂ ಇದ್ದಾರೇನಮ್ಮಾ ? " ಎಂದಳು.

ಹೊತ್ತು ಬಹಳವಾಯಿತು. ಕತ್ತಲಾಯಿತು. ಸದ್ದಾಯಿತು. ಇಬ್ಬರೂ ನೋಡಿದರು. ರಾಜಾರಾಮ ಒಳಗೆ ಬಂದ. ಹೀರೆ ತಲೆಗೆ ಸೆರಗನ್ನೆಳೆದುಕೊಂಡು ಮನೆಗೆ ಹೊರಟು ಹೋದಳು,

" ಈಗ ನನ್ನೊಡನೆ ಮಾತನಾಡುತ್ತಿದ್ದವಳು ಯಾರು ಗೊತ್ತೇ ನಿಮಗೆ? " ಕೇಳಿದಳು ಲಲಿತೆ ರಾಜಾರಾಮನೊಡನೆ.

" ಯಾರಾದರೆ ನನಗೇನಾಯಿತು? "

" ಹಾಗಾದರೆ ನಿಮಗೆ ಗೊತ್ತಿಲ್ಲ. "

" ಇಲ್ಲ; ಗೊತ್ತಿದ್ದು ಆಗಬೇಕಾದ್ದೇನು? "

" ಏನೂ ಇಲ್ಲ: ಅವಳು ನೆರೆಮನೆಯ ಸೂಳೆ! "

" ಇದೇನು ಲಲಿತೆ? ಸೂಳೆಯರಿಗೆ ಅಷ್ಟು ಬೈಯುತ್ತಿದ್ದ ನೀನೇ ಈಗ ಸೂಳೆಯರ ಸ್ನೇಹಕ್ಕೆ ಹೊರಟೆ! "

" ಏನಾಯಿತು? ನಾನೇನು ಗಂಡಸು ಅಲ್ಲವಲ್ಲಾ! " ಎಂದು ನಕ್ಕು ಲಲಿತೆ, " ಸೂಳೆಯಲಲ್ಲೂ ಒಳ್ಳೆಯವರಿದ್ದಾರೆ. " ಎಂದಳು.

" ಅವಳ ಬೆಣ್ಣೆಯಂಥ: ಮಾತಿಗೆ ನೀನು ಮರುಳಾದೆಯೆಂದು ತೋರು

ತ್ತದೆ. ”

“ ನಾನೇನು ಅಷ್ಟು ದಂಡವೆಂದು ಭಾವಿಸಿದ್ದೀರಾ ? ನೀವು ಏನೇ ಹೇಳಿ: ಈ ‘ ಹೀರಾ ’ ಸೂಳೆ ಬಹಳ ಒಳ್ಳೆಯವಳು! ”

“ ಆಗಲಪ್ಪ; ಅವಳು ಒಳ್ಳೆಯವಳಾಗಲೀ, ಕೆಟ್ಟವಳಾಗಲೀ ನನಗೇನು? ನಡಿ, ಎಲೆ ಹಾಕು, ಹೋಗು. ಊಟ ಮಾಡೋಣ. ”

ಮರುದಿನ ರಾಜಾರಾಮನು ಕಚೇರಿಯಿಂದ ಸಂಜೆ ಐದು ಗಂಟೆಗೇ ಮನೆಗೆ ಬಂದ. ಲಲಿತೆ ಸೂಳೆಯ ಮನೆಯಲ್ಲಿದ್ದಳು. ಬಾಗಿಲಿಗೆ ಬೀಗ ಹಾಕಿದ್ದುದರಿಂದ ಅರ್ಧ ಗಂಟೆಯವರೆಗೆ ‘ಎಲ್ಲಿ ಸತ್ತಳಪ್ಪ ಇವಳು’ ಎಂದು ಬೀದಿಯಲ್ಲೇ ಕಾಯಬೇಕಾಯಿತು. ಅರ್ಧ ಗಂಟೆಯ ಮೇಲೆ ಹಾಗೆ ಮೆಲ್ಲ ಅವಳ ಸ್ವಾರಿ ಬಂದು ಬಾಗಿಲ ಬೀಗ ತೆರೆಯಿತು.

“ ಇವತ್ತೇನು ಇಷ್ಟು ಬೇಗ ಬಂದು ಬಿಟ್ಟಿರಿ? ಹೀರಾ ಬಂದು ಬಹಳ ಒತ್ತಾಯ ಮಾಡಿದ್ದರಿಂದ ಅವಳ ಮನೆಗೆ ಹೋಗಿದ್ದೆ. ”

ರಾಜಾರಾಮ ಮಾತನಾಡದೆ ತನ್ನ ಕೋಣೆಗೆ ಹೋದ.

ಲಲಿತೆಗೆ ಆಶ್ಚರ್ಯವಾಯಿತು. ‘ಸಂಗತಿಯಾದರೂ ಏನು? ’

“ ಏನು? ಏಕೆ? ಏನಾಯಿತು? ಸಂಗತಿಯೇನು? ಹೇಳಬಾರದೇ! ”

“ ಹೇಳುವದೇನು? ನನ್ನ ಕೆಲಸ ಹೋಯಿತು! ”

“ ಅಂ! ”

ರಾಜಾರಾಮನಿಗೆ ‘ಹಜ್ಹೂರ್ ಕಛೇರಿ’ ಯಲ್ಲಿ ಕೆಲಸ ದೊರೆತಿದ್ದರೂ ಅದು ‘ಖಾಯಂ’ ಕೆಲಸವಾಗಿರಲಿಲ್ಲ. ಗುಮಾಸ್ತೆಯೊಬ್ಬನು ರಜೆ ತೆಗೆದು ಕೊಂಡಿದ್ದನು. ಅವನ ಸ್ಥಾನದಲ್ಲಿ ರಾಜಾರಾಮನನ್ನು ನೇಮಿಸಿದ್ದರು. ಈಗ ಮೊದಲಿನ ಗುಮಾಸ್ತೆ ರಜೆ ಮುಗಿದು ಮರಳಿ ಕೆಲಸಕ್ಕೆ ಬಂದುದರಿಂದ ರಾಜಾರಾಮನು ಮನೆಗೆ ಮರಳಬೇಕಾಯಿತು.

ರಾಜಾರಾಮನು ಇದನ್ನೇನೂ ಅಷ್ಟೊಂದು ಮನಸ್ಸಿಗೆ ಹಚ್ಚಿಕೊಂಡಿರ ಲಿಲ್ಲ. ಅದಕ್ಕೆ ಆ ದಿನ ಬೆಳಗ್ಗೆ ಅವನಿಗೆ ಬಂದೊಂದು ಪತ್ರವೇ ಕಾರಣವಾ ಗಿತ್ತು. ಅವನಿಗೇನಾದರೂ ಕೊಂಚ ವ್ಯಥೆಯಾಗಿದ್ದರೆ, ಅದು ‘ಕೆಲಸವಿಲ್ಲದೆ ಸಮಯವನ್ನು ಹೇಗೆ ಕಳೆಯಲಿ? ’ ಎಂಬುದಕ್ಕಾಗಿ. ಆದರೆ, ಲಲಿತೆಯ ಚಿಂತೆ ಅಪಾರವಾಗಿತ್ತು. ಇನ್ನು ಗತಿಯೇನು? ಭಿಕ್ಷೆ ಬೇಡಿ ತಿನ್ನುವುದೇ?

ರಾತ್ರಿ; ಇಬ್ಬರೂ ಶಯನಿಸಿದ್ದರು. ರಾಜಾರಾಮನು ಲಲಿತೆಯ

ಕಡೆಗೆ ಹೊರಳಿ ನೋಡಿದನು. ಕಿಟಕಿಯ ಮೂಲಕ ಹರಿದು ಬರುತ್ತಿದ್ದ ಚಂದ್ರನ ಬೆಳಕಿನಲ್ಲಿ ಅವನಿಗೆ ಲಲಿತೆಯ ಮುಖ ಸರಿಯಾಗಿ ಗೋಚರಿಸಿತು. ನೋಡಿ, ಅವನಿಗೆ ಅಚ್ಚರಿಯಾಯಿತು.

" ಏಕೆ ಲಲಿತಾ! ಕಣ್ಣಲ್ಲಿ ನೀರು? "

ಲಲಿತೆ ಸ್ವಲ್ಪ ಹೊತ್ತು ಮಾತನಾಡಲಿಲ್ಲ. ಮತ್ತೆ ಮೆಲ್ಲನೆ, "ನಿಮ್ಮ ಕೆಲಸ ಹೋಯಿತಷ್ಟೇ! ಇನ್ನು ನಮ್ಮ ಗತಿಯೇನು?" "ಅಯ್ಯೊ! ಹುಚ್ಚೀ! ಇಷ್ಟೊಂದು ಅಲ್ಪಕಾರಣಕ್ಕಾಗಿ ಯಾರಾದರೂ ದುಃಖಿಸುತ್ತಾರೆಯೇ? ಕೆಲಸ ಹೋದರೇನಾಯಿತು? ನಾನೀಗ ಅರ್ಧ ಲಕ್ಷ ರೂಪಾಯಿಗಳಿಗೆ ಒಡೆಯನಲ್ಲವೇ? "

" ಆಂ ! ನಿಜವೇ? " ಲಲಿತೆ ಚಕಿತಳಾಗಿ ಕೇಳಿದಳು.

ಆ ಒಂದು ದಿನ ಅವಳಿಗಾದಷ್ಟು ಸಂತೋಷ, ಮುಂದೆ ಅವಳಿಗೆಂದೂ ಅವಳ ಜೀವಮಾನದಲ್ಲಿ ಉಂಟಾಗಲಿಲ್ಲ.

ರಾಜಾರಾಮನು ಅರ್ಧಲಕ್ಷರೂಪಾಯಿಗೆ ಒಡೆಯನಾಗಲು ಅವನ ಅದೃಷ್ಟವೇ ಕಾರಣವೆಂದು ಹೇಳಬೇಕು. ಹುಟ್ಟಿದಂದಿನಿಂದಲೂ ಉಡುಪಿಯಿಂದ ಒಂದು ಮೆಟ್ಟಲು ಈಚೆಗೆ ಬಂದವನಲ್ಲ ಅವನ ದೊಡ್ಡಪ್ಪ. ಅವನು ಹಣಮಾಡಿದುದು ಹೇಗೆ ಎಂಬ ಪ್ರಶ್ನೆಗೆ ಒಬ್ಬೊಬ್ಬರು ಒಂದೊಂದು ರೀತಿಯಾಗಿ ಉತ್ತರಿಸುತ್ತಾರೆ. ' ಅವನ ಅದೃಷ್ಟ; ಗೋವಾಲಾಟರಿಯಲ್ಲಿ ಹತ್ತುಸಾವಿರ ಹೊಡೆದಿದ್ದಾನೆ ' ಎಂದೊಬ್ಬರು. ಇನ್ನೊಬ್ಬರು, ' ಯಾರ್‍ಯಾರದೋ ತಲೆಹೊಡೆದು ಮಾಡಿದ್ದಯ್ಯಾ ಗಂಟು! ಇಲ್ಲವಾದರೆ ಅರ್ಧಲಕ್ಷವೆಂದರೆ ಚಿಲ್ಲರೆಯೇ? ' ಎಂದರು. ಆದರೆ ಅವನು ' ಕೃಪಣ ' ಎಂದೊಬ್ಬರೆಂದರೆ, ಇನ್ನೊಬ್ಬರು ಸುಲಭ ಶೈಲಿಯ ಅಚ್ಚಗನ್ನಡ ಪದವನ್ನೇ ಅರಸಿ, ಬಳಸಿ, ' ಜಿಪುಣ(?) ' ಎಂದರೂ ಅರ್ಥದಲ್ಲೇನೂ ತಾರತಮ್ಯವಿಲ್ಲ. ಆದರೆ, ಆ ಕೇಶವಯ್ಯ ಮಾತ್ರ ಯಾರಾದರೂ ತನ್ನನ್ನು 'ಲೋಭಿ'ಯೆಂದು ಸಂಬೋಧಿಸಿದರೆ, ' ಅವರಿಗೆ ಖರ್ಚುಮಾಡುವುದಕ್ಕೆ ಬಹಳ ಆಶೆ ' ಎಂದರೆ ಸಿಡಿದೇಳುತ್ತಿದ್ದರು. " ಹೌದೌದು; ಅಲ್ಲಾ ಅಂದವರಾರು? ನನಗೆ ದುಡ್ಡು ವ್ಯಯಿಸುವದರಲ್ಲಿ ಪರಮ ಆಶೆಯಿದೆ. ನಾನು ಕಷ್ಟಬಟ್ಟು ಸಂಪಾದಿಸಿದ್ದೇನೆ. ನನ್ನ ದುಡ್ಡು; ನನಗೆ ಆಸೆಯಿದೆ. ನನಗೆ ಆಸೆಯೆನ್ನುವ ಆ ಮುಂಡೇಮಕ್ಕಳೇನಾದರೂ, ನನಗೆ ದುಡ್ಡು ಕೊಡಲು ಬರುತ್ತಾರೆಯೇ? " ಇಂಥಃ

ಲೋಭಿ ಮಹಾಶಯುನನ್ನು ದೊಡ್ಡಪ್ಪನೆಂದು ಕರೆಯುವ ಭಾಗ್ಯ ರಾಜಾರಾಮನದು.

ಏಳೆಂಟು ವರ್ಷಗಳಷ್ಟು ಹಿಂದೆಯೇ ರಾಜಾರಾಮನು ತನ್ನ ದೊಡ್ಡಪ್ಪನೊಡನೆ ಕಲಹವೆಸಗಿ ಬಂದಿದ್ದನು. ರಾಜಾರಾಮನು ಚಿಕ್ಕಂದಿನಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡ ಅನಾಥ; ಮಂಗಳೂರಿನಲ್ಲಿ S. S. L. C. ಯ ವರೆಗೆ ಹಾಗೂ ಹೀಗೂ ಬಂದರದ ಸಾಹುಕಾರರ ಕಾಲು ಹಿಡಿದು ಬೇಡಿ ಅವನು ಮೇಲೇರಿದನು. ಆದರೆ, ಮುಂದೆ ಗ್ರ್ಯಾಜುಯೇಟನಾಗಬೇಕೆಂಬ ಆಸೆ ಅವನಿಗೆ ತಲೆದೋರಿದರೆ, ಅದು ಬಂದರದ ಸಾಹುಕಾರರ ನೆರವಿನಿಂದ ಪೂರೈಸುವ ಬಾಬೇ? ಆದರೂ, ರಾಜಾರಾಮನಿಂದ ಗ್ರ್ಯಾಜುಯೇಟನಾಗಬೇಕೆಂಬ ಆಸೆಯನ್ನು ಹಿಂಗಿಸಿಕೊಳ್ಳಲಿಕ್ಕಾಗಲಿಲ್ಲ. ಆದುದರಿಂದಲೇ ಒಂದು ಶುಭಮುಹೂರ್ತವನ್ನು ನೋಡಿ ಉಡುಪಿಗೇ ಹೋದನು. ಉಡುಪಿಯಲ್ಲಿ ಬಸ್ ಸ್ಟೇಶನಿನಲ್ಲೇ ಕೇಶವಯ್ಯ ಮೊಗದೋರಿಸಿದರು. ಅವರ ಭಾವ ಮೈದುನನನ್ನೇನೋ ಕುಂದಾಪುರಕ್ಕೆ ರವಾನೆ ಹಾಕಲು ಬಸ್‌ಸ್ಟೇಶನಿಗೆ ಅವರದು ಬರೋಣವಾಗಿತ್ತು.

ತಮ್ಮ ಸತ್ತಬಳಿಕ ಇದು ತನಕ ಒಮ್ಮೆಯಾದರೂ ತಮ್ಮನ ಮಗನಾದರೂ ಬದುಕಿಕೊಂಡಿದ್ದಾನೋ ಇಲ್ಲವೋ ಎಂಬುದನ್ನು ಕೂಡಾ ವಿಚಾರಿಸದ ಘನವಂತ ಕೇಶವಯ್ಯ. ಆದರೂ, ಈಗ ರಾಜಾರಾಮನನ್ನು ನೋಡಿದೊಡನೆ

" ಯಾರು ಮಗೂ, ರಾಜಾರಾಮನೋ? " ಎಂದರು.

" ಹೂಂ! " ಎಂದ.

" ನಿಮಗೆ 'ಸ್ಕೂಲಿ'ಗೆ ರಜಾಸಿಕ್ಕಿತೋ? "

" ರಜಾ ಸಿಕ್ಕು ನಾಲ್ಕುದಿನವಾಯಿತು! "

ಇಷ್ಟು ಮಾತನಾಡುವಾಗ ಇಬ್ಬರೂ ಬಸ್‌ಸ್ಟೇಶನಿನಿಂದ ನಾಲ್ಕು ಮಾರು ಈಚೆಗೆ ಬಂದಾಗಿತ್ತು. ಮಾತು ಮುಂದುವರಿಯುತ್ತಲೇ ಇತ್ತು.

" ಮತ್ತೇನು ನಿನ್ನ ವಿದ್ಯಾ—ಗಿದ್ಯಾ ಎಲ್ಲ ಪೂರ್ಣವಾಯಿತೇ? "

" ಹೂಂ; ಇವೇ ಈಗ ಎಸ್. ಎಸ್. ಎಲ್. ಸಿ. ಯಷ್ಟಾಯಿತು! "

" ಅಂದರೆ, ಅದೇ ಕೊನೆಯದಲ್ಲವೇ? ಏನು ಪಾಸಾದೆಯೋ?

ಅಥವಾ ಇನ್ನೊಂದು ವರ್ಷ ಕುಳಿತುಕೊಳ್ಳುವ ಮನಸ್ಸು ಮಾಡಿದೆಯೋ? ''

" ರಿಜಲ್ಟ್ ಇನ್ನೂ ಗೊತ್ತಿಲ್ಲ. ಬರಲಿಲ್ಲ. ಆದರೂ ಪಾಸಾಗುವುದಕ್ಕೆ ಯಾವ ಅಡ್ಡಿಯೂ ಇಲ್ಲವೆಂದು ಹೇಳಬಹುದು. ಅಷ್ಟು ಚೆನ್ನಾಗಿ ಮಾಡಿದ್ದೇನೆ. "

' ಔ! ' ನಾಯಿ ಕೂಗಿತು. ರಾಜಾರಾಮು ನೋಡಿದ. ಮನೆಯ ಬಳಿಗೆ ಅವರು ಬಂದಿದ್ದರು. ನಾಯಿಯಾದರೂ ತನ್ನನ್ನು ಸ್ವಾಗತಿಸಿತಲ್ಲಾ ಎಂದು ಹರ್ಷಿಸಿದ ರಾಜಾರಾಮು. ಬಾವೀಕಟ್ಟೆಯಲ್ಲಿದ್ದ ನೀರಿನಿಂದ ಕೈ ಕಾಲು ತೊಳೆದು ಇಬ್ಬರೂ ಭಾವಡಿಯನ್ನೇರಿದರು.

ಅವರ ಮನೆ ತೆಂಕಪೇಟೆಯಲ್ಲಿತ್ತು. ಮನೆಕಟ್ಟಡ ಚಿಕ್ಕದಾದರೂ ವಿಸ್ತಾರವಾದ ವಠಾರ. ಅಲ್ಲಲ್ಲಿ ತೆಂಗು, ಚೂತವೃಕ್ಷಗಳು. ಯಾವಾಗಲೂ ಎಡೆಬಿಡದೆ ತೀಡುತ್ತಿರುವ ತಂಗಾಳಿ. ರಾಜಾರಾಮು ವಾತಾವರಣಕ್ಕೆ ಮನಸೋತ.

ರಾಜಾರಾಮು ಅಪರೂಪವಾಗಿ, ಹೊಸದಾಗಿ ದೊಡ್ಡಪ್ಪನ ಮನೆಗೆ ಹೋಗಿದ್ದುದಾದರೂ, ಮಧ್ಯಾಹ್ನ ಊಟದ ಹೊತ್ತಿಗೆ ಪಾಯಸ ಬಡಿಸಲಿಲ್ಲ. ಲಾಡು, ಚಿರೋಟಿಗಳು ಕಾಣಿಸಲಿಲ್ಲ. ತುಪ್ಪಕ್ಕೆ ಎಲ್ಲರ ಎಲೆಗೆ ಚೆನ್ನಾಗಿ ಬಿದ್ದರೂ, ರಾಜಾರಾಮನ ಎಲೆಗೆ ಬೀಳಲು ಮಾತ್ರ ಮನಸ್ಸಿರಲಿಲ್ಲ. ಕೇಶವಯ್ಯನ ಹೆಂಡತಿಯ ಉಬ್ಬಿದ ಮುಖವನ್ನು ನೋಡಿ, ' ತಾನೇಕೆ ಇಲ್ಲಿಗೆ ಊಟಕ್ಕೆ ಬಂದೆನಪ್ಪಾ !' ಎಂದೆನಿಸದಿರಲಿಲ್ಲ ಅವನಿಗೆ.

ಮಧ್ಯಾಹ್ನ ಊಟವಾದ ಮೇಲೆ ಕೇಶವಯ್ಯ ರಾಜಾರಾಮುನನ್ನು ಕುಳ್ಳಿರಿಸಿಕೊಂಡು ಮಾತನಾಡಿದರು.

" ನೋಡು, ರಾಜಾರಾಮು ! ನಾನೀಗ ಹೊಸದಾಗಿ ಒಂದು ಬಟ್ಟೆಯ ಅಂಗಡಿ ತೆರೆದಿದ್ದೇನೆ. ನೀನೀಗ ಬಂದುದು ಬಹಳ ಅನುಕೂಲವಾಯಿತು. ನೀನು ಸ್ವಲ್ಪ ಅದರ ವಹಿವಾಟು ನೋಡಿಕೋ. ನಿನ್ನ ವಿದ್ಯೆಯ ಗುರಿ ಹೇಗೂ ಮುಟ್ಟಿಯಾಯಿತಲ್ಲ. ನಿನಗೆ ಸಂಬಳ-ಗಿಂಬಳ ಏನೂ ಕೊಡುವುದಿಲ್ಲ. ಹಾಗೆ ನೋಡಿದರೆ ನಿನಗೆ ಸಂಬಳವಾದರೂ ಯಾಕೆ ? ನನ್ನ ನಂತರ, ನನ್ನ ಆಸ್ತಿ, ಚಿನ್ನಾಭರಣ ಎಲ್ಲಾ ನಿನಗೇ ಅಲ್ಲವೇ ? ನನಗೇನಾದರೂ ಮಕ್ಕಳು ಮೊಮ್ಮಕ್ಕಳೇ ? ಹಾಗೆ ನಿನಗೇನಾದರೂ, ಒಂದಾಣೆ, ಎರಡಾಣೆ ಬೇಕಾದರೆ ನನ್ನ ಹತ್ತಿರ ಕೇಳು; ನಾನು ಕೊಡುತ್ತೇನೆ !"

"......................"

" ಏನು ? ಮಾತನಾಡು ! "

" ನನಗೆ ಇಷ್ಟು ಬೇಗನೇ ಉದ್ಯೋಗದ ಹವ್ಯಾಸದಲ್ಲಿ ಬೀಳುವ ಮನಸ್ಸಿಲ್ಲ ದೊಡ್ಡಪ್ಪಾ !"

" ಹಾಗಾದರೇನು ಹಾಗೇ ಬೀದಿ ಬೀದಿ ತಿರುಗಬೇಕೆನ್ನುವಿಯಾ? "

" ನನಗೆ ಕಾಲೇಜಿಗೆ ಹೋಗುವ ಮನಸ್ಸು !"

" ಏನು, ಬಿ. ಎ. ಏರಬೇಕಂತೀಯಾ ? ಎಲ್ಲಾ ಸುಮ್ಮನೆ ದುಡ್ಡು ದಂಡ ! ಏನು ಬಿ. ಎ. ಕಲಿತವರಿಗೆ ದೊಡ್ಡ ಕೆಲಸ ಸಿಗುತ್ತದೆ ಎಂದೇನಾದರೂ ಉಂಟೇ, ಈಗಿನ ಕಾಲದಲ್ಲಿ? ಹಾಗೆ ನೋಡಿದರೆ ಎಸ್. ಎಸ್. ಎಲ್. ಸಿ. ಯವರಿಗಿರುವಷ್ಟು ಸಂದರ್ಭ ಬಿ. ಎ. ಯವರಿಗಿಲ್ಲ. ಚಿಲ್ಲರೆ ಪಲ್ಲರೆ ಕೆಲಸ ಸಾಲದು, ಯೋಗ್ಯತೆಗೆ ಕಡಿಮೆ. ದೊಡ್ಡ ಕೆಲಸ ಇಲ್ಲ. ಕೊನೆಗೆ ತ್ರಿಶಂಕು ಸ್ವರ್ಗವೇ ಗತಿ !"

" ವಿದ್ಯಾ-ಬುದ್ಧಿ ಎಲ್ಲಾ ಸಂಸ್ಕೃತಿ ಹೆಚ್ಚುವುದಕ್ಕೆ ತಾನೇ ಹೊರತು, ಆರ್ಥಿಕ ಪ್ರಯೋಜನಕ್ಕೆಂದು ಯಾರು ಹೇಳಿದವರು ? ನಾನು ಬಿ. ಎ. ಕಲಿಯುವುದು ದೊಡ್ಡ ಸಂಬಳದ ಕೆಲಸ ದೊರಕಿಸಿಕೊಳ್ಳಲಿಕ್ಕಲ್ಲ !"

" ಹಾಗಾದರೆ, ನಾನು ಹೇಳಿದ ಹಾಗೇ! ದುಡ್ಡು ಹಾಳು ಮಾಡಲಿಕ್ಕೆ ನೀನು ಕಲಿಯುವುದು !"

"ಹೆಚ್ಚೇನಿಲ್ಲ; ಒಂದೈದು ಸಾವಿರ ರೂಪಾಯಿ ಖರ್ಚಾಗಬಹುದು !"

"ಐದು ಸಾವಿರ ! ಎಲಾ ಮಗನೇ! ಒಂದು ಪೈ ಕೈಬಿಟ್ಟತೆಂದರೆ ನನ್ನ ಜೀವ ಇಬ್ಭಾಗವಾಗುತ್ತದೆ. ನಿನಗೀಗ ಐದು ಸಾವಿರ ! ಬರೇ ಬಿ. ಎ. ಆಗಲಿಕ್ಕೆ !"

" ಒಂದು ವೇಳೆ ಖರ್ಚಾದರೂ ಏನಾಯಿತು, ದೊಡ್ಡಪ್ಪ ! ಇನ್ನು ಮುಂದೆ ಹೇಗೂ ನಿಮ್ಮ ದುಡ್ಡು ನನಗೇ ಅಲ್ಲವೇ ?"

"ಯಾರು ಹೇಳಿದವರು ನಿನಗೆ ?"

"ನೀವೇ ಹೇಳಿದ್ದಲ್ಲವೇ !"

"ಅದೆಲ್ಲಾ ಅಸಾಧ್ಯ; ನೀನು ನನ್ನ ಜವುಳಿ ಅಂಗಡಿಯಲ್ಲಿ ಕುಳಿತುಕೊಳ್ಳಲೇಬೇಕು !"

ಆ ದಿನ ರಾತ್ರಿ ಪವಡಿಸುವ ತನಕವೂ ಇದೇ ವಿಚಾರವಾಗಿ ಬಿರುಸಾಗಿ

ಇಬ್ಬರೊಳಗೂ ವಾಗ್ವಾದ ನಡೆಯಿತು. ಇಬ್ಬರೂ ಛಲವಾದಿಗಳು; ಅಭಿಪ್ರಾಯವನ್ನು ವ್ಯತ್ಯಾಸಗೊಳಿಸುವವರಲ್ಲ. ವಿಜಯ ಮಾಲೆ ಯಾರ ಕೊರಳೊಳಗೂ ಬೀಳಲಿಲ್ಲ. ಕೊನೆಗೆ ನಿದ್ರಾದೇವಿಯೇ 'ಸಾಕು ಇಂದಿಗೆ' ಎಂದು ಇಬ್ಬರನ್ನೂ ತಟ್ಟಿ ಮಲಗಿಸಿದಳು.

ಮರುದಿನ ಬೆಳಗಾಯಿತು; ಹಕ್ಕಿಗಳೊಂದಿಗೆ ತಾನೂ ಎದ್ದು ರಾಜಾರಾಮ, "ಹಾಗಾದರೆ, ನಾನು ಹೊರಟೆ." ಎಂದನು.

"ಎಲ್ಲಿಗೋ, ನಿನ್ನ ಅಪ್ಪನ ಮನೆಗೊ ?"

"................"

"ಒಳ್ಳೆಯದಕ್ಕೆ ನನ್ನ ಮಾತು ಕೇಳು. ಇಲ್ಲವಾದಲ್ಲಿ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲ. ನನ್ನ ಮಾತೆಂದರೆ ಸುಮ್ಮನೆಯೇ ? ಅದನ್ನು ಧಿಕ್ಕರಿಸುವುದೇನು ಹುಡುಗಾಟಿಕೆ ಎಂದು ತಿಳಿದಿದ್ದೀಯಾ ?"

"ನೀವು ನನ್ನನ್ನು ಕಾಲೇಜಿಗೆ ಕಳುಹಿಸುವುದಿಲ್ಲವಷ್ಟೆ !"

"ಪುನಃ ಪುನಃ ಅದೇ ಮಾತು. ನಾನು ಹೇಳುವುದು ನಿನಗೆ ಗೊತ್ತಾಗುವುದಿಲ್ಲವೇನು ?"

"ಹಾಗಾದರೆ, ಹೊರಟೆ !" ರಾಜಾರಾಮ ಹೊರಟ.

"ಹೋಗಬೇಡ! ನಿಲ್ಲು, ನಿಲ್ಲು! ಜೋಕೆ! ನನ್ನ ಆಸ್ತಿ ಒಂದು ಚೂರೂ, ಸಿಕ್ಕಲಾರದು."

ರಾಜಾರಾಮ ಮುಂದುವರಿದ." ಬೀದಿಗೆ ಬಂದ ಮೇಲೂ, "ನನ್ನದನ್ನೆಲ್ಲ ಸರಕಾರಕ್ಕೆ ಕೊಟ್ಟು ಬಿಡುತ್ತೇನೆ." ಎನ್ನುವ ಕೇಶವಯ್ಯನ ಮಾತು ಅವನಿಗೆ ಕೇಳಿಸಿತು.

ಆ ಮೇಲೆ ರಾಜಾರಾಮ ಅತ್ತ ಹೋಗಲಿಲ್ಲ. ಕಾಲೇಜಿಗೆ ಹೋಗಬೇಕೆಂಬ ಅವನಾಸೆಯುಂತೂ ಬಯಲಾಸೆಯಾಯಿತು. ಕ್ರಮೇಣ ದೊಡ್ಡಪ್ಪನನ್ನು ಅವನು ಸಂಪೂರ್ಣ ಮರೆತು ಬಿಟ್ಟನು. ಆದರೆ, ಈ ದಿನ ಬಂದ ಪತ್ರವು ಪುನಃ ಆ ನೆನಪನ್ನು ಹುಟ್ಟಿಸಿತು. ತನ್ನ ಕೆಲಸ ಹೋದರೂ ಅವನು ಅದನ್ನು ಅಷ್ಟೊಂದು ಗಮನಿಸಿರಲಿಲ್ಲ.

ಮರುದಿನ ಕೇಶವಯ್ಯನ ಎಟರ್ನಿಯೇ ಮಂಗಳೂರಿಗೆ ಬಂದನು. ಅವನೊಂದಿಗೆ ಕೇಶವಯ್ಯನ ಆಸ್ತಿ, ಹೊಲಗದ್ದೆಗಳಿರುವ ಸ್ಥಳಗಳಿಗೆಲ್ಲಾ ರಾಜಾರಾಮನು ಹೋಗಿಬಂದನು. ದಾರಿಯಲ್ಲಿ ಎಟರ್ನಿ ಕೇಶವಯ್ಯನ

ನಿರ್ಯಾಣಕಾಲದ ಕಥೆಯನ್ನು ರಾಜಾರಾಮನಿಗೆ ಪಾರಾಯಣ ಮಾಡಿಸಿದನು.

ಕೇಶವಯ್ಯ ಕ್ರೋಧದಿಂದ 'ನನ್ನದನ್ನೆಲ್ಲ ಸರಕಾರಕ್ಕೆ ಕೊಟ್ಟುಬಿಡುತ್ತೇನೆ' ಎಂದಿದ್ದರೂ ಅವರಿಗೆ ಹಾಗೆ ಮಾಡುವ ಮನಸ್ಸಿರಲಿಲ್ಲ. ಅವರ ಹೆಂಡತಿ ತನ್ನ ತಮ್ಮನ ಮಗನನ್ನು ದತ್ತು ತೆಗೆದುಕೊಳ್ಳುವಂತೆ ಯಾವಾಗಲೂ ಪೀಡಿಸುತ್ತಿದ್ದರೂ, ಅವರೆಲ್ಲಾ ಅನೀತಿವಂತರಾದುದದಿಂದ 'ಅಲ್ಪರ ಸಂಗ ಅಭಿಮಾನ ಭಂಗ' ಎಂದುಕೊಂಡು ಕೇಶವಯ್ಯ ಹಾಗೂ ಮಾಡಿರಲಿಲ್ಲ. ಇದರಿಂದಲೇ ಕೇಶವಯ್ಯ ಕೊನೆಗೆ ಭಯಂಕರ ವ್ಯಾಧಿಗ್ರಸ್ತರಾದಾಗ ಅವರ ಪತ್ನಿ ಅವರನ್ನು ತೊರೆದು ತವರು ಮನೆಗೆ ಹೋಗಿಬಿಟ್ಟಳು. ಕೇಶವಯ್ಯ ರಾಜಾರಾಮನನ್ನು ಕರೆಯಿಸಿಕೊಳ್ಳಲಿಚ್ಛಿಸಿದರು. ಆದರೆ, ರಾಜಾರಾಮನ ಗೊತ್ತು ಗುರಿ ಯಾರಿಗೂ ತಿಳಿದಿರಲಿಲ್ಲ. ಬೇರೇನೂ ಉಪಾಯಗಾಣದೆ ಕೇಶವಯ್ಯ ಎಟರ್ನಿಯನ್ನು ಕರೆಯಿಸಿ ಉಯಿಲು ಬರೆಯಿಸಿದರು. ಆದರಲ್ಲಿ ತನ್ನ ಸಕಲ ಸಂಪತ್ತನ್ನೂ ರಾಜಾರಾಮನಿಗೆ ಕೊಟ್ಟಿದ್ದರು.

ಕೇಶವಯ್ಯ ಸತ್ತು ಮೂರು ವರ್ಷಗಳ ಮೇಲಾದರೂ ಉಯಿಲು ಎಟರ್ನಿಯ ಬಳಿಯಲ್ಲೇ ಇತ್ತು. ಕೇಶವಯ್ಯನ ಹೆಂಡತಿ ತನ್ನ ತವರು ಮನೆಯವರ ಸಹಾಯದಿಂದ ಗಂಡನ ಸಂಪತ್ತಿಗಾಗಿ ಹೋರಾಡಿ ನಿರಾಶಳಾದಳು. ಆದರೆ, ಈ ಮೂರು ವರ್ಷಗಳಮೇಲೆ ರಾಜಾರಾಮನ ಪತ್ತೆ ಸಿಕ್ಕಿ ಎಟರ್ನಿ ಅವನಿಗೆ ಕಾಗದ ಬರೆದಿದ್ದನು.

ರಾಜಾರಾಮನು ದೊಡ್ಡಪ್ಪನ ಆಸ್ತಿಗೆ ಅಧಿಕಾರಿಯಾಗಿ ಮಹಾಸಂಭ್ರಮದಿಂದ ಮೃತತಿಥಿಯನ್ನೆಸಗಿದನು. ಎಟರ್ನಿ ತನ್ನ ಬುದ್ಧಿವಂತಿಕೆಯನ್ನು ಪಯೋಗಿಸಿದನು. ಸಾಧಾರಣ ಎರಡು ಸಾವಿರದಷ್ಟು ಕವಳಿಸಿಕೊಂಡು ಹೋದನು. ಆ ಎರಡುವಾರ ಜೋಡುಮಟದ ಅವರ ಆ ಮನೆ ಮದುವೆಯ ಮನೆಯಂತೆ, ಉತ್ಸವದ ಮನೆಯಂತೆ ಕಂಗೊಳಿಸುತ್ತಿತ್ತು. ಈ ಅವಧಿಯಲ್ಲಿ ಲಲಿತೆಯ ಸಂತೋಷ ಸಂಭ್ರಮವೋ ವರ್ಣನಾ ಬಾಹಿರವಾದುದು.

೩

ರಾಜಾರಾಮನು ಅರ್ಧಲಕ್ಷಾಧೀಶನಾದನು. ಆದರೆ, ಕಾಲಹರಣದ ಚಿಂತೆಗೆ ವೊಪಲಾಯಿತು. ದ್ರವ್ಯಾಭಾವವಿರದಿದ್ದರೂ, ಉದ್ಯೋಗಾಭಾವವಿದೆಯಷ್ಟೆ! ಸಮಯವನ್ನು ಯಾವುದರಿಂದ ಅಳೆಯುವದು? ಒಂದು ಮಣ

ಸಿಗರೇಟಿನ ಬೂದಿಯಿಂದಲೇ, ಒಂದು ಹಂಡೆ ಡಿಕಾಕ್ಷನ್ ಕಾಫಿಯಿಂದಲೇ ? ಒಂಡೆರಡು ದಿನ ಲಾಯಿಟ್ ಹೌಸಿಗೆ ಹೋಗಿ ಬಂದನು. ಆದರೆ, ನೋಡಲು ಅಲ್ಲೇನಿದೆ ? ಪ್ರಾಚೀನ ಐತಿಹಾಸಿಕ ಕುರುಹಾದ ಈದಗಾ ಪ್ರಾರ್ಥನಾ ಮಂದಿರವೇನೋ ಇದೆ. ಆದರೆ, ದಿನವೂ ಅದನ್ನೇನು ನೋಡುವದು ? ದಿನದಿನವೂ ಅದನ್ನು ನೋಡಿದಂತೆ ಸೊಗಸು ವಿರಳವಾಗುತ್ತಿದ್ದೀತೇ ವಿನಾ ವಿಪುಲವಾಗುತ್ತಿರಲಿಲ್ಲ. ಅಲ್ಲೇ ಇರುವ ಮುನ್ಸಿಪಲ್ ವಾಚನಾಲಯವೂ ಅಷ್ಟಕ್ಕಷ್ಟೆ ! ಕನ್ನಡ ಮಾಸಪತ್ರಿಕೆಗಳೊಂದೂ ಇಲ್ಲ. ಆಂಗ್ಲಪತ್ರಿಕೆಗಳು ಕೂಡಾ ಯಥೋಪರಿ. ಹಿಂದೂ ಎಕ್ಸ್‌ಪ್ರೆಸ್‌ಗಳನ್ನು ಬಿಟ್ಟು ಅಮೃತ ಬಝಾರ, ಭಾರತಜ್ಯೋತಿ, ಬಾಂಬೇ ಕ್ರಾನಿಕಲ್ ಪತ್ರಿಕೆಗಳ ಹೆಸರಾದರೂ ಬೇಕೆ ಅಲ್ಲಿ? ಸರ್ಪದಂತೆ ಗಾಳಿಯನ್ನಾದರೂ ಸೇವಿಸಿ ಕುಳಿತುಕೊಳ್ಳೋಣವೆಂದರೆ ಆ ಗುಡ್ಡದ ಮೇಲೆ ಏನಿದೆ ? ಕಾಲು ತುಂಡಾದ, ಸೀಟಿಲ್ಲದ ಸೋಪಾಗಳು ! ಎರಡು ಮೂರು ದಿನ ಅಲ್ಲಿಗೆ ಹೋದುದೇ ಸಾಕಾಯಿತು. ರಾಜಾರಾಮನಿಗೆ, ಅಲ್ಲಿಯ ಹಣೆಬರಹ ತಿಳಿಯಲು ಲಾಯಿಟ್ ಹೌಸ್ ಬಿಟ್ಟು ಲಾಯಿನ್ ಮೈದಾನಿಗೆ ಹೋಗಲು ಪ್ರಾರಂಭವಾಯಿತು. ಆದರೆ, ಲಾಯಿನ್ ಮೈದಾನಿಗಾದರೂ ಸಂಜೆ ಮಾತ್ರ ಹೋಗಬೇಕು. ಇಂದ್ರ ಜಾಲಿಗರನ್ನೋ, ಮಣಿಸರಕಿನವರನ್ನೋ, ಮದ್ದಿನ ಏಜಂಟರನ್ನೋ ನೋಡಲು ಅಥವಾ ಸಂಗೀತವನ್ನು ಕುಡಿಯಲು, ಬೆಳಿಗ್ಗೆ, ಮಧ್ಯಾಹ್ನ ಹೋದರೆ ಅಲ್ಲಿ ನುಸಿಗಳು ಕೂಡಾ ಇರುವುದಿಲ್ಲ. ಲಾಯಿನ್ ಮೈದಾನ್ ಜೊತೆಗೆ ಅರುಂಡೇಲ ಗವಿ, ಸುಲ್ತಾನ ಬತ್ತೇರಿ, ಉಳ್ಳಾಲ ಸಂಕ, ಉಭಯಗಿರಿಗಳಿಗೆ ಹೋಗಲು ಮೊದಲಾಯಿತು. ಆದರೆ ಇದಾವುದೂ ಸಮಯವನ್ನು ಕಳೆಯಲು ಬೇಸರವನ್ನು ಹೋಗಲಾಡಿಸಲು ನೆರವಾಗಲಿಲ್ಲ. ಸಿಗರೇಟು, ಕಾಫಿಗಳಲ್ಲೂ ಬೇಸರ ಬಂದಿತು.

ಮಂಗಳೂರಲ್ಲಿ ಒಮ್ಮೆಲೇ ಹತ್ತಾರು ಮಾಸಪತ್ರಿಕೆಗಳು ಹೊರಟುದನ್ನು ನೋಡಿ ತಾನೂ ಒಂದು ಮಾಸಪತ್ರಿಕೆಯನ್ನು ಹೊರಡಿಸೋಣ ಎಂಬಾಲೋಚನೆಯುಂಟಾಯಿತು ರಾಜಾರಾಮನಿಗೆ. ಆವನು ಪತ್ರಿಕೆಯನ್ನು ಹೊರಡಿಸಲು ಸಂಕಲ್ಪಿಸಿದುದು ಕನ್ನಡವು ಉದ್ಧಾರವಾಗಬೇಕೆಂಬ ಭಾಷಾ ದೃಷ್ಟಿಯಿಂದಲ್ಲ; ದ್ರವ್ಯಸಂಪಾದನೆ ಮಾಡಬೇಕೆಂಬ ವ್ಯಾಪಾರೀ ದೃಷ್ಟಿಯಿಂದಲೂ ಅಲ್ಲ. ತನ್ನ ಕೆಲವು ಕೃತಿಗಳನ್ನು ಅಚ್ಚಿನಲ್ಲಿ ಕಾಣಬೇಕೆಂಬ

ಮಹದಭಿಲಾಷೆಯಿಂದ. ಚಿಕ್ಕಂದಿನಿಂದಲೂ ಅವನಿಗೆ ಓದುವುದೆಂದರೆ ಒಂದು ದೊಡ್ಡ ಹುಚ್ಚು. ಮೊದಲೇ ಅವನಲ್ಲಿದ್ದ ರಚನಾ ಸಾಮರ್ಥ್ಯವು ಪುಸ್ತಕದ ಪಠಣದಿಂದ ವರ್ಧಿಸಿ ಅವನನ್ನು ಲೇಖನಿ ಹಿಡಿಯುವಂತೆ ಪ್ರೇರೇಪಿಸಿತ್ತು. ಮೊದಲು ಬರೆದ ಒಂದೆರಡು ಕತೆ, ಕವಿತೆಗಳು ಕಸದ ಬುಟ್ಟಿಗಾದವು. ಅವುಗಳನ್ನು ಪತ್ರಿಕೆಗಳಿಗೆ ಕಳುಹಿಸಬೇಕು, ಅಚ್ಚಿನಲ್ಲಿ ಕಾಣಬೇಕು ಎಂಬ ಆಲೋಚನೆಯು ತಿಲಮಾತ್ರವಾದರೂ ಆಗ ಆತನಿಗಿರಲಿಲ್ಲ. ಆದರೆ, ದಿನದಿನವೂ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಹಲವಾರು ಕತೆಗಳನ್ನು ನೋಡಿ, ತನ್ನದೂ ಒಂದು ಇರಲಿ, ಎಂಬ ಭಾವನೆಯಿಂದ ಕೊನೆಗೆ ಸ್ಥಳೀಯ ಪತ್ರಿಕೆಯೊಂದಕ್ಕೆ ಕತೆಯನ್ನು ಕಳುಹಿಸಿಕೊಟ್ಟನು. ಮೂರು ವಾರಗಳ ತನಕ ಕಾದರೂ ನಿರಾಶನಾಗಬೇಕಾಯಿತು. ಅದುವರೆಗೆ, ಬರೆದುದೆಲ್ಲಾ, ಕಳುಹಿಸಿದುದೆಲ್ಲಾ ಪ್ರಕಟವಾಗುತ್ತದೆಂಬ ಭಾವನೆಯನ್ನಿಟ್ಟುಕೊಂಡ ರಾಜಾರಾಮನಿಗೆ ಮೊದಲ ಬಾರಿಗೆ ಭಾವನಿರಸನವಾಯಿತು. ಆದರೂ, ಅವನೇನು ಎದೆಗುಂದಲಿಲ್ಲ, ಕರ್ತವ್ಯಚ್ಯುತನಾಗಲಿಲ್ಲ. ಅವನ ಓದು ಎಡೆಬಿಡದೆ ಸಾಗಿತ್ತು. ಅದರೊಂದಿಗೆ ಬರವಣಿಗೆಯ ಕೆಲಸವೂ ಅವಿರತವಾಗಿ ಸಾಗಿತ್ತು. ಓದಿನ ಬಂಡವಾಳ ಅಧಿಕವಾದಂತೆ, ಕೈ ಪಳಗಿದಂತೆ, ರಾಜಾರಾಮನ ಕೃತಿಗಳೂ ಉತ್ಕೃಷ್ಟವಾಗತೊಡಗಿದವು. ಇವುಗಳಾದರೂ ಪ್ರಕಟವಾಗದಿರಲಾರವೆಂದು ನೆರೆನಂಬಿ ಕಳುಹಿಸಿದ ರಾಜಾರಾಮನಿಗೆ ಅಂಚೆ ವೆಚ್ಚ ನಷ್ಟವಾಯಿತಲ್ಲದೆ ಬೇರೇನೂ ಲಾಭವಾಗಲಿಲ್ಲ. ಆಗಲೇ ಸಂಪಾದಕನ ಮೇಲೆ ಎಲ್ಲಿಲ್ಲದ ದ್ವೇಷ ಬಂದಿತವನಿಗೆ. ಒಬ್ಬಿಬ್ಬರು, 'ನಿಮ್ಮ ಕತೆ ಚೆನ್ನಾಗಿದ್ದರೂ, ಸ್ಥಳಾಭಾವದಿಂದ ಪ್ರಕಟಿಸಲಾಗಲಿಲ್ಲ' ವೆಂದು ಕತೆಯನ್ನು ಹಿಂದಕ್ಕೆ ಕಳುಹಿಸಿದ್ದರೂ, ಹಿಂದಕ್ಕೆ ಕಳುಹಿಸದವರೇ ಹೆಚ್ಚು ಮಂದಿ. ಎಲ್ಲರೂ ಕತೆಗಳನ್ನು ತಮ್ಮ ಫಾಯಿಲ್ಲಿನಲ್ಲಿ ಭದ್ರವಾಗಿಟ್ಟು ಎರಡು ಮೂರು ಮಣ ಭಾರದಷ್ಟಾದ ಮೇಲೆ ಹೋಟಲಿಗೋ, ಜೀನಸಿನ ಅಂಗಡಿಗೋ ಕಳುಹಿಸುವ ಆಲೋಚನೆಯುಳ್ಳವರು.

ರಾಜಾರಾಮ ಎಷ್ಟು ಪ್ರಯತ್ನಪಟ್ಟರೂ, ಅವನಿಗೆ ತನ್ನ ಕತೆಯೊಂದನ್ನಾದರೂ ಅಚ್ಚಿನಲ್ಲಿ ಕಾಣುವ ಸುಯೋಗ ದೊರಗಲಿಲ್ಲ. ಒಬ್ಬ ಸಂಪಾದಕರು ವಾರಂಪ್ರತಿಯೂ ತನ್ನ ಮಕ್ಕಳ ಕತೆಗಳನ್ನೇ, ಅವುಗಳ ಯೋಗ್ಯತೆಯ ಕಡೆಗೆ ಗಮನವೀಯದೆ ಪ್ರಕಟಿಸುತ್ತಿರುವದನ್ನು ನೋಡಿ,

ತನ್ನ ತಂದೆಯೂ ಹೀಗೆಯೇ ಒಂದು ಪತ್ರಿಕೆಯನ್ನು ಹೊರಡಿಸಬಾರ ದಾಗಿತ್ತೇ ಎಂದುಕೊಳ್ಳುತ್ತಿದ್ದನು. ಆದರೆ, ತಂದೆಯೇ ಇಲ್ಲದ ಮೇಲೆ ಪತ್ರಿಕೆ ಎಲ್ಲಿಂದ? ಕೆಲವು ಪತ್ರಿಕೆಯವರು ಒಂದೆರಡು ಗ್ರಂಥಗಳನ್ನು ಪ್ರಕಟಿಸಿ ಪ್ರಸಿದ್ಧಿಗೆ ಬಂದವರು ಬರೆದ ಕಸವನ್ನೇ, ರಸವೆಂದು ತಿಳಿದು ಪ್ರಕಟಿಸು ತ್ತಿರುವುದನ್ನು ನೋಡಿ, ತಾನೂ ಒಂದೆರಡು ಗ್ರಂಥಗಳನ್ನು ಬರೆದು ಪ್ರಕಟಿ ಸೋಣ ಎಂದು ಆಲೋಚಿಸಿದನು. ಆದರೆ, ಪ್ರಕಾಶಕರಿಗೆ ಬರೆದರೆ, ಕೆಲ ವರು ಮೌನವಾಗಿ ಕುಳಿತರೆ, ಕೆಲವರದು 'ಕಾಗದದ ಅಭಾವದಿಂದ ನಿಮ್ಮ ಗ್ರಂಥವನ್ನು ಪ್ರಕಟಿಸಲು ಸಾಧ್ಯವಿಲ್ಲೆಂದು ತಿಳಿಸಲು ವಿಷಾದವಾಗುತ್ತದೆ.' ಎಂಬ ಉತ್ತರ. ತನ್ನ ಗ್ರಂಥವನ್ನು ಪ್ರಕಟಿಸುವುದಕ್ಕೆ ಕಾಗದದ ಅಭಾವ ವಾದರೆ, ಸಾಹಿತಿಗಳೆಂದು ಹೇಳಿಸಿಕೊಳ್ಳುವವರ ಗ್ರಂಥಗಳು ವರ್ಷಕ್ಕೆ ಸಾವಿ ರಾರು ಪ್ರಕಟವಾಗುತ್ತಿವೆಯಷ್ಟೇ ! ಅವರಿಗೆಲ್ಲಾ ಕಾಗದದ ಅಭಾವವಿಲ್ಲವೇ ಎಂಬುದೇ ಅವನ ದೊಡ್ಡ ಸಮಸ್ಯೆ. ಒಟ್ಟಾರೆ ಇದೆಲ್ಲಾ ಸಂಪಾದಕರ, ಪ್ರಕಾಶಕರ ಪಾಸಿಂಗತನ ಎಂದು ಯಾರೂ ಅವನಿಗೆ ಬೋಧಿಸಬೇಕಾಗಿರ ಲಿಲ್ಲ. ಆದರೆ, ತನ್ನ ಅಭಿಪ್ರಾಯಕ್ಕೆ ನುಡಿಯರೂಪಗೊಟ್ಟರೆ ಮಾತ್ರ ಹಲ ವರ ವೈರವನ್ನು ಕಟ್ಟಿಕೊಳ್ಳಬೇಕಾಗುತ್ತಿತ್ತು. ಇನ್ನು ಕತೆಗಳಿಗಾಗಿಯೇ ಮೀಸಲಾಗಿಟ್ಟ ಮಾಸಪತ್ರಿಕೆಗಳಾದರೋ ದೊಡ್ಡ ಮೋಸ ಪತ್ರಿಕೆಗಳು. ಹೊಸಬರಿಗೆ ತುಂಬಾ ಪ್ರೋತ್ಸಾಹ ಎಂದು ಅಬ್ಬರಿಸಿ, ಕೊನೆಗೆ ಹೊಸಬರು ವ್ಯರ್ಥವಾಗಿ, ಅಂಚೆಗಾಗಿ ವೆಚ್ಚಮಾಡುವಂತೆ ಪ್ರೇರೇಪಿಸುವ ಪತ್ರಿಕೆಗಳು. ಇಂಥ: ಬಹುಮಾನ, ಸನ್ಮಾನ. ಆದರಗಳು ಪತ್ರಿಕೆಯವರಿಂದ ದೊರಕುತ್ತಿ ದ್ದುದು ರಾಜಾರಾಮನೊಬ್ಬನಿಗೆ ಮಾತ್ರವಲ್ಲ. ಅವನ ಸಮವಯಸ್ಸಿನವ ರಲ್ಲಿ, ಪತ್ರಿಕೋದ್ಯೋಗಿಗಳ ಕಡೆಗೆ ಸದಭಿಪ್ರಾಯವನ್ನಿಟ್ಟುಕೊಂಡವರಾರೂ ಇರಲಿಲ್ಲ. ಅಂತೂ ಇವೆಲ್ಲವುಗಳ ದೆಸೆಯಿಂದಾಗಿ ರಾಜಾರಾಮನು ಹೈಸ್ಕೂ ಲಿನಿಂದ ಹೊರಬರುವಾಗ ಓದುವುದನ್ನು ವರ್ಜಿಸಿರದಿದ್ದರೂ, ಬರೆಯುವು ದನ್ನು ಸಂಪೂರ್ಣವಾಗಿ ಬಿಟ್ಟು ಬಿಟ್ಟಿದ್ದನು. ಇದಕ್ಕೆ ಪ್ರೋತ್ಸಾಹದ ಅಭಾ ವವೇ ಮೂಲಕಾರಣವೆಂದರೆ ಸುಳ್ಳಾಗಲಾರದು.

ರಾಜಾರಾಮನು ಪತ್ರಿಕೆಯನ್ನು ಹೊರಡಿಸಲು ಸಂಕಲ್ಪಿಸಿದ ಕಾಲಕ್ಕೇ, ಗೆಳೆಯನೊಬ್ಬನ ಸಹಾಯವೂ ದೊರಕಿತು. ಒಂದು ದಿನ, ಅವನು ಸಂಜೆ ದಾರಿಯಲ್ಲಿ ಹೋಗುವಾಗ, "ರಾಜಾರಾಮ! " ಎಂದು ಹಿಂದಿನಿಂದ ಕರೆ.

ರಾಜಾರಾಮ ಹಿಂದಿರುಗಿ ನೋಡಿದುದು ತನ್ನ ಹಳೆಯ ಸ್ನೇಹಿತ ನರಸಿಂಹನನ್ನು.

"ಏನಯ್ಯಾ, ಲಕ್ಷಾಧೀಶ !"

"ಲಕ್ಷಾಧೀಶನಲ್ಲ: ಅರ್ಧ ಲಕ್ಷಾಧೀಶ !"

"ಏನು, ಕಡಿಮೆಯಾಯಿತೇ ?"

"ಹಾಗೆಂದೆನೇ ?"

"ನೀನೊಬ್ಬ ದೊಡ್ಡ 'ಲಕ್ಕೀಮೆನ್' ಕಾಣಯ್ಯ !"

"ಎಂಥ: ಲಕ್ಕಿಯಯ್ಯಾ! ಕೆಲಸವಿಲ್ಲದೆ ಜೀವನ ಬೇಜಾರಾಗಿದೆ."

"ಓಹೋ ! ನೀನೀಗ ನಿರುದ್ಯೋಗಿಯೇ ?"

"ಗೊತ್ತಿಲ್ಲವೇ ?"

"ಅಯ್ಯೋ, ಮಂಕೇ ! ಅರ್ಧ ಲಕ್ಷಾಧೀಶನಾಗಿ ಇದಕ್ಕೆ ಇಷ್ಟೊಂದು ವ್ಯಥೆಯೇ ?"

"ಸಮಯವನ್ನು ಹೇಗೆ ಕಳೆಯಲಯ್ಯಾ ?"

"ಅದಕ್ಕೇಕೆ ಆಲೋಚನೆ? ನಿನಗೆ ಗೊತ್ತಿಲ್ಲವೇ ಮಂಗಳೂರಿನಲ್ಲಿ ಈಗ ಹತ್ತಾರು ಮಾಸ ಪತ್ರಿಕೆಗಳು ಹೊರಟಿದ್ದು."

"ನಿನ್ನ ಆಲೋಚನೆ ಕೂಡಾ ಹಾಗೇನು ? ನಾನಂತೂ ಹಾಗೆಯೇ ತೀರ್ಮಾನಿಸಿದ್ದೇನೆ."

"ಏನು, ಪತ್ರಿಕೆ ಹೊರಡಿಸುವುದೇ ? ಹಾಗಾದರೆ, ಪಸಂದಾಯಿತು ! ಬೇಕಾದರೆ ನಾನೂ ಬರುತ್ತೇನೆ ಜೊತೆಗೆ. ಸಹಾಯಕ್ಕೆ !"

"ನೀನು ಬೇಕೇಬೇಕು !"

'ನಾಳೆ ಮನೆಗೆ ಬರುತ್ತೇನೆಂ' ದು ನರಸಿಂಹ ರಾಜಾರಾಮನನ್ನು ಬೀಳ್ಕೊಂಡನು.

ಮರುದಿನ ರಾಜಾರಾಮನ ಮನೆಯಲ್ಲಿ ದೊಡ್ಡ ಚರ್ಚೆ ನಡೆಯಿತು. ಮೊದಲ ಪ್ರಧಾನ ಚರ್ಚೆ ಪತ್ರಿಕೆಗೆ ಹೆಸರನ್ನಿಡುವುದರ ಕುರಿತು. ಯಾವ ಯಾವ ಡಿಕ್ಷನರಿಗಳ ಹೆಸರುಗಳೂ ಸಂಪಾದಕರುಗಳಿಗೆ ಒಪ್ಪಿಗೆಯಾಗಲಿಲ್ಲ. ಕೊನೆಗೆ ನರಸಿಂಹನ ಬಾಯಿಯಿಂದ 'ಯತಿಪತಿ' ಎಂಬ ಹೆಸರನ್ನು ಸೂಚಿಸಿದಾಗ, ವಾಣಿಯ ಆಲೋಚನೆಗೆ ಬ್ರಹ್ಮನು ರಾಜಾರಾಮನಿಂದ ಒಪ್ಪಿಗೆಯ ಮುದ್ರೆಯನ್ನು ಹಾಕಿಸಿದನು. ಮರುದಿನ ಇಬ್ಬರೂ ರಥಬೀದಿಯಲ್ಲಿ ಸಂಚ

ರಿಸಿ, ಹುಡುಕಿ, ಒಂದು ಕೋಣೆಯ ಮಾಳಿಗೆಯನ್ನು ಅದರ ಯಜಮಾನನು ಕೊಡಲಾಗುವುದಿಲ್ಲವೆಂದರೂ ಕೇಳದೆ, ಅವನ ಪ್ರಾಣ ಹೀರಿ ಬಾಡಿಗೆಗೆ ಹಿಡಿದರು. ಪೇಂಟಿಂಗಿನವರಿಗೆ 'ಒರ್ಡರಾ'ಗಿ 'ಯತಿಪತಿ ಕಾರ್ಯಾಲಯ'ದ ಹಲಗೆ ಮಾಳಿಗೆಯ ಮುಂದೆ ಹೊಸ ಪ್ರಸನ್ನ ವದನದಿಂದ ತೂಗಾಡಿತು. ನರಸಿಂಹನು ಹೋಗಿ ಸಾಧಾರಣ ಒಂದು ವರ್ಷಕ್ಕೆ ಬೇಕಾಗುವಷ್ಟು ಕಾಗದ ಸಂಗ್ರಹವನ್ನು ಮಾಡಿ ತಂದನು. ಆ ಮೇಲೆ ಸಂಪಾದಕರಿಬ್ಬರೂ ಆಫೀಸಿನಲ್ಲಿ ಒಡ್ಡೋಲಗವಾದಾಗ ಜಾಹೀರಾತು ಬರೆದು ಕಳುಹಿಸುವ ಚರ್ಚೆಗೆ ಮೊದಲಾಯಿತು.

ರಾಜಾರಾಮು ಹೇಳಿದ: "ಅದಕ್ಕೇಕಪ್ಪಾ, ಅಷ್ಟು ಆಲೋಚನೆ ? ಬರೆದು ಬಿಡು. 'ಯತಿಪತಿ' ಕನ್ನಡದಲ್ಲಿರುವ ಒಂದೇ ಒಂದು ಮೇಲ್ತರಗತಿಯ ಬಿಸಿ ಹೊಸ ಮಾಸಪತ್ರಿಕೆ. ಕಪಿಗಳು ಕಾಗೆಗಳಂತೆ ಕವಿತೆಗಳನ್ನು ಹಾಡುವರು. ಹೊಸ ಹೊಸ ಕತ್ತೆಗಾರರ ಲತ್ತೆಗಳು ಕಾಣಿಸಿಕೊಳ್ಳುವವು. ಹೂಂ, ಹಾಗೆಯೇ ಮುಂದುವರಿಯಲಿ."

"ಛೇ! ಛೇ! ಛೇ! ಏನು, ತಮಾಷೆಯೇ ? ಓದಿದವರು ಪಾದರಕ್ಷೆ ಕೈಗೆ ತೆಗೆದುಕೊಂಡಾರು !"

"ಹಾಗಾದರೆ ಇನ್ನು ಚರ್ಚೆಯಿಲ್ಲ. ನಿನಗೆ ಹೇಗೆ ತೋರುತ್ತೋ ಹಾಗೆ ಬರೆಯಲು ಸಂಪೂರ್ಣ ಅಧಿಕಾರ ಕೊಟ್ಟಿದ್ದೇನೆ."

"ಹೊಸ ಕವಿತೆಗಳು ಎಂದು ಬರೆಯಲೇ, ನವಕವಿತೆಗಳು ಎಂದು ಬರೆಯಲೇ ?"

"ನವ ಎಂದರೆ ಏನದು ! ಯಾವ ಭಾಷೆಯ ಶಬ್ದ ? ಕರ್ನಾಟಕವೋ, ಸಂಸ್ಕೃತವೋ ?"

"ಗೊತ್ತಿಲ್ಲ; ಪಂಡಿತರನ್ನು ಕೇಳಬೇಕಾಯಿತು."

"ಕನ್ನಡ, ಸಂಸ್ಕೃತ, ಎರಡೂ ಅಲ್ಲದಿದ್ದರೆ ಚೀಣಿಯೇ ಇರಬೇಕು. ಹೇಗೂ ಇರಲಿ. ಹೊಸ ಎಂಬ ಶಬ್ದಕ್ಕೆ ಡಿಕ್ಷನರಿಯಲ್ಲಿ ಅರ್ಥವಿಲ್ಲ. ಆದರೆ, 'ನವ' ಎಂಬ ಶಬ್ದಕ್ಕೆ ಹೊಸ ಎಂಬ ಅರ್ಥವಿದೆ. ಎಂದಮೇಲೆ, ನವ ಎಂಬುದು ಕಷ್ಟ ಶಬ್ದವೆಂದ ಹಾಗಾಯಿತು. ಕಷ್ಟ ಶಬ್ದವನ್ನು ಓದಿದೊಡನೆ ನಮ್ಮ ಜನರಿಗೆ ತಲೆ ಬಿಸಿಯಾಗುತ್ತದೆ. ಆದ್ದರಿಂದ ಹೊಸ ಎಂದೇ ಇರಲಿ."

"ಸರಿ; ಇನ್ನು ಹೊಸಬರಿಗೆ ಬಹಳ ಪ್ರೋತ್ಸಾಹವೆಂದು ಬರೆಯಬೇಕೋ, ಬೇಡವೋ ?"

"ಅಯ್ಯಯ್ಯೋ ! ಹಾಗೆ ಬರೆಯದೆ ಇದ್ದರೆ ನಮ್ಮ ಫಾಯ್ಲ್ ತುಂಬೀತೇ ?"

"ಹೂಂ; ಆಯಿತು. ಇನ್ನು ಪ್ರಧಾನ ಸಂಪಾದಕನು ನೀನು. ಉಪ ಸಂಪಾದಕನು ನಾನು ಎಂದು ಪ್ರಸಿದ್ಧಿಸುಪ್ಪದಲ್ಲವೇ ?"

"ಥತ್ ! ಥತ್! ಥತ್! ಹಾಗಲ್ಲ, ಸಂಪಾದಕನು ನೀನು, ಪ್ರಕಾಶ ಕನು ನಾನು."

"ಹಾಗಾದರೆ ಹಾಗೆ! ಪತ್ರಿಕೆಗೆ ಬೆಲೆ ಎಷ್ಟಿಡುವುದು ?"

"ಬೆಲೆಯೇ ? ಒಂದು ಬಿಲ್ಲೆ ಇಡೋಣ !"

"ಪತ್ರಿಕೆಯು ಖರ್ಚಾದರೂ ಹುಟ್ಟೀತೋ ?" ಎಂದು ಸಂಶಯ ನರ ಸಿಂಹನಿಗೆ.

"ಹಾಗಾದರೆ ನಾ ಕಾಣೆ" ಎಂದನು ರಾಜಾರಾಮನು.

"ಸರಿ. ಆದದ್ದಾಗಲಿ; ನಾಲ್ಕಾಣೆಯೇ ಇಟ್ಟುಬಿಡೋಣ." ಎಂದು ಹೇಳಿದನು ನರಸಿಂಹ.

"ಆಯಿತಷ್ಟೆ! ಇನ್ನಾದರೂ ಚರ್ಚೆ ಮುಗಿಯಿತಷ್ಟೆ!"

"ತಡೆ; ತಡೆ; ಜಾಹೀರಾತು ದರ ನಿರ್ಣಯ ಇನ್ನೂ ಆಗಿಲ್ಲ!"

"ಎಷ್ಟಾದರೂ ಇಡಯ್ಯ ದರ! ಏನು ಉಪದ್ರ ನಿನ್ನದು ? ಆ ಜಾಹೀ ರಾತನ್ನೇ ಯಾರು ಹಾಕ್ಸೈಸಿಕೊಂಡಿದ್ದಾರೆ. ಜಾಹೀರಾತು ಒಂದೂ ಬರದಿ ದ್ದರೂ ನಾನು ಪತ್ರಿಕೆಯನ್ನು ಹೊರಡಿಸುವವನೇ !"

"ನೀನೊಂದು ಎಂಥಃ ಜನವಪ್ಪ !" ಎಂದು ನರಸಿಂಹನು ದರವನ್ನು ತಾನೇ ನಿರ್ಣಯಿಸಿ, ಆ ಸಾಯಂಕಾಲದೊಳಗಾಗಿ ಕನ್ನಡ ನಾಡಿನ ಹಲವು ಪತ್ರಿಕೆಗಳಿಗೆ ಜಾಹೀರಾತು ಕಳಿಸಿದನು.

ಆಫೀಸಿನಿಂದ ಮನೆಗೆ ಹೋಗುವಾಗ ರಾಜಾರಾಮನು, "ಹಾಂ ! ನರಸಿಂಹ ! ನಾನು ನಾಲ್ಕು ಕತೆಗಳನ್ನೂ, ಕವಿತೆಗಳನ್ನು ನಾಳೆಯೇ ಬರೆದು ಕೊಡುತ್ತೇನೆ. ಅದನ್ನು ಈ ಮೊದಲ ಸಂಚಿಕೆಯಲ್ಲಿಯೇ ಹಾಕಲು ಮರೆಯ ಬೇಡ !" ಎಂದು ಎಚ್ಚರಿಸಿದನು.

ನರಸಿಂಹನು, "ಹೂಂ !" ಎಂದು ಅದರೊಂದಿಗೆ ತನ್ನ ನಾಲ್ಕು ಕತೆ

ಕವಿತೆಗಳನ್ನೂ ಸೇರಿಸುವ ಆಲೋಚನೆ ಮಾಡಿದನು.

ಪತ್ರಿಕೆಯ ಪ್ರಚಾರವು ತಕ್ಕಷ್ಟಾಯಿತು. ಹೊಸಪತ್ರಿಕೆಯೆಂದು ಎಲ್ಲರ ದೃಷ್ಟಿಗಳೂ ಆ ಕಡೆಗೆ ತಿರುಗಿ ಕರ್ನಾಟಕದ ಅನೇಕ ಏಜಂಟರಿಂದ ಮುಂಗಡ ಹಣದೊಂದಿಗೆ ಕೇಳಿಕೆ ಬಂದುಬಿಟ್ಟಿತು. ಚಂದಾಹಣ ರಾಶಿರಾಶಿಯಾಗಿ ಸುರಿಯತೊಡಗಿತು. ನರಸಿಂಹನಿಗೆ ಒಮ್ಮೆಲೇ ಒಂದು ಸಾವಿರಪ್ರತಿಗಳನ್ನು ಮುದ್ರಿಸುವಷ್ಟು ಧೈರ್ಯ ಬಂದಿತು. ಆದರೆ, ಜಾಹೀರಾತನ್ನು ನೋಡಿದ ತತ್‌ಕ್ಷಣವೇ ಕರ್ನಾಟಕದ ಹಿರಿಯ, ಕಿರಿಯ, ಸುಪ್ರಸಿದ್ಧ ಸಾಹಿತಿಗಳೆಲ್ಲರೂ ತಮ್ಮ ಅಮೂಲ್ಯ ಲೇಖನಗಳನ್ನು ರಜಿಸ್ಟರ್ಡ್‌ಮಾಡಿ ಕಳಿಸುತ್ತಾರೆಂದು ನೆರೆನಂಬಿದ್ದ ನರಸಿಂಹನಿಗೆ ಪತ್ರಿಕೆ ಪ್ರಕಟವಾಗಲು ಇನ್ನು ಒಂದೇ ವಾರವಿದೆ ಎನ್ನುವಾಗಲೂ ಒಂದಾದರೂ ಲೇಖನ ಬರದಿದ್ದುದನ್ನು ನೋಡಿ ದಿಗಿಲು ಭುಗಿಲೆಂದಿತು. ಹೊಸಬರ ಕತೆ, ಕವಿತೆಗಳನ್ನು ಹೊತ್ತುಕೊಂಡ ಕಾಗದಗಳೇನೋ ದಿನಂಪ್ರತಿಯೂ ಖಂಡಿಗಟ್ಲೆಯಾಗಿ ಬರುತ್ತಿದ್ದರೂ, ಅವುಗಳನ್ನು ಹಾಕಿದರೆ ಪತ್ರಿಕೆ ಮಾರಾಟವಾದೀತೇ ? ಎಂದು ಅಂಜಿಕೆಯಾಯಿತು ನರಸಿಂಹನಿಗೆ. ಅವನು ರಾಜಾರಾಮನ ಬಳಿಗೇ ಬಂದು, " ಏನು ಮಾಡೋಣಯ್ಯ ? " ಎಂದನು.

" ಅಯ್ಯಯ್ಯಯ್ಯ ! ನನಗೊಂದೂ ಗೊತ್ತಿಲ್ಲ ! ನನಗೆ ' ನೀನಿಲ್ಲದಾರುಗತಿ. ಶ್ರೀ ಲಕ್ಷ್ಮೀಪತಿ' !" ಎಂದು ಪುರಂದರ ದಾಸನಂತೆ, ಮೊನ್ನೆ ತಾನೇ ಲಕ್ಷ್ಮಿಯನ್ನು ಮದುವೆಯಾದ ನರಸಿಂಹನ ಮುಂದೆ ರಾಜಾರಾಮನು ಹಾಡಿದನು.

ನರಸಿಂಹನು ಒಟ್ಟಾರೆ ಸಂಕಟದಲ್ಲಿ ಸಿಕ್ಕಿಬಿದ್ದನು. ಇನ್ನು ಲೇಖನಗಳನ್ನು ಯಾಚಿಸದೆ ಉಪಾಯವಿರಲಿಲ್ಲ. ಆದರೆ, ಯಾಚಿಸಿದರೂ ಯಾರು ಬರೆದು ಕೊಡುತ್ತಾರೆಂದು ಬೇಡವೇ ? ಮಂಗಳೂರಲ್ಲಿ ನಾಲ್ಕು ಅಕ್ಷರ ಗೀಚಲು ಬಲ್ಲವರೆಲ್ಲರೂ ತಾವು ತಾವೇ ಒಂದು ಪತ್ರಿಕೆಯನ್ನು ಹೊರಡಿಸುತ್ತಿದ್ದರು. ತಮ್ಮ ಪತ್ರಿಕೆಗಳಿಗೆ ಲೇಖನಗಳನ್ನು ಬರೆವುದೇ ಅವರಿಗೆ ಕಷ್ಟವಾಗಿತ್ತು. ಅಂಥವರೊಬ್ಬರ ಬಳಿಸಾರಿ ನರಸಿಂಹನು, "ನಾವೊಂದು ಪತ್ರಿಕೆಯನ್ನು ಹೊರಡಿಸಲು ಸಂಕಲ್ಪಿಸಿದ್ದೇವೆ. ನಿಮ್ಮದೊಂದು ಲೇಖನ........." ಎಂದು ಪೂರ್ಣಗೊಳಿಸುವುದಕ್ಕೆ ಮುಂಚಿತವಾಗಿಯೇ ಅವರು, " ನಿನಗೆ ಬೇರೆ ಜಂಬರವಿಲ್ಲವೇನಯ್ಯಾ ! ಪತ್ರಿಕೆಯಂತೆ, ಪತ್ರಿಕೆ ! ನನ್ನಿಂದ ಸಾಧ್ಯ

ವಿಲ್ಲ ಲೇಖನ ಬರೆಯುವದು." ಎಂದು ಬಿಟ್ಟರು. ಇನ್ನೊಬ್ಬರು, "ನನಗೆ ಪುರಸೊತ್ತಿಲ್ಲವಯ್ಯಾ !" ಎಂದು ಮಾತನಾಡಲೂ ಪುರುಸೊತ್ತಿಲ್ಲದವ ರಂತೆ, ನಿಲ್ಲದೆ, ಸೈಕಲ ಮೇಲೆಯೇ ಓಡಿವರು. ಒಂದು ವೇಳೆ ಪುರುಸೊತ್ತಿದ್ದರೂ, ಅವರು ಒಂದು ದೊಡ್ಡ ಗ್ರಂಥವನ್ನೇ ಬರೆದು ಪ್ರಕಟಿಸಿ ಕೀರ್ತಿ ಸಂಪಾದಿಸುವುದರ ಜೊತೆಗೆ ವಿತ್ತವನ್ನೂ ಸಂಪಾದಿಸುವವರಲ್ಲದೆ ಧರ್ಮಕ್ಕೆ ಲೇಖನಗಳನ್ನು ಬರೆದುಕೊಟ್ಟು ಏಕೆ ತಮ್ಮ ಸಮಯವನ್ನು ಹಾಳುಮಾಡಿಯಾರು ? ನರಸಿಂಹನಿಗೆ ' ಈ ಪತ್ರಿಕೆ ಮಣ್ಣು ತಿಂದೇ ಹೋಗಲಿ ' ಎನ್ನುವಷ್ಟರ ಮಟ್ಟಿಗೆ ನಿರಾಶೆಯುಂಟಾಗದಿರಲಿಲ್ಲ.

ಮುಂದೇನು ? ಕನ್ನಡ ನಾಡಿನ ಮುಖ್ಯ ಪಟ್ಟಣಗಳಾದ ಬೆಂಗಳೂರಿಗೋ, ಮೈಸೂರಿಗೋ, ಧಾರವಾಡಕ್ಕೋ, ಹುಬ್ಬಳ್ಳಿಗೋ ಹೋಗಿ ಶ್ರೇಷ್ಠ ಸಾಹಿತಿಗಳಿಗೆ ದಂಡವತ್ ಪ್ರಣಾಮ ಮಾಡಿ, ಸಾಷ್ಟಾಂಗ ನಮಸ್ಕರಿಸಿ ಒಂದು ಹತ್ತಿಪ್ಪತ್ತು ಲೇಖನಗಳನ್ನು ಸಂಗ್ರಹಿಸಿಕೊಂಡು ಬಂದುದಾಯಿತು. ಇವುಗಳ ಜೊತೆಗೇ ಸಂಪಾದಕರ, ಪ್ರಕಾಶಕರ, ಹಲವು ಕೃತಿಗಳು, ಅವರ ಗೆಳೆಯರ ಕೃತಿಗಳು, ಹೊಸಬರಲ್ಲಿ ಕೆಲವು ಅದೃಷ್ಟಶಾಲಿಗಳ ಕೃತಿಗಳು,– ಇವುಗಳ ನೆರವಿನಿಂದ ಪತ್ರಿಕೆ ಕುಂಟುತ್ತಾ ಮುಂದೆ ಸಾಗಿತು. ಮುಂದೆ ಕೊಂಚ ಸಮಯದಲ್ಲಿಯೇ, ಕಾಸೂ ಖರ್ಚಿಲ್ಲದೆ ಒಂದು ಪುಸ್ತಕ ಭಾಂಡಾರವನ್ನು ತೆರೆಯಬಹುದೆಂಬ ಆಲೋಚನೆಯಿಂದ ರಾಜಾರಾಮನು ತನ್ನ ಪತ್ರಿಕೆಯಲ್ಲಿ ಒಂದು ವಿಮರ್ಶಾಭಾಗವನ್ನು ತೆರೆದನು. ವಿಮರ್ಶೆಗಾಗಿ ಬಂದ ಪುಸ್ತಕಗಳಲ್ಲಿ ತನ್ನ ಗೆಳೆಯರ, ತನಗೆ ಬೇಕಾದವರ ಪುಸ್ತಕಗಳನ್ನು ಹೊಗಳುವುದು, ಬೇಡಾದವರ ಪುಸ್ತಕಗಳನ್ನು ತೆಗಳುವುದು, ಸಾಹಿತ್ಯದಲ್ಲಿರುವ ಹಲವರ ದೃಷ್ಟಿಗಳಲ್ಲಿ ತಮ್ಮ ದೃಷ್ಟಿಯೇ ಮೇಲೆಂದು ವಾದಿಸುವುದು-ಮೊದಲಾಯಿತು. ಇದರೊಡನೆ ಕತೆಗಾಗಿಯೇ ಮೀಸಲಾಗಿಟ್ಟ 'ಯತಿಪತಿ' ರಾಜಕೀಯ ರಂಗಕ್ಕೂ ಧುಮುಕಿ ಒಂದು ಪಾರ್ಟಿಗೆ ಒತ್ತಾಸೆ ನೀಡತೊಡಗಿತು.

ಅಂತೂ ಮುಗ್ಗರಿಸದೆ, ಎಡವದೆ, 'ಯತಿಪತಿ' ಸಂಪಾದಕ-ಪ್ರಕಾಶಕರ ಅವಿುತಶ್ರಮದಿಂದ ಏಳೆಂಟು ಹೆಜ್ಜೆಗಳನ್ನಿಟ್ಟಿತು.

× × × ×

ಹೀರೆಯ ಆರ್ಥಿಕ ಸ್ಥಿತಿ ದಿನೇ ದಿನೇ ಕುಗ್ಗುತ್ತಾ ಬರುತ್ತಿತ್ತು. ಅವಳ ಮೈಯೊಳಗಿನ ರೋಗ ಹಿಗ್ಗಿದಂತೆ ಅವಳಲ್ಲಿಗೆ ಬರುವ ಗಿರಾಕಿಗಳ ಸಂಖ್ಯೆಯೂ ಮೆಲ್ಲಮೆಲ್ಲನೆ ಕುಗ್ಗತೊಡಗಿತು. ಒಮ್ಮೆ ಗಂಡಸಾಗಿದ್ದರೂ, ಈಗ ಅವಳನ್ನು

ಹಲವರ ಪಾಲು ಮಾಡಿ, ತನ್ನ ವ್ಯಕ್ತಿತ್ವವನ್ನೇ ಕಳೆದುಕೊಂಡ ರಾಮಗೋಪಾಲನೂ ಅವಳಿಗೆ ಇಂಥ: ಸಂದರ್ಭಗಳಲ್ಲೆಲ್ಲಾ ದೊಡ್ಡ ಸಲಹೆಗಾರ. ಅವಳಿಗೆ ಯಾರ ಮೇಲೆ ಕಣ್ಣಿದೆಯೋ, ಅಂಥವರ ಮೇಲೆ ಬಲೆಬೀಸಿ, ಉಪಾಯವಾಗಿ ಅವರನ್ನು ಬಳಿಗೆ ಸೆಳೆದುಕೊಂಡು ಕೊಲ್ಲುವುದರಲ್ಲಿ ಅವಳಿಗೆ ಅವನದೂ ಹೆಚ್ಚಿನ ಸಹಾಯವಿತ್ತು.

ಹೀರೆಗೆ ಮೊಲಿನಿಂದಲೂ ರಾಜಾರಾಮನ ಮೇಲೆ ಕಣ್ಣಿತ್ತು. ಅವನು ಅರ್ಧ ಲಕ್ಷಾಧೀಶನೆಂದು ತಿಳಿದ ಮೇಲೆ ಅದು ಇನ್ನಷ್ಟು ಪ್ರಬಲವಾಯಿತು. ಹೇಗಾದರೂ ಮಾಡಿ ಅವನನ್ನು ತನ್ನ ಬಲೆಯೊಳಗೆ ಕೆಡೆಯಲೇಬೇಕೆಂದು ಸಂಕಲ್ಪಿಸಿದಳು. ಇದಕ್ಕೆ ರಾಮಗೋಪಾಲನ ಸಹಾಯವೂ ಸಾಕಷ್ಟು ದೊರೆಯಿತು.

ಮೊದಮೊದಲು ರಾಜಾರಾಮನು ಮನೆಯಿಂದ ಆಫೀಸಿಗೆ ಹೋಗುವಾಗಲೂ, ಆಫೀಸಿನಿಂದ ಮನೆಗೆ ಮರಳುವಾಗಲೂ ಬೀದಿ ಬಾಗಿಲ ಸಮೀಪದಲ್ಲಿ ನಿಂತುಕೊಂಡು ದೇವರು ತನಗೆಕೊಟ್ಟ ಬುದ್ಧಿವಂತಿಕೆಯನ್ನೆಲ್ಲಾ ಉಪಯೋಗಿಸಿ ನೋಡಿದಳು. ಆದರೆ, ಏನೂ ಪ್ರಯೋಜನವಾಗಲಿಲ್ಲ. ಹೀರೆ ಆಲೋಚಿಸಿದಳು. ರಾಮಗೋಪಾಲನು ಸಲಹೆಯನ್ನೀಯಲು ಬಂದನು.

"ಇದೆಲ್ಲಾ ಪ್ರಯೋಜನವಿಲ್ಲ; ನೀನೇ ಹೇಗಾದರೂ ಒಮ್ಮೆ ಅವನೊಡನೆ ಮಾತನಾಡಿ ಅವನನ್ನು ವಶ ಮಾಡಿಕೊಳ್ಳಬೇಕು."

"ಅದು ಹೇಗೆ ಸಾಧ್ಯ? ಅವನು ನನ್ನೊಡನೆ ಮಾತನಾಡುವನೆ?"

"ಅದಕ್ಕೆ ಉಪಾಯ ಮಾಡಬೇಕು! ಅವನು ಪತ್ರಿಕಾ ಸಂಪಾದಕನಲ್ಲವೇ? ಒಂದು ಕತೆ ಬರೆದು ಕಳಿಸು. ನಾಲ್ಕು ದಿನದ ಮೇಲೆ ನನ್ನ ಕತೆ ಚೆನ್ನಾಗಿದೆಯೇ? ಹಾಕುತ್ತೀರಾ? ಎಂದು ಕೇಳಿಕೊಂಡೇ ಹೋದರಾಯಿತು." ಎಂದನು.

"ಇದು ಚಲೋ ಉಪಾಯ!"

ಅದೇ ರಾತ್ರಿಯೇ ಒಂದು ಕತೆ ಬರೆದು ಸಿದ್ಧವಾಯಿತು. ಮರುದಿನ ಬೆಳಿಗ್ಗೆ ಐದು ಗಂಟೆಗೇ ಮೋರೆಗೆ ಮಸಿಹಚ್ಚಿಕೊಂಡು ಅದು 'ಯತಿಪತಿ ಕಾರ್ಯಾಲಯ' ದ ಹಾದಿಯನ್ನು ಹಿಡಿದಿತ್ತು.

"ದಯಮಾಡಿ ನನಗೆ ಸಂಪಾದಕನ ವೃತ್ತಿಯಿಂದ ನಿವೃತ್ತಿ ಕೊಡಿಸುತ್ತೀಯಾ?" ಎಂದು ನರಸಿಂಹನು ಕೇಳಿದಾಗ ರಾಜಾರಾಮನು ಕಂಗೆಟ್ಟನು.

"ಛೀ! ಛೀ! ಛೀ! ಅದೆಲ್ಲಾ ಸಾಧ್ಯವಿಲ್ಲ ಮಹಾರಾಯ! ನೀನು ಹೋದರೆ ನಮ್ಮ ಪತ್ರಿಕೆಯ ಗತಿಯೇನು ?"

ಆದರೆ, ನರಸಿಂಹನು ತನ್ನ ಕೋಟಿನ ಜೇಬಿನಿಂದ ಟೆಲಿಗ್ರಾಮನ್ನು ತೆಗೆದುಕೊಟ್ಟನು. ಅದರಲ್ಲಿ ಅವನ ಅಪ್ಪನ ಮರಣ ವಾರ್ತೆಯಿತ್ತು.

"ಹಾಗಾದರೆ ನೀನಿನ್ನು ಹಿಂದೆ ಬರುವುದು ಯಾವಾಗ ?"

"ಇನ್ನು ಹಿಂದೆ ಬರಲಿಕ್ಕುಂಟೇ ? ನಾನು ಹಿಂದೆ ಬಂದರೆ ಅಲ್ಲಿ ಅಡಿಕೆ, ಹೊಲಬೇಸಾಯವನ್ನು ನೋಡಿಕೊಳ್ಳುವವರು ಯಾರು? "

"ಹಾಗಾದರೆ ಪತ್ರಿಕೆಯನ್ನು ನಿಲ್ಲಿಸುವುದೆನ್ನುತ್ತೀಯಾ ?"

"ಏತಕ್ಕೆ ? ಈ ಒಂದು ವರ್ಷದ ಅನುಭವವೇನು ನಿನಗೆ ಸಾಲದೆ ? ಹಾಗೆ ಕೊನೆಗೂ ಸಾಲದಿದ್ದರೆ ಬೇರೆ ಯಾರನ್ನಾದರೂ ಹಿಡಿ. "

ಅಂತೂ ನರಸಿಂಹನು ಹೊರಟು ಹೋದನು. ರಾಜಾರಾಮನೇ ಸಂಪಾದಕ, ಪ್ರಕಾಶಕ, ಇಬ್ಬರ ಕೆಲಸವನ್ನೂ ಮಾಡಬೇಕಾಯಿತು. ಇದು ಅವನಿಗೆ ಬಹಳ ಕಷ್ಟಕರವಾಯಿತು. ಬಂದ ಲೇಖನಗಳನ್ನು ಓದುತ್ತಾ, ಓದುತ್ತಾ, ಸಂಪಾದಕನಿಗೆ ಯಾವುದನ್ನು ಹಾಕೋಣ, ಯಾವುದನ್ನು ಬಿಡೋಣ ಎಂದು ತಿಳಿಯುತ್ತಿರಲಿಲ್ಲ. ಇದುತನಕ ನರಸಿಂಹನೇ ಆ ಕೆಲಸವನ್ನು ಮಾಡಿದವನಲ್ಲದೆ ರಾಜಾರಾಮನು ಅದರಲ್ಲಿ ಕೈಹಾಕಿರಲಿಲ್ಲ. ಕೊನೆಗೆ ಬೇರೇನೂ ಬಗೆಹರಿಯದೆ ಸಂಪಾದಕನು ಯೋಗ್ಯತೆಯ ಕಡೆಗೆ ಗಮನವೀಯದೆ ಸುಪ್ರಸಿದ್ಧರ ಕೃತಿಗಳನ್ನೇ ಹಾಕತೊಡಗಿದನು; ಅಪ್ರಸಿದ್ಧರನ್ನು ಕಡೆಗಣಿಸತೊಡಗಿದನು. ಇದರೊಂದಿಗೇ ಲೇಖಕರು ಕಾರ್ಯಾಲಯಕ್ಕೇ ಬಂದು ತೊಂದರೆ ಕೊಡತೊಡಗಿದರು. "ನನ್ನದನ್ನು ಓದಿದ್ದಿರಾ? ಓದಿದ್ದೀರಾ ? ಚೆನ್ನಾಗಿದೆಯೇ " ಚೆನ್ನಾಗಿಲ್ಲವೆಂದು ಹೇಳುವುದು ಹೇಗೆ ? ಸಂಪಾದನು, "ಓದಲಿಲ್ಲ, ಓದುತ್ತೇನೆ. " ಎಂದು ಹೇಳಿ ತಪ್ಪಿಸಿಕೊಳ್ಳುತ್ತಿದ್ದನು. ಎಷ್ಟೋ ಸಮಯದ ವರೆಗೆ ಕಾದು, ಕಾದು, ಒಂದೇ ಬಗೆಯ ಉತ್ತರವನ್ನು ಕೇಳಿ, ಕೇಳಿ, ಬೇಸತ್ತು ಕೊನೆಗೆ ಅವರು; "ನನ್ನ ಲೇಖನವನ್ನು ಹಿಂದೆ ಕೊಡುತ್ತೀರಾ ?" ಎಂದು ಬೇಡಿಕೊಂಡಾಗ, "ಹೋಗಲಿ ಒಂದು ಮಲಾಮತ್ತು." ಎಂದು ಬೇಗ ಕೊಟ್ಟುಬಿಡುತ್ತಿದ್ದನು. ಹಾಗೆ ಬಂದು ಕೇಳದವರ ಕಸ-ರಸಗಳನ್ನೆಲ್ಲಾ ಫಾಯ್ಲಿ ಹೊತ್ತುಕೊಳ್ಳುತ್ತಿದ್ದಿತು.

ಎರಡು, ಮೂರು ತಿಂಗಳ ಮೇಲೆ ಒಂದು ದಿನ ಸೇವಕನು ಬಂದು, "ಯಾರೋ ಒಬ್ಬ ಹೆಂಗಸು ಬಂದಿದ್ದಾಳೆ" ಎಂದನು.

"ಬರಲಿ," ಎಂದು ಅಪ್ಪಣೆಯಾಯಿತು.

ಬಂದವಳನ್ನು ನೋಡಿ ರಾಜಾರಾಮನಿಗೆ ಅತ್ಯಾಶ್ಚರ್ಯವಾಯಿತು. -ಹೀರಾ? ಸೂಳೆಯಾದರೂ, ಬಂದವಳು ಹೆಂಗಸಲ್ಲವೇ! ಉಪಚಾರ ಮಾಡದಿರುವುದು ಹೇಗೆ? ಎಂದು "ಬನ್ನಿಯಮ್ಮ! ಕುಳಿತುಕೊಳ್ಳಿ. ಖುರ್ಚಿಯಿದೆ" ಎಂದು ಖುರ್ಚಿಯನ್ನು ತೋರಿಸಿದನು-

ಹೀರೆ ಕುಳಿತುಕೊಳ್ಳುತ್ತಾ, "ನಾನೊಂದು ಕತೆಯನ್ನು ಕಳಿಸಿದ್ದೆ" ಎಂದಳು

"ನೀವೇ? ಕತೆಯೇ?"

"ಉಂ! ಹೇಗೆ? ಓದಿದ್ದೀರಾ! ಚೆನ್ನಾಗಿದೆಯೇ? ಹಾಕುತ್ತೀರಾ?"

"ಏನೋ, ಕತೆ ಬಂದದ್ದು ನನಗೆ ನೆನಪಿಲ್ಲ. ಫಾಯ್ಲಿನಲ್ಲಿ ನೋಡಿ ನಾಳೆ ಹೇಳುತ್ತೇನೆ." ಎಂದು ಹಿಂದೆ ಕಳುಹಿಸಿದನು.

ತನಗೆ ತಿಂಡಿ-ತೀರ್ಥ ತರಿಸಿಕೊಟ್ಟು ಸನ್ಮಾನ ಮಾಡುತ್ತಾನೆಂದು ಕೊಂಡಿದ್ದ ಹೀರೆಗೆ ಸ್ವಲ್ಪ ನಿರಾಶೆಯುಂಟಾದರೂ, ಅವಳು ಸಂಪೂರ್ಣವಾಗಿ ಎದೆಗುಂದಲಿಲ್ಲ. ನಾಳೆ ಒಂದು ಕೈ ನೋಡಿ ಬಿಡೋಣ ಎಂದು ಹಿಂದೆ ಬಂದಳು.

ಹೀರೆ ಕೆಳಗಿಳಿದ ಕೂಡಲೇ ರಾಜಾರಾಮನು ಫಾಯ್ಲಿನಲ್ಲಿ ಹುಡುಕಿ ಕತೆಯನ್ನೀಚೆಗೆ ತೆಗೆದನು. ಸೂಳೆ, ಸೂಳೆಯ ವಿಷಯವಾಗಿಯೇ ಕತೆಯನ್ನು ಬರೆದಿದ್ದಳು. ರಾಜಾರಾಮನಿಗೆ ಕಥಾ ವಿಷಯ, ಶೈಲಿಗಳು ಏನೂ ರುಚಿಸಲಿಲ್ಲ. ಅದೇ ರಾತ್ರಿಯೊಳಗಾಗಿ ಒಂದು ಕಾಗದದಲ್ಲಿ 'ನಿಮ್ಮ ಕತೆಯನ್ನು ಪ್ರಕಟಿಸುವುದು ಸಾಧ್ಯವಿಲ್ಲ. ಕ್ಷಮಿಸಬೇಕು.' ಎಂದು ಬರೆದು ಕಾಗದವನ್ನೂ, ಕತೆಯನ್ನೂ ಸೇವಕನ ಮುಖಾಂತರ ಮರಳಿ ಕಳುಹಿಸಿದನು.

ಹೀರೆಗೆ ತನ್ನ ಕತೆ ಹಿಂದಕ್ಕೆ ಬಂದುದನ್ನು ನೋಡಿ ಆಕಾಶ-ಪಾತಾಳದಷ್ಟು ನಿರಾಶೆಯುಂಟಾಯಿತು. ಆದರೆ ರಾಮಗೋಪಾಲ ಸುಮ್ಮನಿರದೆ, "ಅಷ್ಟೊಂದಕ್ಕೆ ಅಷ್ಟೇಕೆ ನಿರಾಶೆ, ಹೀರೆ? ಹೇಗಾದರೂ ಮಾಡಿ ರಾಜಾರಾಮನು ನಿನ್ನ ಕಾಲ ಬಳಿಗೆ ಬರುವಂತೆ ನಾನು ಮಾಡಿದರೆ ಸರಿಯಷ್ಟೇ!" ಎಂದನು.

ಹೀರೆ ಆ ಸುಸಂಧಿಯನ್ನು ಹಾರೈಸತೊಡಗಿದಳು.

× × × ×

"ಏನು, ಸಾಯುವವರೆಗೂ ಈ ಹಾಳುಕೊಂಪೆಯಲ್ಲೇ ಕೊಳೆಯ ಬೇಕೆಂದು ನಿಷ್ಕರ್ಷಿಸಿದ್ದೀರಾ?"

"ಮತ್ತೆ! ಹಳ್ಳಿಗೇ ಹಿಂದೆ ಹೋಗೋಣವೇ?"

"ಏಕೆ? ಬೇರೆ ಕೆಲಸವಿಲ್ಲವೆಂದೇ?"

"ಮತ್ತೇನು, ಲಲಿತೆ? ನಿನಗೆ ಹಳ್ಳಿ ಹಾಳಾಯ್ತು; ದಿಳ್ಳಿ ಪಟ್ಟಣ ವಾಯ್ತು. ಹಾಗಾದರೆ, ಇನ್ನೇನು ತ್ರಿಶಂಕು ಮಾರ್ಗವನ್ನು ಹಿಡಿಯ ಬೇಕಂತೀಯಾ?"

"ಹಾಗಲ್ಲ; ಸ್ವಂತಕೆ ಒಂದು ಮನೆಯನ್ನು ಕೊಳ್ಳಬಾರದೇ?"

"ಹಾಂ! ಇದು ಒಳ್ಳೆ ಸಲಹೆ. ಬಾಡಿಗೆಗೆ ಒಂದು ಮನೆ ಸಿಗಬೇಕಾದ ರೆನೇ ನಾನು ಅರ್ಧ ಸತ್ತೆ. ಇನ್ನು ಸ್ವಂತ ಮನೆ ಹುಡುಕಿ ಪೂರ್ಣ ಸಾಯಬೇಕೇ?"

"ನೀವೊಬ್ಬರು ಏನಾದರೂ ಹೇಳುವವರು! ಹಾಗಾದರೆ ಊರಲ್ಲಿ ಎಲ್ಲರೂ ಹೀಗೆ ಬಾಡಿಗೆಯ ಮನೆಯಲ್ಲಿಯೇ ಇರುವರೇ! ಮತ್ತೆ, ನಿಮಗೆ ಅರ್ಧ ಲಕ್ಷವೇಕೆ?"

"ಆಗಲಿ, ಲಲಿತೆ ನೋಡೋಣ; ಬೇಸರ ಬೇಡ!"

ಅಂತೂ, ಕೊನೆಗೆ ರಾಜಾರಾಮನು ಸ್ವಂತಕ್ಕೆ ಒಂದು ಮನೆಯನ್ನು ಕೊಳ್ಳಲೇಬೇಕಾಯಿತು. ಒಂದು ದಿನ ಅವನು ಪತ್ರಿಕಾ ಕಾರ್ಯಾಲಯದಲ್ಲಿ ರುವಾಗಲೇ ವಾಮನರಾಯರು ಅವನನ್ನು ಹುಡುಕಿಕೊಂಡು ಬಂದರು.

"ಏನು, ರಾಜಾರಾಮರಾಯರೇ! ನನ್ನ ಗುರುತಿದೆಯೇ?"

"ಅಯ್ಯೊ! ಹಾಗೆಲ್ಲಾ ಗುರುತು ಮರೆತುಹೋದೀತೇ?" ಎಂದು ರಾಜಾರಾಮನು ಬೇಗನೇ ಖುರ್ಚಿಯನ್ನು ಮುಂದೆ ಸರಿಸಿದನು. ಸೇವಕನು ಕಾಫಿ ತಿಂಡಿ ತರಲು ಆ ಕೂಡಲೇ ತಾಜಮಹಾಲಿಗೆ ಹೋಗಿದ್ದನು.

ರಾಜಾರಾಮನ ಮಾತಿಗೆ ವಾಮನರಾಯರೆಂದರು · "ಹೇಗೆ ಹೇಳು ವುದು? ಈಗಿನ ಕಾಲವಲ್ಲವೇ? ನಂಬಲಿಕ್ಕೆ ಬರುತ್ತದೆಯೇ?"

"ಹೇಗೆ? ಸೌಖ್ಯವೇ!"

"ನಾವೆಲ್ಲಾ ಸೌಖ್ಯ! ನೀವು?........ಓಹೋ! ಇದೇನು, ಪೇಪರ್ ಸುರು ಮಾಡಿದ್ದೀರಾ?"

"ಏನು, ಒಳ್ಳೆಯದಲ್ಲವೇ?"

"ಒಳ್ಳೆಯದೆಲ್ಲಾ ಹೌದು; ಆದರೆ, ಬಹಳ ಕಷ್ಟಕರವಾದ ಕೆಲಸ!"

"ಹಾಗಾದರೆ, ನಿಮಗೆ ಗೊತ್ತಿದೆ ಎಂದಾಯಿತು."

"ಗೊತ್ತಿಲ್ಲದೆ? ನಾನೇನು ಚಿಲ್ಲರೆಯೇ? ನನಗೆ ಎಲ್ಲಾ ಅನುಭವವೂ ಇದೆ. ನಾನು ಬೀಡಿಯನ್ನೂ ಕಟ್ಟಿದ್ದೇನೆ, ಮುಂಡಾಸೂ ಕಟ್ಟಿದ್ದೇನೆ. ನಾನು ಒಂದು ಪೇಪರ್ ಆಫೀಸು, ಬುಕ್‌ಡಿಪ್ಪೋಟ್ ಎಲ್ಲಾ ತೆರೆದಿದ್ದೆ. ಆದರೆ....?"

"ಏನಾಯಿತು?"

"ಆಗುವುದೇನು? ಇದ್ದ ಹಣ ಕಳೆದುಕೊಂಡದ್ದಲ್ಲದೆ ದೊಡ್ಡ ಸಾಲವೂ ಆಯಿತು."

"ಹಾಗೋ? ಆದರೆ, ನಾನಿದನ್ನು ಒಂದು ಉದ್ಯೋಗವೆಂದು ತಿಳಿದಿಲ್ಲ. ಇದು ನನಗೆ ಬರೀ ಒಂದು 'ಷೋಕಿ'!"

"ಹಾಗಿದೆಯೋ? ಒಳ್ಳೆಯದು; ಇರಲಿ. ಹರಟೆಯಲ್ಲಿ ನಾನು ಬಂದ ಉದ್ದೇಶವನ್ನೇ ಮರೆತೆ. ನನಗೆ ಆ ಮನೆಯನ್ನು ಬಿಟ್ಟುಕೊಡಬೇಕು."

"ಏಕೆ? ಸಂಗತಿ ಏನು?"

"ಅಂದರೆ ಹೀಗೆ! ನನ್ನ ತಮ್ಮನೊಬ್ಬನಿದ್ದ ಇದುತನಕ ಉಡುಪಿಯಲ್ಲಿ 'ಕ್ಲಾರ್ಕ್' ಆಗಿ; ಈಗ ಅವನಿಗೆ 'ಪೆನ್ಸನಾ'ಯಿತು. ಅವನಿಗೀಗ ಮಂಗಳೂರಿಗೆ ಬರುವ ಆಸೆ. ಅವನ ಮಕ್ಕಳುಮರಿ ತುಂಬ. ನನ್ನ ಮನೆಯಲ್ಲಿ ಜಾಗ ಸಾಕಾಗಲಿಕ್ಕಿಲ್ಲ. ಅವನನ್ನು ಜೋಡುಮಟದಲ್ಲಿ ಇಳಿಸಿ ಬಿಡುತ್ತೇನೆ."

"ಒಟ್ಟಾರೆ, ನಾನು 'ಪಚ್ಚ.' ಈಗ ನಾನೇನು ಮಾಡುವುದು?"

"ನಿಮಗೇನು ಕುಬೇರರಿಗೆ! ಸ್ವಂತಕ್ಕೆ ಒಂದು ಮನೆಯನ್ನು ಕೊಳ್ಳಲಾಗುವದಿಲ್ಲವೇ? ನೀವು ಅರ್ಧ ಲಕ್ಷಾಧೀಶರಾಗಿ ಆ ಹಾಳಾದ ಮನೆಯಲ್ಲಿರುವುದೆಂದರೆ ಯಾರಾದರೂ ನೋಡಿದವರು ನಕ್ಕಾರು!"

"ಸರಿಯೇ! ಲಲಿತೆಯೂ ಹಾಗೆಯೇ ಹೇಳುತ್ತಿದ್ದಳು. ಆದರೆ, ಮನೆ ಎಲ್ಲಿ ಸಿಕ್ಕುತ್ತದೆ?"

"ಹುಡುಕಿದರೆ ಎಲ್ಲಾ ಸಿಕ್ಕುತ್ತಪ್ಪ."

"ನೀವೇ ಒಂದು ಹುಡುಕಿ ಕೊಡಿ, ನೋಡೋಣ."

“ಹಾಂ! ನೀವು ಎಲ್ಲದಕ್ಕೂ ನನ್ನ ಪ್ರಾಣ ತಿನ್ನುವವರು.”

“ಮತ್ತೇನು ಮಾಡಲಿ? ನನಗೇನು ತಿಳಿಯುವದು! ನೀವಾದರೆ ಹಲವರಿಗೆ ಪರಿಚಯಸ್ಥರು; ಅನುಭವಿಕರು. ನಿಮ್ಮ ಹತ್ತಿರ ಹೇಳಿ ಬಿಟ್ಟರೆ ಕೆಲಸ ಸುಲಭದಲ್ಲಿ, ಶೀಘ್ರದಲ್ಲಿ ಆಗುತ್ತದೆ.”

ಕಾಫಿ, ಇಡ್ಲಿ. ಸಾಂಬಾರ ಬಂದಿತು.

“ನನಗೆ ಕಾಫಿ ಕೊಡಲಿಕ್ಕೆ ಇವತ್ತು ನಿಮಗೆ ಮದುವೆಯೇನು, ರಾಜಾ ರಾಮರಾವ್!” ಎಂದರು ವಾಮನರಾಯರು ನಗುತ್ತಾ.

“ನನ್ನ ಮದುವೆಗೆ ಕೊಡಲಿಲ್ಲವಷ್ಟೆ? ಅದಕ್ಕೀಗ ಕೊಡುವುದರಲ್ಲಿ ತಪ್ಪೇನು?” ಎಂದನು ರಾಜಾರಾಮನೂ ನಗುತ್ತಾ.

ವಾಮನರಾಯರು ನಾಕಷ್ಟು ‘ಬೇಡ, ಬೇಡ’ವೆನ್ನುತ್ತಾ ಬೇಕಷ್ಟು ಇಡ್ಲಿ ಸಾಂಬಾರ ಖಾಲಿ ಮಾಡಿದರು.

ಕೊನೆಗೆ ಹೋಗುವಾಗ, ರಾಜಾರಾಮನು “ನಾನು ಹೇಳಿದ್ದು....?” ಎಂದನು.

“ಆಗಲಿ; ನೋಡೋಣ.”

೪

ಇಲ್ಲಿ ಒಂದೆಡೆಯಲ್ಲಿ ಮಹೋತ್ತುಂಗವಾದ ಕದ್ರಿಯ ಪರ್ವತಶ್ರೇಣಿ ರಾರಾಜಿಸುತ್ತಿದೆ. ಕತ್ತಲೆಯು ಮೆಲ್ಲಮೆಲ್ಲನೆ ಕಾಲ್ತೆಗೆವ ಸಮಯ; ಪ್ರಶಾಂತ ವಾತಾವರಣ. ಬೀಡುತ್ತಾ ಬಂದ ತಂಗಾಳಿ ಹಕ್ಕಿಪಕ್ಕಿಗಳ, ಪಶುಪ್ರಾಣಿಗಳ ಸುಷುಪ್ತಿಯ ತೆರೆಯನ್ನಿಕ್ಕಡಿಸಿ ಹೋಗಿದೆ. ಖಗತತಿಯ ಸುಮನೋಹರ ವಾದ ಆ ಪ್ರಭಾತಗೀತೆಯು ವಾಣಿಯ ಗಾಯನಶಾಲೆಯ ಹಲವಾರು ಗಾಯ ನೋಪಕರಣಗಳಿಂದ ಹೊರಟು, ಮೇಳಯಿಸಿ, ಏಕನಾದವಾಗಿ ಬರುವಂತೆ ಕೇಳುತ್ತಿದೆ. ಸೂರ್ಯನು ರಥವೇರುವ ಮುನ್ನ ಕೌಂಗುದೆಂಗು ಕದಳೀ ವೃಕ್ಷಗಳು ಭೇತಾಳಗಳಂತೆ ನಾಟ್ಯವಾಡುತ್ತಿವೆ. ಅವುಗಳಂತು ತಾಂಡವವೆಸಗು ತ್ತಿರುವಾಗ ಉಂಟಾಗುವ ಕೋಲಾಹಲದ ಉಬ್ಬರಾಬ್ಬರವೇನು! ಆಕಾಶ ಮಾರ್ಗದಲ್ಲಿ ಕೋಟ್ಯಾಂತರ ವರ್ಣಗಳ ಮೆರವಣಿಗೆ; ಒಯ್ಯೊಯ್ಯನೆ ಆ ಬಣ್ಣಗಳನ್ನು ಭೇದಿಸಿ, ಕಾವಳದ ಪೆರ್ದೆರೆಯನ್ನು ನೀಗಿ, ಆಗಸಗನ್ನೆಯ ಸಿರಿ ಮೊಗದಂತೆ ತೊಳಗಿ ಬೆಳಗುತ್ತಾ, ತನ್ನ ನಿಸ್ಸೀಮ ತೇಜಸ್ಸಿನಿಂದ ಸಕಲ

ದಿಕ್ತಟಗಳನ್ನೂ ಬೆಳಗಿಸುತ್ತಾ, ಚಂದನಲೇಪಿತನಾಗಿ, ಆಕಾಶವು ಹಿಡಿದು ಕೊಂಡ ಚಕ್ರಾಯುಧದಂತೆ ಬರುತ್ತಿದ್ದಾನೆ ಶಿಶುಭಾನು! ಕದ್ರಿಗಿರಿಯ ಮೇಲಿರುವ ಆ ಅಷ್ಟತಟಾಕಗಳು ಹೊಸದಾಗಿ ಗಿರಿಯು ಬೆಸನಾದ ಕೂಸು ಗಳಂತೆ, ಸೂರ್ಯನ ಪ್ರಚಂಡ ಬೆಳಕಿನಲ್ಲಿ ಶ್ವೇತೋನ್ಮಿಲಿತವಾಗಿ, ಕಿಳಕಿಳನೆ ನಗುತ್ತಿವೆ. ಅವುಗಳಾ ಚಲನಾಸ್ವಾದವು ವರುಣದೇವನು ಸೂರ್ಯನ ಸ್ವಾಗತಸಂಭ್ರಮಕ್ಕಾಗಿ ದಂಡಿಗೆಯ ಅಷ್ಟತಂತಿಗಳನ್ನು ಮೀಟುವುದರಿಂದ ಉದ್ಭವವಾಗುತ್ತಿರುವುದಲ್ಲದೆ ಬೇರೇನು? ಸನಿಯದಲ್ಲೇ ಗೋಮುಖದಿಂದ ಸುರಿಯುತ್ತಿರುವ ಆ ತೀರ್ಥವು ಎಡೆಬಿಡದೆ ಮದ್ದಳೆಯನ್ನು ಸೂಳಯಿಸುವಂತೆ ಕೇಳುತ್ತಿದೆ. ಮಸಣದಂತಾಗಿದ್ದ ಜಗತ್ತು ಉತ್ಸಾಹ, ಉಲ್ಲಾಸ, ಹೊನಪು ಗಳ ತವರೂರಾಗಿದೆ. ಜನಸಂಚಾರವಿಲ್ಲದೆ ಬತ್ತಲೆಯಾದ ಬೀದಿಗಳು, ಜನ ವಾಹನಗಳ ಸಂಚಾರದಿಂದ ತುಂಬಿ ತುಳುಕಾಡುತ್ತಿವೆ.

ಕದ್ರಿಗಿರಿಯ ಮೇಲಿನಾ ಅಷ್ಟತಟಾಕಗಳಲ್ಲಿ ಕೆಲವು ಬಾಲಕರು ಈಜಾಡು ತ್ತಿದ್ದರು. ಕೆರೆಯ ಸೋಪಾನಪಂಕ್ತಿಗಳ ಮೇಲೆ ಆಗ ತಾನೇ ಮಜ್ಜನವನ್ನು ಮುಗಿಸಿ ರಾಜಾರಾಮನೂ, ವಾಮನರಾಯರೂ ಕುಳಿತಿದ್ದಾರೆ. ಉದಯದೆಸೆ ಯನ್ನೇ ನಿರುಕಿಸುತ್ತಿದ್ದ ವಾಮನರಾಯರು ಮೆಲ್ಲನೆ ರಾಜಾರಾಮನ ಕಡೆಗೆ ತಿರುಗಿ "ನೋಡಿದಿರಾ, ರಾಜಾರಾಮರಾಯರೇ!" ಎಂದರು.

"ಹೂಂ!"

"ನೋಡಿ; ನಾನೇನು ಕವಿಯಲ್ಲ. ಆದರೂ ಇಲ್ಲಿಗೆ ಮೊದಲು ಬಂದುದೇ ಕವಿಗಿಂತಲೂ ಹೆಚ್ಚಾಗಿ ಸೌಂದರ್ಯವನ್ನು ಕಂಡು ಆನಂದಿಸಿದ್ದೇನೆ."

ರಾಜಾರಾಮನು ಮೌನವಾಗಿದ್ದನು. ವಾಮನರಾಯರು ಪುನಃ ಪೂರ್ವ ದಿಕ್ಕಿಗೆ ಮೊಗದಿರುಗಿಸಿದರು. ಮೆಲ್ಲಮೆಲ್ಲನೆ ಸೊಬಗೆಲ್ಲವೂ ಮಾಯವಾಗಿ ಸೂರ್ಯನು ಅಗ್ನಿಮುಖಿಯಾಗುತ್ತಾ ಬರುತ್ತಿದ್ದನು.

"ಹೊತ್ತಾಯಿತು; ಇನ್ನು ಹೋಗೋಣವೇನು ವಾಮನರಾಯರೇ!" ಎಂದು ಕುಳಿತಲ್ಲಿಂದ ಎದ್ದನು ರಾಜಾರಾಮ.

ಇಬ್ಬರೂ ಗುಡ್ಡವನ್ನಿಳಿದರು. ಕದಿರೆಯ ಪಾವನಜಲದಲ್ಲಿ ಮುಳುಗ ಲೆಂದದೆಷ್ಟೋ ಮಂದಿ ಗುಡ್ಡವನ್ನಾರೋಹಿಸುತ್ತಿದ್ದರು. ಕೆಳಗೆ ಗಂಭೀರವಾದ ಘಂಟಾನಾದದೊಂದಿಗೆ ಮಂಜುನಾಥನಿಗೆ ಪೂಜೆಯಾಗುತ್ತಿತ್ತು. ಅಲ್ಲಿ ಒಂದು ನಿಮಿಷ ನಿಂತು, ಎತ್ತಿನ ಆರತಿಯನ್ನು ನೋಡುತ್ತಿದ್ದು ಇಬ್ಬರೂ ಮರಳಿದರು.

ಹಿಂದಿರುಗುವಾಗ ಬಂದ ರಾಜಮಾರ್ಗವನ್ನು ಬಿಟ್ಟು, ಬಯಲುದಾರಿಯನ್ನು ಹಿಡಿದರು. ಅಲ್ಲಿಯೂ ಸುಮನೋಹರವಾದ, ವರ್ಣನೋಚಿತವಾದ ದೃಶ್ಯಸೌಂದರ್ಯವನ್ನವಲೋಕಿಸಿ ಮನದಣಿಯೆ ಸವಿದರು.

ಇಕ್ಕೆಲಗಳಲ್ಲಿಯೂ ನಿಬಿಡವಾಗಿರುವ ಬಕುಳವೃಕ್ಷ ಶ್ರೇಣಿ, ಅರಳಿ, ಸೊರಗಿ, ಮುಸಿಯಾದ ಬಕುಳಪುಷ್ಪಗಳು ಪಥದ ಮೇಲೊರಗಿ ಮೃದುವಾಸನ್ನು ರಚಿಸಿದ್ದವು. ಅಲ್ಲಲ್ಲಿ ಪೊದೆಗಳ ನಡುವೆ, ಅಂಕೆ, ಸಂಖ್ಯೆಗಳನ್ನೂ ಮೀರಿ ಕಾಡಕುಸುಮಗಳು ಬಾಯ್ದೆರೆದು ನಗುತ್ತಿರುವ ನೋಟ! ಅವುಗಳ ಲಾಲಾಜಲವನ್ನೀಂಟುವ ವಾಂಛೆಯಿಂದ ಎಡೆಬಿಡದೆ ನೆರೆದ ಮಂಶೀರ ಸಂದೋಹದ ಮಾಗುದೊಂದು ನೋಟ! ಗುಡ್ಡ ಬಯಲುಗಳಿಂದ ಕೂಡಿ ನಿಮ್ನೋನ್ನತವಾದ ಆ ಪ್ರದೇಶವನ್ನು ಮೇಕೆಗಳಂತೆ ಹಾರುತ್ತಾ, ಜಿಗಿಯುತ್ತಾ ಅವರು ಹಾದು ಹೋಗುವಾಗ ಕಾಣುವ ಸೊಬಗೇ ಬೇರೆ! ಸುತ್ತ ಎತ್ತೆತ್ತ ನೋಡಿದರೂ, ಕಣ್ಣು ಚಲಿಸುವನಿತು ದೂರ ನೋಡಿದರೂ ಹಸುರುಸಿರಿಯೊಸರಿಕೊಂಡು ನಿಂತ ಇನ್ನೊಂದು ನೋಟ! ಕೆಯ್ವೊಲಗಳು, ಬಿಳಿಗಬ್ಬಿನ ಗದ್ದೆಗಳು, ಅಲ್ಲಲ್ಲಿ ಎದ್ದು ತೋರುವ ಅಂದವಾದ ಮಲರ್ಗಳು, ಅಲರಂಬನು ತನ್ನ ಶರವನ್ನಿಲ್ಲಿ ತಂದು ಬಿತ್ತಿ ಬೀರಿದಂತೆ ಕಂಗೊಳಿಸುವ ಬೇರೊಂದು ನೋಟ! ನಡುನಡುವೆ ಅಲ್ಲಲ್ಲಿ ಉರಗನಂತೆ ಚಲಿಸುತ್ತಿರುವ ಹಳ್ಳ ಕೆರೆಗಳು; ಗುಡ್ಡದಿಂದ ಕೆಳಗೆ ತುಂಬಿ ಹೊನಲಿಡುವ ಕಾಳ್ಪುರ; ಅವುಗಳ ಮೇಲೆ ಸ್ನಾನ–ಪಾನಕ್ಕೆಂದು ದೇವಗನ್ನೆಯರಂತೆ ಶೋಭಿಸುತ್ತಾ ಬಂದೆರಗುತ್ತಿರುವ ಬೆಳ್ವಕ್ಕಿಗಳ ತಂಡ; ಸೂರ್ಯನ ಹೊಂಬಿಸಿಲಿನಲ್ಲಿ, ಸುವರ್ಣ ಕಾಂತಿಯಲ್ಲಿ, ಅವುಗಳ ತನುತುಪ್ಪಳಗಳು ಹಲವಾರು ಬಣ್ಣಗಳಿಂದ ಬಣ್ಣಶಾಲೆಯಂತೆ ರಂಜಿಸುತ್ತಿದ್ದವು. ಭಾಸ್ಕರನ ಡಗೆಗೆ ಸತ್ತಿಗೆಯಾಗಿ ವಟಭೂಜಗಳು ಸಾಲುಸಾಲಾಗಿ ನಿಂತಿದ್ದವು; ಅವುಗಳ ಗೋಳಿಯಾಕಾರದ ಕೆಂಬಣ್ಣದ ಚಿಕ್ಕ ಚಿಕ್ಕ ಫಲಗಳು ಹಕ್ಕಿಗಳನ್ನು ಸಾರಿ ಸಾರಿ ಕರೆಯುವಂತಿತ್ತು. ಜಡಿಯ ನಿಡಿದಾದ ಗಡ್ಡದಂತೆ ಇಳಿದುಕೊಂಡ ಅದರ ಬೀಳಲುಗಳನ್ನೇರಿ ಕೆಲವು ಬಾಲಬಾಲೆಯರು ಉಯ್ಯಾಲೆಯಾಡುತ್ತಿದ್ದರು.

ಹೊತ್ತೇರುತ್ತಾ ಬಂದಿದ್ದರೂ, ಆ ತಾಣವು, ಸ್ಥಳವು, ಸೂರ್ಯನ ತಾಪದಿಂದ ವ್ಯತಿರಿಕ್ತವಾಗಿ, ಪ್ರಶಾಂತವಾಗಿತ್ತು. ಮರಗಳ ಹೊದರುಗಳಲ್ಲಿ ಖಗಸಂಕುಲದ ಚಿಳಿಪಿಳಿ ಗಾನವು ಇನ್ನೂ ನಿಂದಿರಲಿಲ್ಲ. ಗುಡ್ಡಬೆಟ್ಟಗಳಿಗೆ

ಬಡಿದು ಹಿಂದಿರುಗಿ ಬರುವ ಆ ಗಾನದ ಮಾರುದನಿ ಶೂನ್ಯ ರಸಾತಳದ ವರೆಗೂ ಹಸರಿಸಿಕೊಂಡಿತ್ತು. ರಾಜಾರಾಮನೂ, ವಾಮನರಾಯರೂ ಸಮುಲ್ಲಾಸದಿಂದ, ಆನಂದಲಹರಿಯಲ್ಲಿ ತೇಲಾಡುತ್ತಾ ಒಯ್ಯೊಯ್ಯನೆ ಸಾಗುತ್ತಿದ್ದರು. ಬಾರಿಬಾರಿಗೂ ತಂಗಾಳಿ ಬೀಸುತ್ತಾ, ತನ್ನಿರವನ್ನು ಕೂಗಿ ಹೇಳಿ ತನ್ನ ಸಾಮರ್ಥ್ಯದಿಂದ ಲತೆಯಂತೆ ಬಳುಕುತ್ತಿರುವ ಅವರ ದೇಹವನ್ನು ನೋಡಿ, ಛತ್ರದ ಸಸಿಗಳಿಗೆ ತಲೆದೂಗಿಸಿ ಕುಣಿತವನ್ನು ಕಲಿಸುತ್ತಿತ್ತು. ಭೂನಾಗಗಳು, ಮಂಡೂಕಗಳು, ಕ್ರಿಮಿಕೀಟಗಳು, ಎಲ್ಲಿ ನೋಡಿದರಲ್ಲಿ ಕಣ್ಮನಗಳನ್ನು ಸೂರೆಗೊಳ್ಳುತ್ತಿದ್ದುವು. ಗುಡ್ಡದ ಮೇಲ್ಭಾಗದಲ್ಲಿ ಉನ್ನಮಿತ ವಲ್ಮೀಕವೊಂದು ಶಿರನೆಗಹಿ ನಿಂತಿತ್ತು. ಹೂಲಗಳ ನಡುವೆ, ಹುಣಿಗಳ ಮೇಲೆ, ಕೊಳ್ಳಿಹಾವು, ನೀರ್ಹಾವುಗಳ ಸಾಮ್ರಾಜ್ಯ; ಹಳ್ಳಗಳ ನಡುವೆ ಕೋಳಿ ಹೂಗಳ ಮಂದಹಾಸ! ರಾಜಾರಾಮ, ವಾಮನರಾಯರು ಪ್ರಕೃತಿಯ ಸೌಂದರ್ಯಾನುಭೂತಿಯಿಂದ, ಹರ್ಷೋನ್ಮಾದದಿಂದ ಪುಲಕಿತರಾಗಿ ಮುಂಬರಿದರು.

ಇಬ್ಬರೂ ರಾಜಮಾರ್ಗವನ್ನು ಬಂದು ಸೇರಿದರು. ಡಾಮರು ಪೂಸಿದ ಮಾರ್ಗ ಸೂರ್ಯನ ಕಿಚ್ಚಿನಿಂದ ಬೆಚ್ಚಗಾಗಿ ಕಾಲಿಟ್ಟರೆ ಬೆಂದು ಹೋಗುವಂತಿತ್ತು. ರಾಜಾರಾಮ, ವಾಮನರಾಯರಿಬ್ಬರೂ ಅದಕ್ಕಂಜಿ ಕೆಂಧೂಳಿಯ ಫೂಟ್‌ಪಾತಿನಲ್ಲೇ ನಡೆಯತೊಡಗಿದರು. ದಾರಿಯಲ್ಲಿ ಶಂಖ, ಜಾಗಟೆಗಳನ್ನು ಹಿಡಿದುಕೊಂಡು ಬಾರಿಸುತ್ತಾ ಹೋಗುವ ಭಿಕ್ಷುಕರ ತಂಡವೊಂದು ಅವರ ಕಣ್ಣಿಗೆ ಬಿದ್ದಿತು. ಮೋಟಾರ್, ಸ್ಯೆಕಲ್, ಗಾಡಿಗಳ ಚಲಾವಣೆಗೆ ಪ್ರಾರಂಭವಾಗಿತ್ತು. ಮುಂದುವರಿಯುತ್ತಾ ರಾಜಾರಾಮನು ಮಗುದೊಂದು ಉತ್ಸೇಧ ದಿನ್ನೆಯನ್ನು ನಿರುಕಿಸಿದನು. ಇಳಿಜಾರಾದ ಅದರ ಮೇಲಿಂದ ಗಾಡಿಯೊಂದನ್ನೆಳೆದುಕೊಂಡು ಎತ್ತು ಪ್ರಯಾಸದಿಂದ ಕೆಳಗಿಳಿದು ಬರುತ್ತಿತ್ತು. ಗಾಡಿಯ ಆಳಿನ ಲಾಲಿ ಅದನ್ನೇನೂ ಉಲ್ಲಾಸಪಡಿಸುತ್ತಿರುವಂತೆ ತೋರುತ್ತಿರಲಿಲ್ಲ. ಆ ಒರಟೊರಟಾದ ನೆಲದ ಮೇಲೆ ಗಾಡಿಯ ಗಾಲಿಗಳು ಹೊರಳಿ ಚಲಿಸುತ್ತಿರುವಾಗ ಕೆಂಧೂಳಿನೊಂದಿಗೆ ಮೇಲೇಳುತ್ತಿರುವ ಆ ಕೀರಲು ಧ್ವನಿ, ಎಳೆವೆಣ್ಣಿನ ಕ್ರಂದನದಂತೆ ಕೇಳುತ್ತಿರುವ ಸೊಗಸೇನು ಅಲ್ಪವಾಗಿರಲಿಲ್ಲ.

"ಇದಕ್ಕೆ ಬಾಳೆಬೈಲು ಎಂದೆನ್ನುತ್ತಾರೆ" ಎಂದರು ವಾಮನರಾಯರು. ರಾಜಾರಾಮನು ನೋಡಿದನು. ವಾಮನರಾಯರ ಹೇಳಿಕೆಗೆ ಸರಿಯಾಗಿ ಸುತ್ತ

ಎತ್ತೆತ್ತಲೂ ನಂದನವನದಂತೆ, ಮೈಲು, ಯೋಜನ, ಹರದಾರಿಗಳ ದೂರದ ವರೆಗೂ ಕದಳೀವನಗಳು ಗೋಚರಿಸಿದವು.

ಮತ್ತೆ ಅರ್ಧ ಫರ್ಲಾಂಗು ನಡೆದು ಇಬ್ಬರೂ ಒಂದು ವಿಶಾಲವಾದ ಕಾಂಪೌಂಡಿನ ಒಳಗೆ ಬಂದರು. ಹೊರಗೆ ಭದ್ರವಾದ ಕಬ್ಬಿಣದ ಬಾಗಿಲು; ಉರುಟಾದ ಕಲ್ಲಿನ ಕಂಬ. ಆ ಕಂಬದಲ್ಲಿ 'ಶಾಂತಿಕುಂಜ' ಎಂದು ಅಕ್ಷರ ಗಳನ್ನು ಕೊರೆಯಲಾಗಿತ್ತು.

" ಹೆಸರಿಗೆ ತಕ್ಕ ಬಾಗೆಯೇ ಮನೆ! " ಎಂದು ವಾಮನರಾಯರು ರಾಜಾರಾಮನನ್ನು " ಬನ್ನಿ ! " ಎಂದು ಕರೆದುಕೊಂಡು ಹೋದರು. ಕಬ್ಬಿ ಣದ ಬಾಗಿಲು ರಕ್ಕಸನಂತೆ ಕೂಗಿಕೊಂಡು ಮುಚ್ಚಲು ಸುಮ್ಮನಾಯಿತು. ಗೇಟಿನಿಂದ ಮನೆಗೆ ಸಾಧಾರಣ ನೂರು ಅಡಿಗಳ ದೂರವಿರಬಹುದು. ಇವರು ಹೋಗುವಾಗ ಹೊರಗೆ ಅಂಗಳದಲ್ಲಿದ್ದ ನಾಯಿ, 'ಓವ್' ಎಂದು ಕೂಗುವ ಸ್ವರವೂ, ಒಳಗಿನಿಂದ ಶಂಖ, ಜಾಗಟೆ, ತಾಳಗಳ, 'ಭೂ!' 'ಥಯ್!' 'ಝಂ!' ಸ್ವರಗಳೂ ಕೇಳಿಸಲು ಪೂಜೆಯಾಗುತ್ತಿದೆ ಎಂದಿ ವರಿಗೆ ಗೊತ್ತಾಯಿತು. ಬಂದವರನ್ನು ನೋಡಿ ಹುಡುಗಿಯೊಬ್ಬಳು ಜಗಲಿಯ ಮೇಲೆ ಚಾಪೆ ತಂದು ಹಾಸಿ ಒಳಗೆ ಹೋದಳು. ಪೂಜೆಯಾಗುತ್ತಲೇ ಇತ್ತು.

ಬಂದವರಿಬ್ಬರೂ ಚಾಪೆಯಮೇಲೆ ಮಂಡಿಸಿದರು. ರಾಜಾರಾಮನ ದೃಷ್ಟಿ ಮೆಲ್ಲನೆ ಹಿತ್ತಿಲಕಡೆಗೆ ಸಂಚರಿಸಿತು. ಹೊಗೆ, ಕಾರ್ಖಾನೆ, ಸಿನೆಮಾ, ನಾಟಕ ಶಾಲೆಗಳಿಂದ ಕೂಡಿ ಕೇವಲ ಕಟ್ಟಡ ಮಯವಾದ ಮಂಗಳೂರಲ್ಲಿ, ಇಲ್ಲಿ ಮಾತ್ರ ಪ್ರಕೃತಿ ದೇವಿ ಪಟ್ಟಣಿಗರು ತನ್ನ ಮೇಲೆಳೆದ ಜವನಿಕೆಯನ್ನೋ ಸರಿಸಿ, ನೋಟಕರಿಗೆ ತನ್ನ ಸೌಂದರ್ಯವನ್ನು ಪ್ರದರ್ಶಿಸುವಂತೆ ರಾಜಾ ರಾಮನಿಗೆ ತೋರಿತು. ಹಾವುಗಳಂತೆ ತಲೆದೂಗುತ್ತಿರುವ ತೆಂಗು, ಕೌಂಗು ಗಳು. ಪೇರಳೆ. ಪನ್ನೇರಳೆ, ಬಾದಾಮಿ, ದಾಳಿಂಬ ಮರಗಳ. ಸಾಲಾಗಿ ಬೆಳೆದುನಿಂತ ಹೂ ಗಿಡಗಳು ಹೊಸದಾಗಿ ಅಲರ್ದ ಹೂಗಳನ್ನು ಮುಡಿ ದಿದ್ದವು; ಬಾಡಿ ಕೆಳಗುರುಳಿದ ಹೂಗಳ ಶಯ್ಯೆ ನೆಲದ ಮೇಲೆ. ಕೂಸನ್ನು ಹೊತ್ತುಕೊಂಡ ಜನನಿಯಂತೆ ಅಲ್ಲಲ್ಲಿ ಗೊನೆ ಬಿಟ್ಟ ಬಾಳೆ ಮರಗಳು! ಹರಿದ, ಹಣ್ಣಾದ ಎಲೆಗಳು! ನೆಲದಮೇಲೆ ನೆಲ ಕಾಣದಂತೆ ಮುಚ್ಚಿದ್ದ ಜೀರ್ಣ ಪರ್ಣ; ಗಾರಾದ ಚಿಕ್ಕ ಕೊಂಬೆಗಳು; ತೆಂಗಿನ ಮರವನ್ನು ಸರಸರನೆ ಏರುತ್ತಿರುವ ಇಣಚಿಗಳು; ಎಲ್ಲವೂ ಎಷ್ಟು ಮನೋಜ್ಞ! ದೂರದ ಚೂತ

ವೃಕ್ಷವೊಂದರಲ್ಲಿ ಕೋಗಿಲೆಯೊಂದು 'ಕುಹೂ!' ರವಕ್ಕೆ ಮೊದಲು ಮಾಡಿತ್ತು.

"ಬಂದಿರಾ? ನಮಸ್ಕಾರ!"

ರಾಜಾರಾಮ ತಿರುಗಿ ನೋಡಿದಾಗ ಮನೆಯ ಯಜಮಾನರು ಕೈ ಜೋಡಿಸಿ ನಗುತ್ತಾ ನಿಂತಿದ್ದರು. ಉಟ್ಟ ಚಿಕ್ಕ ಪಟ್ಟೆಯನ್ನುಳಿದು ದೇಹ ವೆಲ್ಲವೂ ಬತ್ತಲೆ! ಗೋಪನಾಮಗಳು ಎದೆ, ಹಣೆಯಮೇಲೆ ವಿಶದವಾಗಿ ಹೊಳೆಯುತ್ತಿದ್ದವು. ಬೋಳಾದ ತಲೆಯಹಿಂದೆ ಸ್ನಾನದ ಗಡ್ಡಲದಲ್ಲಿ ಬಿಟ್ಟು ಹೋದ ಹೆಂಗಸರಂತಹ ದಪ್ಪವಾದ ತುರುಬು ಇನ್ನೂ ಹಾಗೆಯೇ ಇದೆ.

ರಾಜಾರಾಮನೂ, ವಾಮನರಾಯರೂ ಪ್ರತಿಯಾಗಿ ವಂದಿಸಿದರು. ಯಜಮಾನರೂ ಅಲ್ಲೇ ಅದೇ ಚಾಪೆಯಮೇಲೆ ಆಸೀನರಾದರು.

"ರಂಗಯ್ಯ! ಇವರು ಯಾರು, ಗೊತ್ತಾಯ್ತೇ?" ಎಂದರು ವಾಮನರಾಯರು.

ರಂಗಯ್ಯ ಮಾತನಾಡದೆ ಇಬ್ಬರ ಮುಖವನ್ನೂ ನೋಡಿದರು.

"ಅದೇ, ನಿಮ್ಮ ಮನೆಯನ್ನು ತೆಗೆದುಕೊಳ್ಳಲು ಒಬ್ಬರು ಬರುತ್ತಾರೆಂದು ನಾನು ಹೇಳಲಿಲ್ಲವೇ?"

"ಹೋ! ಅವರೋ? ಸಂತೋಷ! ನಮಸ್ಕಾರ ಸ್ವಾಮಿ!" ಎಂದು ಪುನಃ ನಮಸ್ಕರಿಸಿದರು ರಂಗಯ್ಯ.

ಒಳಗಿನಿಂದ ಎರಡು ಲೋಟದಲ್ಲಿ ಕಾಫಿ ಹೊರಗೆ ಬಂತು.

"ಇದು ಯಾಕೆ, ಕಾಫಿ? ಕಾಫಿ ಬೇಡ!"

"ಹೋ! ಕುಡಿದರೆ ಏನೂ ದೋಷವಾಗಲಿಕ್ಕಿಲ್ಲ."

ವಾಮನರಾಯರು ಅಷ್ಟರೊಳಗೆ ಲೋಟವನ್ನು ಬರಿದ ಮಾಡಿ ಬಿಟ್ಟಿದ್ದರು: "ಹೋ! ನೀವೊಂದು ಹುಚ್ಚು ರಾಜಾರಾಮರಾಯರೇ! ಕಾಫಿ ಕೊಟ್ಟರೆ ಯಾರಾದರೂ ಬೇಡವೆಂದು ಹೇಳುತ್ತಾರೆಯೇ! ನಾನೀಗ ಕೊಡುವವರಿದ್ದರೆ ಒಂದು ಕೊಡಪಾನ ಬರಿದು ಮಾಡಲಿಕ್ಕೂ ತಯಾರು. ನಮ್ಮ ರಂಗಯ್ಯನ ಮನೆ ಯೆಂದರೆನೇ ನನಗೊಂದು ಧರ್ಮಾರ್ಥವಾದ ಹೋಟೆಲ್! ನೋಡಿ, ಅವತ್ತು ಸತ್ಯಾಗ್ರಹವೋ–ಮಣ್ಣೋ, ಮಸಣವೋ, ಅಂದು ನಾಲ್ಕು ದಿನ ಬಿಡದೆ ಹೋಟಲಿನವರು ಬಾಗಿಲು ಹಾಕಿದ್ದರಲ್ಲಾ! ಆಗ ನಾನು ಕಾಫಿ ಕುಡಿಯಲು ಬಂದುದು ಇಲ್ಲಿಗೇ! ಬರಲು ಕಾರಣವೂ ಇತ್ತು. ಅಂದರೆ ನನಗೆ

ಎಲ್ಲರ ಹಾಗಲ್ಲ; ಗಂಟೆಗೊಂದು ಬಾರಿಯಾದರೂ ಕುಡಿಯದಿದ್ದರೆ ' ಛಟ್ ' ಆಗಿ ಚಟ್ಟವೇರಬೇಕಾದೀತು. ನಮ್ಮ ರಂಗಯ್ಯನ ಮನೆಯಲ್ಲೆಂದಲ್ಲ; ಎಲ್ಲಿ ಹೋದರೂ ಕಾಫಿ ಕೊಟ್ಟರೆ ಬೇಡವೆಂದು ಹೇಳುವ ಅಭ್ಯಾಸವೇ ನನಗಿಲ್ಲ, ಕುಡಿಯಿರಪ್ಪ ಬೇಗ! ''

ಮನೆಯಲ್ಲಾಗಲೀ, ಹೋಟಲಲ್ಲಾಗಲೀ ಸಮನೆ, ರಿವ್ಹ್ನಸ್ ಕಾಫಿ ಕುಡಿದೇ ಅಭ್ಯಾಸವಾಗಿದ್ದ ರಾಜಾರಾಮನಿಗೆ ಈ ಬೆಲ್ಲದ ಕಷಾಯ ರುಚಿಸ ಲಿಲ್ಲ. ಆದರೂ, ರಂಗಯ್ಯನಿಗೆ ಬೇಸರವಾಗಬಾರದೆಂದು ಬಹಳ ಪ್ರಯತ್ನ ಪಟ್ಟು ಅದನ್ನೊಮ್ಮೆ ಹೇಗೋ ಕುಡಿದನು.

'' ಆಯಿತಷ್ಟೆ, ಕಾಫಿಯ ಸಂಗತಿ! ಇನ್ನು ಮನೆಯ ಸಂಗತಿ! '' ಎಂದರು ವಾಮನರಾಯರು.

ರಂಗಯ್ಯನ ಹುಡುಗಿಯೊಬ್ಬಳು ಬಾಗಿಲ ಮರೆಯಲ್ಲೇ ನಾಚುತ್ತಾ ನಿಂತುಕೊಂಡಿದ್ದಳು. ಅವಳಿಗೆ ಹೊರಗೆ ಹೋಗಬೇಕಾಗಿತ್ತು. ಆದರೆ, ಭಾವಡಿಯಲ್ಲಿ ಅಪರಿಚಿತರಾದ ಗಂಡಸರು! ಅವರ ಮುಂದೆ ಸೆರಗು ಬೀಸಿ ಹೋಗುವುದು ಹೇಗೆ? ಮದುವೆಗೆ ಸಿದ್ಧಳಾದ ಅವಳಿಗಂತೂ, ಬರುವ ಗಂಡಸ ರೆಲ್ಲಾ ತನ್ನನ್ನು ನೋಡಲು ಬರುವುರೆಂದೇ ಆಲೋಚನೆ. ವಾಮನರಾಯರು ಅವಳನ್ನು ನೋಡಿ ಎಲ್ಲವನ್ನೂ ಊಹಿಸಿಕೊಂಡರು.

'' ಏನಮ್ಮ, ಮೀನಾಕ್ಷಿ! ಬಾ! ಬಾ! ನಾಚಿಕೆ ಬೇಡ! ಇಲ್ಲೇನು ನಿನ್ನ ಗಂಡ ಬಂದಿಲ್ಲ. ''

ಮೀನಾಕ್ಷಿ ನಾಚುತ್ತಾ ಅಲ್ಲಿಯೇ ನಿಂತಳು.

'' ಏನು, ನಾವು ಹೋಗದೆ ಹೊರಗೆ ಬರುವುದಿಲ್ಲವೇ? ಆಗಲಿ, ರಂಗಯ್ಯ, ರಾಜಾರಾಮರಾಯರಿಗೆ ಮನೆಯನ್ನು ತೋರಿಸೋಣ. ''

ಮೂವರೂ ಮಾಳಿಗೆಯ ಕಡೆಗೆ ಸಾಗಿದಾಗ ಹುಡುಗಿ ಈಚೆಗೆ ನುಸುಳಿದಳು.

ಅಭ್ಯಾಸವಿದ್ದ ರಂಗಯ್ಯ, ವಾಮನರಾಯರು ಮಾಳಿಗೆಯ ಏಣಿಯನ್ನು ಧಡಧಡನೆ ಹತ್ತಿದರೂ, ಅಭ್ಯಾಸವಿಲ್ಲದ ರಾಜಾರಾಮನು ತೂಗಾಡಿಸಿದ ಹಗ್ಗದ ಸಹಾಯದಿಂದ ಮೆಲ್ಲನೆ ಕೆಳಗೆ ಬೀಳದಂತೆ ಜಾಗ್ರತೆಯಿಂದ ಮೇಲೇರಿದನು.

ಮೇಲೆ ವಿಶಾಲವಾದ ಮೂರು ಕೋಣೆ; ಬೆಳಕು, ಗಾಳಿ ಸಂಚಾರಕ್ಕೆ

ತಡೆಯಿಲ್ಲದಂತೆ ದೊಡ್ಡ, ದೊಡ್ಡ ಕಿಟಕಿಗಳು: ಮುಂದೆ ಮಾರ್ಗಕ್ಕೆ ಮುಖ ಮಾಡಿ ದೊಡ್ಡ ಪೋರ್ಟಿಕೋ! ಏನಾದರೂ ಬೇಸರವಾದರೆ, ನಿರ್ವೇದ ಚಿತ್ತರಾಗಿದ್ದ ಸಮಯ, ಆ ಪೋರ್ಟಿಕೋದಲ್ಲಿ ಬಂದು ನಿಂತರೆ ಸಾಕು, ದಾರಿಯಲ್ಲಿ ಹೋಗುವ ದಿಬ್ಬಣಗಳನ್ನೋ, ವೇಷಗಳನ್ನೋ ದಾರಿಯಲ್ಲಿ ಹೋಗುವವರೆಲ್ಲಾ! ' ಆ! ' ಎಂದು ತನ್ನನ್ನೇ ಬಾಯಿಬಿಟ್ಟುಕೊಂಡು ನೋಡುವ ಹಾಗೆ ವಿಚಿತ್ರವಾಗಿ ಶೃಂಗರಿಸಿಕೊಂಡ ಮಹಿಳೆಯರನ್ನು ನೋಡುತ್ತಾ, ನೋಡುತ್ತಾ, ಸತ್ತ ದುಃಖವೂ ಮರೆಯಾದೀತು.

ಮಹಡಿಯ ಕೆಳಗಿನ ಭಾಗವೂ ಎಲ್ಲವೂ ಸುಹಿತವಾಗಿತ್ತು. ಮಳೆಗಾಲದಲ್ಲೂ ಕೂಡಾ ಕೊಡೆ ಹಿಡಿಯದೆ, ಮಳೆಗೆ ನೆನೆಯದೆ ಸ್ನಾನದ ಕೋಣೆಗೆ, ಭಾವಿಕಟ್ಟೆಗೆ ಹೋಗಲುಬೇಕಾದ ಅನುಕೂಲತೆಗಳು ಎಲ್ಲವನ್ನೂ ರಂಗಯ್ಯ ತೋರಿಸಿದರು.

ಪುನಃ ತ್ರಿಮೂರ್ತಿಗಳು ಭಾವಡಿಯಲ್ಲಿಯೇ ಸೇರಿದರು. ರಂಗಯ್ಯ ಮನೆ, ಹಿತ್ತಲಿನ ಆದಾಯ–ವ್ಯಯದ ಪಟ್ಟಿಯನ್ನೂ ಮುಂದಿಟ್ಟರು.

" ಒಪ್ಪಿಗೆಯಾಯಿತೋ ರಾಯರಿಗೆ, ಮನೆ? "

" ಏನು, ರಾಜಾರಾಮರಾಯರೇ! ನಿಮ್ಮನ್ನು ಕೇಳುವುದು ರಂಗಯ್ಯ"

" ಇರಲಿ? ಎಷ್ಟು ಬೆಲೆ ಈ ಮನೆಗೆ? "

" ಬೆಲೆಯೇ! ಅದನ್ನು ನಾನು ಹೇಳಬೇಕೆ? ನಿಮಗೇ ಗೊತ್ತಾಗುವುದಿಲ್ಲವೇ? ನೀವು ಕೊಡುವಷ್ಟು ಕೊಡಿ. "

"ನಾನು ಕೊಟ್ಟದ್ದನ್ನು ನೀವು ಮರುಮಾತಿಲ್ಲದೆ ಸ್ವೀಕರಿಸುತ್ತೀರಾ? ಹೇಗೆ, ವಾಮನರಾಯರೇ ಇವರ ಮಾತು! "

" ಅದರಲ್ಲಿ ಚರ್ಚೆ ಬೇಡ? ಒಂದು ಸರಿಯಾದ ಬೆಲೆ ಹೇಳಿ, ನೋಡೋಣ, ರಂಗಯ್ಯ! " ಎಂದರು ವಾಮನರಾಯರು.

" ಹದಿನೈದು ಸಾವಿರ! "

" ಅಬ್ಬಾ.... ! "

" ಏನು? "

" ನೀವು ಈ ಮನೆಯನ್ನು ಯಾವನಾದರೂ ಅರಸುಕುಮಾರನಿಗೆ ಮಾರುವುದೇ ಒಳ್ಳೆಯದು! "

" ಏನು, ನಾನು ಹೇಳಿದ್ದು ಹೆಚ್ಚಾಯಿತೇ? ಒಳ್ಳೇ ಮನೆ, ತೋಟ, ಹಿತ್ತಿಲು! ವಾಮನರಾಯರೇ, ನೀವು ಹೇಳಿ! "

" ಏನನ್ನು ಹೇಳುವುದು ? "

" ಹೋಗಲಿ, ರಾಜಾರಾಮರಾಯರೇ! ಮತ್ತೆ ನೀವೆಷ್ಟು ಕೊಡುವುದಕ್ಕೆ ಒಪ್ಪುತ್ತೀರಿ? " ಎಂದರು ರಂಗಯ್ಯ.

" ಹೇಳಿದರೆ, ಏನೂ ಬೇಸರವಿಲ್ಲವಷ್ಟೆ? "

" ಥೂ! ಯಾಕೆಂದು ಬೇಸರ ಹೇಳಿ? "

" ಐದು ಸಾವಿರ! "

" ಲ್ಲಲ್ಲಲ್ಲ........! ಏನು ಮಾತಿದು ರಾಜಾರಾಂರಾವ್! ಎಲ್ಲಿಂದೆಲ್ಲಿಗೆ ಹಾರುತ್ತೀರಿ? ಆಕಾಶದಿಂದ ನೆಟ್ಟಗೆ ಪಾತಾಳಕ್ಕೇ! ........ "

" ನೀವು ಒಮ್ಮೆಲೇ ಆಕಾಶಕ್ಕೇರಿದುದರಿಂದ ನಾನು ಒಮ್ಮೆಲೇ ಪಾತಾಳಕ್ಕಿಳಿಯಬೇಕಾಯಿತು! " ಎಂದು ನಕ್ಕು ಹೇಳಿದನು ರಾಜಾರಾಮ.

" ಐದು ಸಾವಿರ ಬಿಟ್ಟು ಮಾತಾಡಿ. "

" ಐದು ಸಾವಿರಕ್ಕೆ ತೆಗೆದುಕೊಂಡರೂ ಮತ್ತೆ ರಿಪೇರಿ ಮಾಡುವುದಕ್ಕೆ ಐದು ಸಾವಿರ- ಆರು ಸಾವಿರ ಬೇಡವೇನಯ್ಯಾ! "

" ರಿಪೇರಿ ಬೇಕಾದರೆ ನಾನು ಮಾಡಿಸಿಕೊಡುತ್ತೇನೆ. "

" ನಮಗೆ ಛಂದ ಕಾಣುವಹಾಗೆ ನಾವೇ ರಿಪೇರಿ ಮಾಡಿಸಿಕೊಳ್ಳಬೇಕು. "

" ಐದು ಸಾವಿರಕ್ಕೆ ಎಷ್ಟು ಮಾತ್ರವೂ ಸಾಧ್ಯವಿಲ್ಲ. "

" ಬೇಡ! "

ಕೊನೆಗೆ ವಾಮನರಾಯರೇ ಎಲ್ಲವನ್ನೂ ಇತ್ಯರ್ಥ ಮಾಡಬೇಕಾಯಿತು: " ಇರಲಿ, ರಾಜಾರಾಂರಾವ್! ರಂಗಯ್ಯ! ನಾನು ನಿಮಗಿಬ್ಬರಿಗೂ ಬೇಕಾದವ. ನಾನು ಹೇಳಿದ್ದಕ್ಕೆ ಪ್ರತಿಯಿಲ್ಲದೆ ಇಬ್ಬರೂ ಏಕಮನಸ್ಸಿನಿಂದ ಒಪ್ಪಿಬಿಡಿ. ಐದೂ ಬೇಡ- ಹದಿನೈದೂ ಬೇಡ. ಹತ್ತು ಸಾವಿರ ಇರಲಿ! ಏನು? "

" ಆಗಬಹುದು. " ಎಂದನು ರಾಜಾರಾಮ.

ರಂಗಯ್ಯನೂ, " ಆಯಿತು? ಮತ್ತೇನು ಮಾಡುವುದು? ಹೇಗಾದರೂ ನನಗೆ ಈಗ ಮನೆಯನ್ನು ಮಾರದೆ ಉಪಾಯವುಂಟೇ ? ನನಗೆ

ಹಣ ಬಹಳ ಅರ್ಜಂಟಾಗಿದೆ ಇಲ್ಲವಾದರೆ, ಎರಡು ತಿಂಗಳ ನಂತರವಾದರೆ ಇದಕ್ಕೆ ಮೂವತ್ತು ಸಾವಿರ ಬೆಲೆ ಬರುತ್ತಿತ್ತು. ಒಬ್ಬ ಹಾಗೆ ಕ್ರಯ ಕಟ್ಟಿದ್ದ. ಆದರೆ, ಈಗ ಅವನ ಹತ್ತಿರ ದುಡ್ಡು ಇಲ್ಲದೆ ಮೋಸವಾಯಿತು."

ಊಟದ ಸಮಯವಾಗಿತ್ತು; ರಂಗಯ್ಯನ ಹೆಂಡತಿ ಬಾಗಿಲ ಬಳಿ ಬಂದು ನಿಂತಿದ್ದಳು. ವಾಮನರಾಯರಿಗೆ ಗೊತ್ತಾಯಿತು.

"ಹಾಗಾದರೆ ಹೋಗೋಣವೇ, ರಾಜಾರಾಂರಾವ್!" ಎಂದು ಎದ್ದರು. ರಾಜಾರಾಮನೂ ಎದ್ದು ನಿಂತನು.

"ಬರುತ್ತೇವೆ, ರಂಗಯ್ಯ; ನಮಸ್ಕಾರ!" ಎಂದಿಬ್ಬರೂ ಹೊರಟರು. ಗೇಟು ದಾಟಿ, ಸಿಗರೇಟು ಹಚ್ಚಿಕೊಂಡು ವಾಮನರಾಯರು, "ಹಾಗಾದರೆ ನಾಳೆ ಸಿಕ್ಕುತ್ತೇನೆ ರಾಜಾರಾಮರಾಯರೇ!" ಎಂದು ತಮ್ಮ ದಾರಿಯನ್ನು ಹಿಡಿದರು.

ರಾಜಾರಾಮ ಮುಂದುವರಿಯುತ್ತಾ ಇದ್ದ. ಬಿಸಿಲೇರಿ ಮಾರ್ಗವು ಕೆಂಡದಂತೆ ಸುಡುತ್ತಿತ್ತು. ಮೇಲಾಗಿ ರಾಜಾರಾಮನಿಗೆ ಹಸಿವೂ ಪ್ರಬಲವಾಗಿತ್ತು. ಅಂಥ ಪರಿಸ್ಥಿತಿಯಲ್ಲಿ ಮುಂದುವರಿಯುವುದು ಬಹಳ ಪ್ರಯಾಸವಾಯಿತು. ಹಾಗೆ ಮೆಲ್ಲನೆ ಹೋಗುತ್ತಿರುವಾಗ ಹಿಂದಿನಿಂದ ಹಾರನಿನ ಶಬ್ದ ಕೇಳಿಸಲು ಹಿಂದೆ ನೋಡಿದ ಸಿಟಿ ಬಸ್ ಬರುತ್ತಿತ್ತು. ಕೈಯೆತ್ತಿ ಬಸ್ ನಿಲ್ಲಿಸಿ ಅದನ್ನೇರಿದ. ಬಸ್ ಪುನಃ ಓಡತೊಡಗಿತು.

ಮನೆಗೆ ಬಂದಾಗ ಲಲಿತೆ ಬಾಗಿಲಲ್ಲಿ ಅವನ ಬರುವನ್ನೇ ಇದಿರು ನೋಡುತ್ತಾ ಕುಳಿತುಕೊಂಡಿದ್ದಳು. ರಾಜಾರಾಮನ ತಲೆ ಕಂಡೊಡನೆಯೇ, "ಸಿಕ್ಕಿತೇ, ಸಿಕ್ಕಿತೇ, ಮನೆ ಸಿಕ್ಕಿತೇ?" ಎಂದು ಆತುರದಿಂದ ಕೇಳಿದಳು.

"ಎಲ್ಲಾ ಮತ್ತೆ ಹೇಳೋಣ; ಈಗ ಹಸಿವಿನಿಂದ ಸಾಯುತ್ತಿದ್ದೇನೆ" ಲಲಿತೆ ಮಾತನಾಡದೆ ಒಳಗೆ ಹೋದಳು. ಊಟವಾಗಿ ಕೈತೊಳೆದು ಬರುವುದರೊಳಗಾಗಿಯೇ ಅವಳ ಆತುರವು ಅವನಿಂದ ಕೇಳಿಸಿಯೇ ಬಿಟ್ಟಿತು: "ಇನ್ನಾದರೂ ಹೇಳಿ; ಮನೆ ಸಿಕ್ಕಿತೇ?"

"ಸಿಕ್ಕಿತಪ್ಪಾ; ಸಿಕ್ಕಿತು!"

"ಎಲ್ಲಿ?"

"ಎಲ್ಲಾದರೇನು? ಬಾಳೆಬೈಲಿನಲ್ಲಿ. ಬಹಳ ಆರೋಗ್ಯಕರವಾದ ಸ್ಥಳ!"

"ಮನೆ, ತೋಟವೆಲ್ಲಾ ಹೇಗೆ?"

" ಮಾರ್ಗದ ಬದಿಯಲ್ಲೇ ಮನೆ! "

" ಹಾಗಾದರೆ ಯಾವಾಗಲೂ ಮನೆಯೊಳಗೆ ಧೂಳೇ ಇದ್ದೀತು "

" ಛೇ! ಇಲ್ಲ, ಇಲ್ಲ; ಡಾಮರಿನ ಮಾರ್ಗ! "

" ಹುಂ! "

" ಹುಂ, ಏನು! ಚಿಕ್ಕ ಚೊಕ್ಕಟವಾದ ಮನೆ, ದೊಡ್ಡ ಹಿತ್ತಲು, ತೋಟ........ "

ಲಲಿತೆ ನೂರಾರು ಪ್ರಶ್ನೆಗಳನ್ನು ಕೇಳಿದಳು: ಮನೆಯಲ್ಲಿ ಕೋಣೆಗಳೆಷ್ಟಿವೆ? ಹಿತ್ತಲಲ್ಲಿ ತೆಂಗಿನ ಮರಗಳೆಷ್ಟು? ಕಂಗಿನ ಸಸಿಗಳೆಷ್ಟು? ಭಾವಿಯಲ್ಲಿ ಒಸರು ಚೆನ್ನಾಗಿದೆಯೇ? ನೆಲದಲ್ಲಿ ಮಣ್ಣು ಫಲವತ್ತಾಗಿದೆಯೇ? ತರಕಾರಿಗಳನ್ನು ಬೆಳೆಯಿಸಲು ಬಂದೀತೇ? ಮಾಡು, ತೊಲೆ, ಕಂಬಗಳು ಗಟ್ಟಿಯಾಗಿದ್ದಾವೆಯೇ? ಇನ್ನೂ ಅನೇಕ ಪ್ರಶ್ನೆಗಳು.

ಅವಳ ಪ್ರಶ್ನೆಗಳಿಗೆ ಬೇಸರ ಹೊಂದಿ ರಾಜಾರಾಮನು ಹೇಳಿದ " ಅದನ್ನೆಲ್ಲಾ ಯಾರು ಕಂಡು ಕೇಳಿದ್ದಾರೆ, ಲಲಿತೆ? ಮನೆಯೆಂದ ಮೇಲೆ ಅದೆಲ್ಲಾ ಇಲ್ಲದೆ ಇದ್ದೀತೇ? ನಿನ್ನದೇನಿದು ಬೇಡವಾದ ಪ್ರಶ್ನೆಗಳು! "

" ಹಾ! ನೋಡಿ! ನೀವು ಈ ಮನೆಯನ್ನು ಬಾಡಿಗೆಗೆ ಹಿಡಿದಾಗಲೇ ನನಗೆ ಗೊತ್ತಾಗಿತ್ತು, ನೀವು ಮನೆ ಹುಡುಕುವುದರಲ್ಲಿ ಎಷ್ಟು ಜಾಣರು ಎಂಬುದು! ಇವತ್ತು ಪೂರ್ಣ ಗೊತ್ತಾಯ್ತು. ಹೇಗೂ ಇರಲಿ; ನೀವು ಆ ಮನೆಯನ್ನು ತೆಗೆದುಕೊಳ್ಳುವುದಕ್ಕೆ ಅವಸರ ಮಾಡಬೇಡಿ ನಾನು ಒಮ್ಮೆ ಹೋಗಿ ನೋಡಿ ಮನೆಯನ್ನು 'ಪಾಸ್' ಮಾಡಬೇಕು. ಯಾವಾಗ ಹೋಗೋಣ ನೋಡುವುದಕ್ಕೆ? "

" ಯಾವಾಗ ಬೇಕೋ ಆವಾಗ! "

" ಹೂಂ, ಹಾಗಾದರೆ ನಾಳೆ ಸಾಯಂಕಾಲವೇ ಹೋಗೋಣ. ನಿಮಗೇನೂ ತೊಂದರೆಯಿಲ್ಲವಷ್ಟೆ! "

" ಹೂಂ, ಇಲ್ಲ "

ಮರುದಿನ ಸಾಯಂಕಾಲ ಹೋಗಿ ನೋಡಿಕೊಂಡು ಬಂದರು. ರಾಜಾರಾಮನೇನೂ ಸೋಲಲಿಲ್ಲ. ಮನೆ, ಲಲಿತೆಯಿಂದ 'ನಪಾಸ್' ಎನಿಸಿಕೊಳ್ಳಲ್ಪಡಲಿಲ್ಲ.

" ಇನ್ನು ತೆಗೆದುಕೊಳ್ಳಬಹುದಲ್ಲವೇ ಲಲಿತಾ, ಮನೆ? "

"ಓಹೋ! ತೆಗೆದುಕೊಳ್ಳಿ!" ಎಂದಳು. "ಮನೆಯೇನೋ ಅನುಕೂಲವಾಗಿದ್ದರೂ ಸ್ವಲ್ಪ ಹಳೆಯ ಮಟ್ಟು. ಆದರೆ, ಅದನ್ನು ನಮಗೆ ಬೇಕಾದ ಹಾಗೆ ಅಭಿನವಗೊಳಿಸಲಿಕ್ಕೆ ಬರುವುದಿಲ್ಲವೇ?"

"ಹೋ! ಅದನ್ನೊಂದು ನನಗೆ ಹೇಳಿಕೊಡುತ್ತೀಯಾ!" ಎಂದನು. ರಾಜಾರಾಮು. ರಂಗಯ್ಯನಿಗೆ ಹತ್ತುಸಾವಿರ ನೋಟುಗಳನ್ನು ತೆತ್ತು ರಶೀತಿ ಪಡೆದುಕೊಂಡನು. ರಶೀತಿ ದೊರೆತ ಮರುದಿನವೇ ಮೇಸ್ತ್ರಿ ಮನೆ ರಿಪೇರಿಗೆ ಬಂದಿದ್ದನು. ರಂಗಯ್ಯ ಆ ದಿನವೇ ಅಲ್ಲಿಂದ ಗಟ್ಟಕ್ಕೇರಬೇಕಾಯಿತು.

ಮನೆ ರಿಪೇರಿಯಾಗುತ್ತಿತ್ತು. ಎಷ್ಟೋ ಬಾರಿ ಲಲಿತೆ ಮನೆಯಲ್ಲಿ ಬೇರೆ ಕೆಲಸವಿಲ್ಲದೆ, ಗಂಡನೊಡನೆ ತಮ್ಮ ಹೊಸ ಮನೆಗೆ ಬಂದು ಮೇಸ್ತ್ರಿಗೆ 'ಹಾಗೆ ಮಾಡು,' 'ಹೀಗೆ ಮಾಡು' ಎಂದು ಬುದ್ಧಿ ಹೇಳುತ್ತಿದ್ದಳು. ಈಗ ಅವಳ ತಲೆಯಲ್ಲಿ ಹೂ ತಪ್ಪುತ್ತಲೇ ಇರಲಿಲ್ಲ. ಹಾಗೆಂದು ಮಾರ್ಕೇಟಿನ ಸಪ್ಲಾಯಿಯೇನಲ್ಲ. ರಾಜಾರಾಮುನಿಗೆ ಒಂದು ವೇಳೆ ಹಾಗೆ ಮಾರ್ಕೇಟಿನಿಂದ ದುಡ್ಡು ಕೊಟ್ಟು ಹೂ ತರುವ ಮನಸ್ಸಿದ್ದರೂ, ಅವಳೇ 'ಬೇಡ; ಅನಾವಶ್ಯಕ ದುಡ್ಡು ಹಾಳು!' ಎನ್ನುತ್ತಿದ್ದಳು. ಈ ಹೂವೆಲ್ಲಾ ಅವಳ ಹೊಸ ಮನೆಯ ವರಪ್ರಸಾದ. ಅಲ್ಲಿ ಸಿಗುವಷ್ಟು ಬಗೆಬಗೆಯ ಹೂಗಳು ಮಾರ್ಕೇಟಿನಲ್ಲಿ ಇಡೀ ವರ್ಷ ಅಲೆದರೂ ಕಾಣಸಿಗುವುದು ಕಷ್ಟ.

ಮೇಸ್ತ್ರಿ ಮನೆ ರಿಪೇರಿ ಮುಗಿಸಿ ಬಿಲ್ ತಂದಿಟ್ಟನು. ಬಿಲ್ ಏನೋ ಬಹಳ ಹೆಚ್ಚಾಗಿದ್ದರೂ, ಮನೆ ಅಭಿನವಾಲಂಕಾರದಿಂದ, ನೂತನ ಸೌಂದರ್ಯದಿಂದ ಒಪ್ಪುತ್ತಿತ್ತು. ಹೊಸದಾಗಿ ಬಣ್ಣ ಹಚ್ಚಿಕೊಂಡು ಕಿಟಕಿ ಬಾಗಿಲುಗಳು ರಜಪೂತರಂತೆ ಪೋಷಾ ಹಾಕಿಕೊಂಡು ಮೆರೆಯುತ್ತಿದ್ದವು. ವೈಟ್‌ವಾಶಿನಿಂದ ಬಿಳಿಯಾಗಿದ್ದ ಗೋಡೆಗಳು ಕಪ್ಪಾಗುವ ಸುದಿನವನ್ನು ಹಾರೈಸಿಕೊಂಡು ನಿಂತಿದ್ದವು.

ಎರಡು ದಿನದ ಮೇಲೆ ಒಂದು ಸಂಜೆ ವಾಮನರಾಯರ ತಮ್ಮ ತನ್ನ ಪರಿವಾರದೊಂದಿಗೆ ಜೋಡುಮುತಕ್ಕೆ ಬಂದರೆ, ರಾಜಾರಾಮುನ ಸರಕುಗಳನ್ನೆಲ್ಲಾ ಹೇರಿಕೊಂಡು ಲಾರಿಯೊಂದು ಶಾಂತಿಕುಂಜದ ಕಡೆಗೆ ಸಾಗಿತ್ತು.

ಶಾಂತಿಕುಂಜಕ್ಕೆ ಬಂದ ಮೇಲೆ ಲಲಿತೆಯ ಸಂತೋಷ ಬಹಳ, ಅಪಾರ. ಅವಳು ಹೊಸದಾಗಿ ಸದಸ್ಯೆಯಾಗಿ ಸೇರಿದ್ದ ಮಹಿಳಾ ಕ್ಲಬ್ಬಿನ ಅವಳ ಗೆಳತಿಯರೆಲ್ಲಾ "ನಿಮ್ಮ ಮನೆ ನೋಡೋಣವನ್ನು" ಎಂದು ಲಲಿತ ಕರೆಯದಿದ್ದರೂ

ತಾವಾಗಿಯೇ ಹೊರಟು ಬರುತ್ತಿದ್ದರು. ಮನೆ ಅವರಾರಿಂದಲೂ ಶಹಭಾಸ್‌ಗಿರಿಯನ್ನು ಪಡೆಯದೆ ಇರಲಿಲ್ಲ. ಇವರೊಂದಿಗೇ ಕೆಲವರು, "ಏನಮ್ಮಾ, ಲಲಿತಾಬಾಯಿ! ನೀವು ಗೃಹಪ್ರವೇಶ ಸಮಾರಂಭವನ್ನು ಜರುಗಿಸುವುದಿಲ್ಲವೇ? ನಾವು ಅದಕ್ಕೆ ಬರಬೇಡವೇ?" ಎಂದು ಮುಂತಾಗಿ ಕೇಳತೊಡಗಿದ್ದರು. ಈ ವಿಷಯವನ್ನು ಲಲಿತೆ ರಾಜಾರಾಮನೊಡನೆ ಪ್ರಸ್ತಾಪಿಸಿದಾಗ ಅವನು,

"ಅಯ್ಯೋ! ಗೃಹಪ್ರವೇಶ ಮಾಡದೆ ಉಂಟೇ? ಜೋಯಿಸರೊಡನೆ ಹೇಳಿದ್ದೇನೆ. ಬರುವ ತಿಂಗಳಲ್ಲಿ ಒಂದು ಶುಭದಿನವಿದೆಯಂತೆ!"

ಲಲಿತೆ ತನ್ನ ಗೆಳತಿಯರಿಗೆಲ್ಲಾ ಅಚ್ಚಾದ ಇನ್ವಿಟೇಶನ್ ಕಾರ್ಡುಗಳನ್ನು ಕೊಟ್ಟದ್ದಲ್ಲದೆ, ಬಾಯಿಯಿಂದಲೂ ಚೆನ್ನಾಗಿ ಉಪಚರಿಸಿ ಆಮಂತ್ರಿಸಿದಳು. ಮನೆಯಲ್ಲಿ ಗೃಹಪ್ರವೇಶ ಸಮಾರಂಭದ ಸಿದ್ಧತೆ ನಡೆದಿತ್ತು. ಲಲಿತೆ ಗಂಡನೊಡನೆ: "ಏನೆಲ್ಲಾ ಮಾಡಬೇಕೆಂದು ನಿಶ್ಚಯಿಸಿದ್ದೀರಿ?" ಎಂದಳು.

"ಏನೇನು ಮಾಡಬೇಕು? ನೋಡೋಣ! ನೀನೇ ಹೇಳು."

"ಸಂಗೀತಕ್ಕೆ ಯಾರು?—ಮೈಸೂರಿನ ಸಂಗೀತರತ್ನರೋ, ತಂಜಾವೂರಿನ ಭಾಗವತರೋ?"

"ಸಂಗೀತಕ್ಕೆ, ಮೊನ್ನೆ ತೆಗೆದುಕೊಂಡ ರೇಡಿಯೋ ಇಲ್ಲವೇ?"

"ಛೇ! ಸಂಗೀತ ವಿದ್ವಾಂಸರಿಲ್ಲದಿದ್ದರೆ ಸಮಾರಂಭ ಚಂದಾದೀತೇ?"

"ನೋಡು, ಲಲಿತೆ! ಶಾಸ್ತ್ರೀಯ ಸಂಗೀತಕ್ಕೆ ಈಗ ಏನೂ ಬೆಲೆಯಿಲ್ಲ. ಅವರ ಆ ತಲೆಗಳ ಕುಣಿತಕ್ಕೂ ಕೈಗಳ ತಾಳಕ್ಕೂ ಜನ ಹೇಸಿ ದೂರ ಸರಿದು ಬಿಡುತ್ತಾರೆ. ಈಗಿನವರಿಗೆ ಬೇಕಾದ್ದು ಸಿನೆಮಾ ಹಾಡು ಮಾತ್ರ. ಆದ್ದರಿಂದ ಅದು ಬೇಡ. ರೇಡಿಯೋ ಮಾತ್ರ ಸಾಕು!"

"ಇನ್ನು ನರ್ತನ?—"

"ಹೂಂ—ನರ್ತನ! ಇಂದ್ರನಿಗೇ 'ಒರ್ಡರ್' ಮಾಡುತ್ತೇನೆ, ರಂಭೆ, ಮೇನಕೆಯರನ್ನು ಕಳುಹಿಸಲು. ನಿನಗೊಬ್ಬಳಿಗೆ ನರ್ತನ!"

"ಹಾಂ! ನೋಡಿ! ನಿಮಗೆ ಆ ಸೂಳೆಯ ನೆನಪಿದೆಯೇ?"

"ಇದೇನಿದು ಮಾತು ಲಲಿತಾ! ಸೂಳೆಯ ನೆನಪಿರಲು ನಾನೇನು ವ್ಯಭಿಚಾರಿಯೇ?"

"ನಿಮ್ಮದು ಯಾವಾಗಲೂ ಒಂದೇ, ಸಲ್ಲದ ಮಾತು! ಆ ಹೀರಾ—ಅವಳ ನೆನಪಿದೆಯೇ ಎಂದು ಕೇಳಿದೆ...."

"......................"

"ಏತಕ್ಕೆ ಮಾತನಾಡುವುದಿಲ್ಲ? ಆ ದಿನ ಅವಳನ್ನು ನರ್ತನಕ್ಕೆ ಕರೆಯಬೇಕು."

"ಛೀ! ಛೀ! ಬೇಡ! ಬೇಡ!"

"ಅದೇಕೆ ಹಾಗೆ ಹೇಳುತ್ತೀರಿ?"

"ಬೇಡ! ಬೇಡ! ಆ ಸೂಳೆ ಬೇಡ! ನಾನು ಬೇಕಾದರೆ ಬೇರೆ ನರ್ತಕಿಯನ್ನು ಕರೆದುಕೊಂಡು ಬರುತ್ತೇನೆ."

ಲಲಿತೆ ನಗುತ್ತಾ, "ಅಯ್ಯೋ! ನೀವು ಸೂಳೆಯೆಂದರೆ ಇಷ್ಟು ಹೆದರುತ್ತೀರೆಂದು ನಾನು ಮಾಡಿರಲಿಲ್ಲ. ಸೂಳೆಯಾದರೇನು!—ನಿಮ್ಮನ್ನು ತಿನ್ನಲು ಬರುತ್ತಾಳೆಯೇ?"

ಆ ದಿನವಿಡೀ ಇದೇ ಕುರಿತು ದೊಡ್ಡ ವಾಗ್ವಾದ ನಡೆಯಿತು. ಅಂತೂ ಕೊನೆಗೆ ರಾಜಾರಾಮನೇ ಸೋಲಬೇಕಾಯಿತು. ಈ ಆಧುನಿಕ ಯುಗದಲ್ಲಿ ಹೆಂಗಸರ ಮಾತೇ ಮೇಲುಗೈ.

ಹೀರೆಗೆ ಈ ವಿಚಾರ ಗೊತ್ತಾದಾಗ ಅವಳು ಹಿರಿಹಿರಿ ಹಿಗ್ಗಿದಳು. ಇನ್ನು ರಾಜಾರಾಮನು ಸುಲಭವಾಗಿ ತನ್ನ ಕೈಗೆ ಸಿಕ್ಕಿಬಿಡುತ್ತಾನೆಂದು ಭಾವಿಸಿದಳು.

ಹಾರಯಿಸುತ್ತಿದ್ದಂತೆಯೇ ಆ ಸಮಾರಂಭದ ಸುದಿನವೂ ಬಳಿಸಾರಿತು. ಶಾಂತಿಕುಂಜದ ದ್ವಾರದ ಇಕ್ಕಡೆಗಳಲ್ಲೂ ಎರಡು ಗೊನೆ ಬಿಟ್ಟ ಬಾಳೆಗಳು ನಸುಬಾಗಿ ನಿಂತುಕೊಂಡಿದ್ದವು. ಬಣ್ಣಬಣ್ಣದ ಪತಾಕೆಗಳ ಮಾಲೆ ಸ್ತಂಭದಿಂದ ಸ್ತಂಭಕ್ಕೆ, ಕೋಲಿನಿಂದ ಕೋಲಿಗೆ, ಬಿದಿರಿನಿಂದ ಬಿದಿರಿಗೆ ಹಾದು ಹೋಗಿ, ಮರಳಿ, ನೋಡಲು ಮನೋಹರವಾಗಿತ್ತು. ಬಾಂದಳವ ಕೀಲಯಿಸುವಂತೆ ವಾದ್ಯಧ್ವನಿಗೆ ಮೊದಲಾಗಿತ್ತು. ಗ್ರೀಷ್ಮ ಸೂರ್ಯನ ತಾಪಕ್ಕೆ ಬೆದರಿ ಛಪ್ಪರ ಮೇಲೆದ್ದು ನಿಂತಿತ್ತು. ಆ ದ್ವಾರದ ಮುಖಾಂತರ ಒಳಹೊರ ಹೋಗುವವರಿಗೆ ಕಡಿಮೆಯಿರಲಿಲ್ಲ. ಎಷ್ಟೋ ಮೋಟಾರು ಕಾರುಗಳು ಹೊರಗಿನಿಂದ ನಿಂತುಕೊಂಡಿದ್ದವು. ಇನ್ನೆಷ್ಟೋ ಬರುತ್ತಾ ಇದ್ದವು. ಒಳಗೆ ಬಣ್ಣ ಬಣ್ಣದ ತಿವಾಸಿಯ ಮೇಲೆ, ಬಣ್ಣ ಬಣ್ಣದ ಸೀರೆ, ಧೋತಿಗಳನ್ನುಟ್ಟು ಸುಗಂಧ, ಅತ್ತರ್, ಪನ್ನೀರುಗಳ ಸ್ನಾನದಿಂದ ಮಗಮಗಿಸಿ ಕಾಫಿ ಫಲಹಾರಗಳಿಂದ ಸಂತುಷ್ಟರಾಗಿ ಅಧ್ಯಾಸೀನರಾಗಿದ್ದಾರೆ. ನರ್ತನದ ಸುಮುಹೂರ್ತದ ದಾರಿ ನೋಡುತ್ತಿದ್ದಾರೆ. ಆದರೆ.... ನರ್ತಕಿ

ಎಲ್ಲಿ?—ಅವಳ ಕಾಲಸಂದುಗೆಯ ನಾದವೆಲ್ಲಿ?—ಎಲ್ಲಿ? ಎಲ್ಲರೂ ಕೇಳು ತ್ತಿದ್ದಾರೆ.

ಒಳಗೆ ಲಲಿತೆ ರಾಜಾರಾಮನೊಡನೆ ಗಾಬರಿಯಾಗಿ ಕೇಳುತ್ತಿದ್ದಳು.

" ಹೀರೆ ಬರಲಿಲ್ಲವಲ್ಲಾ ! ಇನ್ನೇನು ಮಾಡುವುದು ? "

" ನೋಡಿದೆಯಾ! ನಾನು ಹಿಂದೆಯೇ ಹೇಳಿದ್ದೆ. ನಿನ್ನ ಹೀರೆಯ ಮಲಾಮತ್ತು ಬೇಡವೆಂದು. ಆದರೆ ನೀನು ಕೇಳಿದೆಯಾ! "

" ಇನ್ನೇನು ಮಾಡುವುದು ? "

" ಮತ್ತೇನು ? ನರ್ತನವಿಲ್ಲದೆ ಸಮಾರಂಭ ಮುಗಿದುಹೋಗಲಿ ! " ಲಲಿತೆಗೆ ಆಗಲೇ ಅವಮಾನದ ಕಲ್ಪನೆಯಾದಂತಾಗಿ, " ನಿಮಗೆ ಸ್ವಲ್ಪ ವಾದರೂ ತಲೆಯಿಲ್ಲವೇ ? " ಎಂದು ಗಜರಿದಳು.

ಆಗಲೇ ಅಲ್ಲಿಗೆ ಬಂದ ರಾಜಾರಾಮನ ಮಿತ್ರವರ್ಯರೊಬ್ಬರು, " ಏನಯ್ಯಾ, ರಾಜಾರಾಮರಾವ್! ಡ್ಯಾನ್ಸರ್ ಇನ್ನೂ ಬಂದಿಲ್ಲವೇ ? " ಎಂದರು.

" ಇಲ್ಲ; ನಾವೂ ಅದೇ ವಿಷಯ ಮಾತಾಡುತ್ತಿರುವುದು. ಪ್ರಾಯಶಃ ಜ್ವರ, ಕಾಯಿಲೆ-ಗೀಯಿಲೆ ಏನಾದರೂ............... "

" ಹಾಗೇನಾದರೂ ಇದ್ದರೆ ಅವಳು ಹೇಳಿ ಕಳುಹಿಸುತ್ತಿರಲಿಲ್ಲವೇ ! " ಎಂದಳು ಲಲಿತೆ.

" ಹಾಗಾದರೆ ಈಗೇನು ಮಾಡುವುದೆನ್ನುತ್ತೀರಿ? " ಎಂದರು ಆ ಮಿತ್ರವರ್ಯರು.

" ಮಾಡುವದೇನು? ನರ್ತನವಿಲ್ಲದೆ ಸಮಾರಂಭ ಆಗಿಹೋಗಲಿ! "

"ಛೇ! ಇದು ಸರಿಯೇ? ಪ್ರೋಗ್ರಾಂ ಎಲ್ಲಾ ಇಟ್ಟಮೇಲೆ ಹೀಗೆ ಮಾಡಿದರೆ ಆದೀತೇ? ನೀವೇ ಒಂದು ಮೋಟಾರ್ ತೆಗೆದುಕೊಂಡು ಹೋಗಿ ಕರೆದುಕೊಂಡು ಬನ್ನಿ ಆಕೆಯನ್ನು."

ರಾಜಾರಾಮನು ಲಲಿತೆಯ ಮುಖವನ್ನು ನೋಡಿದನು. ಅವಳೂ ಆ ಮಿತ್ರವರ್ಯರ ಮಾತನ್ನೇ ಅನುಮೋದಿಸಿದಳು.

ಆದರೆ ರಾಜಾರಾಮನು ತಾನು ಹೋಗಲಿಲ್ಲ. ಉಪಾಯವಾಗಿ ಬೇರೊಬ್ಬನನ್ನು ಕಳುಹಿಸಿದನು.

ಹೀರೆ ನಿಜವಾಗಿಯೂ ರಾಜಾರಾಮನೇ ಬಂದು ತನ್ನನ್ನು ಕರೆದು

ಕೊಂಡು ಹೋಗಲಿ, ಎಂದು ಸುಮ್ಮನೆ ಕುಳಿತವಳಲ್ಲದೆ, ಅವಳಿಗೆ ಮತ್ತಾವ ಸಂಕಟವೂ ಬಂದಿರಲಿಲ್ಲ. ಈಗ ಬಂದವನನ್ನು ನೋಡಿ ಅವಳಿಗೆ ನಿರಾಶೆ ಯಾದರೂ, ಅಲ್ಲಿ ಹೋದಮೇಲೆ ನೋಡಿಕೊಳ್ಳೋಣ ಎಂದು ಹೊರಟಳು.

'ಹೋ! ನರ್ತಕಿ ಬಂದಳು! ಬಂದಳು!' ಎಂಬ ವಾರ್ತೆ ಚಪ್ಪರ ದೊಳಗೆ ಹರಡಿತು. ಸ್ತ್ರೀಯರು ಸೀರೆ, ಸೆರಗುಗಳನ್ನು ಸರಿಪಡಿಸಿಕೊಂಡರು. ಗಂಡಸರು ರುಮಾಲು, ವಸ್ತ್ರಗಳಕಡೆ ಲಕ್ಷ್ಯಕೊಟ್ಟರು. ಮೀಸೆಯಿದ್ದವರು ಮೀಸೆಗಳನ್ನು ನೀವಿದರೆ, ಮೀಸೆಯಿಲ್ಲದವರು ಮೀಸೆಯಿದ್ದ ಸ್ಥಳದಲ್ಲಿ ಮೂಡಿದ ಬೆವರನ್ನೊರೆಸಿಕೊಂಡರು. ನರ್ತಕಿ ಚಪ್ಪರದೊಳಗೆ ಕಾಲಿಟ್ಟಳು. ಮದುವೆಯಾಗದ ತರುಣರು ಎರಡೂ ದೃಷ್ಟಿಗಳಿಂದಲೂ ಅವಳನ್ನೇ ನೋಡು ತ್ತಿದ್ದರೂ, ಮದುವೆಯಾಗಿ ವಯಸ್ಸಾಗಿದ ರಸಿಕರು ಹಲವರು ಒಂದು ದೃಷ್ಟಿಯನ್ನು ತಮ್ಮ ಮಡದಿಗಳ ಮೇಲೂ ಒಂದು ದೃಷ್ಟಿಯನ್ನು ಅವಳ ಮೇಲೂ ಬೀರಿದ್ದರು.

ಒಂದೆಡೆ ಮೇಜು ಖುರ್ಚಿಗಳನ್ನಿಡ್ಡು ಎತ್ತರವಾಗಿ ಮಾಡಿ ರಂಗ ವನ್ನು ನಿರ್ಮಿಸಿದ್ದರು. ಹಾಡುಗಾರಿಕೆಗೆ ಅಖಿಲ ಕರ್ನಾಟಕ ಖ್ಯಾತಿಯ ಕರ್ನಾಟಕಿ ಚಿತ್ತಯಿಸಿದ್ದಳು. ಹಾರ್ಮನಿ, ತಬಲಾ, ವೀಣೆ, ಜಲತರಂಗಗಳ ಪ್ರವೀಣರೂ ಬಿಜಯಂಗೈದಿದ್ದರು. ನರ್ತಕಿ ಬಂದು ರಂಗದಮೇಲೆ ಕಾಲಿ ಡುತ್ತಲೇ ವಾದ್ಯಗಳು ಧ್ವನಿಗೊಟ್ಟವು. ಕರ್ನಾಟಕಿ ಕಂಠವನ್ನು ಸರಿಪಡಿಸಿ ಕೊಂಡಳು. ಸಭಿಕರು ನಾಣ್ಯಗಳನ್ನು ಕೈಗೆ ಚಲಾಯಿಸಿದರು. ಆದರೆ ನರ್ತಕಿಯ ಕಾಲುಗಳು ಅಲುಗಲಿಲ್ಲ.

"ಹೂಂ, ಪ್ರಾರಂಭವಾಗಲಿ! ಒನ್, ಟು, ತ್ರಿ." ಎಂದರೊಬ್ಬರು.

"ಯಾರಿಗಪ್ಪಾ, ಕಾಯುವುದು? ಪ್ರಾರಂಭಿಸಬಾರದೇ!" ಎಂದಿ ತೊಂದು ಧ್ವನಿ.

"ಹಂ, ಸುರುವಾಗಲಿ. ಥೈ ಥಕ, ಥಕ ಥೈ!" ಮತ್ತೊಬ್ಬರು ಕೂಗಿದರು.

"ಹೂಂ! ಹೂಂ! ಜಲ್ದಿ! ಜಲ್ದಿ! ಪ್ರಾರಂಭವಾಗಲಿ." ಎಂದರು ಹತ್ತಾರು ಜನರು ಏಕಪ್ರಕಾರವಾಗಿ.

ಹೀರೆ ಲಲಿತೆಯ ಮುಖವನ್ನು ದಿಟ್ಟಿಸಿದಳು.

"ಹೂಂ, ಸುರು ಮಾಡಿಯಮ್ಮ." ಎಂದಳು ಲಲಿತೆ.

ಹೀರೆ ನಸು ನಗುತ್ತಾ, "ಅಯ್ಯೋ! ನೀವೂ ಹೀಗೆ ಹೇಳುವುದೇ? ಮನೆಯ ಯಜಮಾನರು ನೋಡದಿದ್ದಮೇಲೆ ನಾನು ಕುಣಿದೇನು ಫಲ?"

ಲಲಿತೆಗೆ ಅರ್ಥವಾಯಿತು. ಅವಳು ಕೂಡಲೇ ರಾಜಾರಾಮನನ್ನರಸಿ ಕೊಂಡು ಹೊರಟಳು

"ಏನಾದರೂ ನಾನು ನರ್ತನ ನೋಡಲು ಬರುವುದಿಲ್ಲ!" ಎಂದು ರಾಜಾರಾಮನದು ಒಂದೇ ಹಟ.

ಆದರೆ ಲಲಿತೆ ಅನೇಕ ವಿಧವಾಗಿ ಬೋಧಿಸಿದಳು: "ನೀವು ಈಗ ಬಾರದಿದ್ದರೆ ಅವಳು ನರ್ತಿಸದೆ ಹಾಗೆಯೇ ಹೊರಟು ಹೋಗಿಬಿಡುತ್ತಾಳೆ. ಅವಳನ್ನು ನರ್ತನಕ್ಕೆ ನಾವೇ ಕರೆದಮೇಲೆ ಹೀಗೆ ಮಾಡುವುದು ಸಮವೇ? ಅವಳ ಮನಸ್ಸು ಎಷ್ಟು ನೋವಾಗಬಹುದು! ಬಂದವರಾದರೂ ಏನಂದಾರು? ನಕ್ಕು ನಮ್ಮ ಮುಖಕ್ಕೆ ಅಪಮಾನ ಮಾಡಿ ಹೋಗಲಿಕ್ಕಿಲ್ಲವೇ?" ಅವಳ ಮುಖವು ಕಪ್ಪಾಗಿ, ಕಣ್ಣು ಮಂಗಿಲಾಯಿತು.

"ಒಟ್ಟಾರೆ ಎಲ್ಲಿ ಹೋದರೂ ನಿನ್ನ ಉಪದ್ರ ಉಂಟೇ ಉಂಟು!" ಎಂದು ರಾಜಾರಾಮನು ಎದ್ದುಕೊಂಡು ಬಂದನು. ಆದರೆ, ಸಭೆಯಲ್ಲಿ ನಿಮಿಲಿತ ನಯನನಾಗಿಯೇ ಕುಳಿತನು.

ಗುಜು, ಗುಜು ಎಂದಿತು ಕಾಲಿನ ಗೆಜ್ಜೆ. ನರ್ತಕಿ ನರ್ತನವನ್ನು ಕೈಗೊಂಡಳು ಹಲವಾರು ಬಗೆಯ ಕುಣಿತಗಳಾದವು. ಆ ಕುಣಿತದ ಗರಗರಿಕೆ ನೋಟಕರ ಮನವನ್ನಾಕರ್ಷಿಸಿತು. ಎಲ್ಲರೂ ಆಕರ್ಷಿತರಾದರೆಂದು ಹೇಳಬರುವಂತಿಲ್ಲ. ರಂಗವು ಇಭ್ಭಾಗವಾಗುವಂತೆ ಅವಳು ನಲಿಯುವಾಗ ಅವಳ ಲಂಗವು ಸೊಂಟದಿಂದ ಮೇಲೆ ಹಾರಿದುದನ್ನು ಕಂಡು ಕೆಲವು ಸಭ್ಯರು, ನೀತಿವಂತರು ಕಣ್ಣುಗಳನ್ನು ಮುಚ್ಚಿಕೊಂಡರು. ಇನ್ನು ಹಲವರು ಅವಳ ಉಬ್ಬಿದ ವಕ್ಷಸ್ಥಳದ ಕುಣಿತವನ್ನು ಕಂಡು 'ಥೂ! ಥೂ!' ಎಂದರು. ಆದರೂ ಅದು ಅನೇಕರನ್ನು ಅನುರಂಜಿಸಿತೆಂದು ಆಗಾಗ ಕೇಳಿಬರುತ್ತಿರುವ, 'ಶಹಭಾಸ್!' 'ಒನ್ಸ್‌ಮೋರ್! 'ಹಿಯರ್! ಹಿಯರ್!' 'ಭಾಪುರೇ!' ಗಳು ಹೇಳುತ್ತಿದ್ದವು.

ಸಾಧಾರಣ ಎರಡು ತಾಸುಗಳವರೆಗೆ ನರ್ತಕಿ ನಿಲ್ಲದೆ ನಾಟ್ಯವಾಡಿದಳು. ಅವಳ ಬೆವತ ದೇಹವು ಅವಳ ಅಂಗಾಂಗಗಳ ಸೌಂದರ್ಯವನ್ನು ಅವಳ ವಸನಗಳನ್ನು ಬಿಚ್ಚಿ ಪ್ರದರ್ಶಿಸಿತು. ಸುರಿದ ಸ್ವೇದವು ಸಾಗರವನ್ನೂ ಮೀರಿ

ಪ್ರವಹಿಸಿತು. ನರ್ತಕಿ ಬಹಳವಾಗಿ ಬಳಲಿದ್ದಳು ಆದರೆ, ಸಭಿಕರಿಗೆ ಇನ್ನೂ ತೃಪ್ತಿಯುಂಟಾಗುವಂತೆ ತೋರಲಿಲ್ಲ. 'ನಿಲ್ಲಿಸ ಬೇಡಿ, ನಿಲ್ಲಿಸಬೇಡಿ' ಎಂದು ಅನೇಕ ಕಂಠಗಳು ಸಾರಿ ಒದರಿದವು. ಆದರೆ ನರ್ತಕಿಯು ಅವುಗಳಕಡೆಗೆ ಲಕ್ಷ್ಯವೀಯದೆ ಒಂದು ರಜತ ತಳಿಗೆಯನ್ನು ತೆಗೆದುಕೊಂಡು ಕುಣಿಯುತ್ತಾ, ಪ್ರತಿಯೊಬ್ಬ ಸಭಿಕರ ಮುಂದೆಯೂ ತಳಿಗೆಯನ್ನು ನೀಡತೊಡಗಿದಳು.

ಅನೇಕರಿಂದ ನರ್ತಕಿಗೆ ಮಿಸುನಿ, ಬೆಳ್ಳಿ ತಗಡುಗಳ ಸಮರ್ಪಣೆಯಾಯಿತು. ಅನೇಕರಿಗೆ ಅದು ತಮ್ಮ ಪ್ರಾಣಸಮರ್ಪಣೆಯಾದಂತೆ ತೋರಿದರೂ, ಮಯೂರಿಯಂತೆ ಆ ನರ್ತಕಿ ಯೊಸೆದು ತಮ್ಮ ಬಳಿಗೈತರುವಾಗ ಸುಮ್ಮನಿರುವುದೆಂದರೆ ಸಾಮಾನ್ಯವೇ! ನಾಲ್ಕಾರು ಜನರಮುಂದೆ ಸುಳಿದು ಹೀರೆ ಕೊನೆಗೆ ರಾಜಾರಾಮನ ಬಳಿಗೆ ಬಂದು ತಳಿಗೆಯನ್ನು ಮುಂದಕ್ಕೆ ನೀಡಿದಳು. ರಾಜಾರಾಮನು ತಾನು ಆ ದಿನ ನರ್ತನಕ್ಕೆ ಕೊಡಬೇಕಾದ ಸಂಭಾವನೆಯನ್ನೇ ಕೊಟ್ಟುಬಿಟ್ಟನು. ಅವನು ಹಾಗೆ ಕೊಡಲು ಮೋರೆಯನ್ನು ಮುಂದೆ ನೀಡಿದಾಗ, ಹೀರೆಯೂ ತನ್ನ ಮೋರೆಯನ್ನು ಮುಂದೆ ನೀಡಲು ಮರೆಯಲಿಲ್ಲ. ಆದರೆ, ರಾಜಾರಾಮನು ಮಿಂಚಿನ ವೇಗದಿಂದ ತನ್ನ ಮೊಗವನ್ನು ಹಿಂದಕ್ಕೆಳೆದುಕೊಂಡನು. ಅದರಲ್ಲೇನಾದರೂ ಕೊಂಚ ಹೆಚ್ಚು ಕಡಮೆಯಾಗುತ್ತಿದ್ದರೆ, ರಾಜಾರಾಮನು ಅಧರಗಳು 'ಘುಪ್!' ಎಂದು ಹೀರೆಯ ಅಧರಗಳ ಚುಂಬನಕ್ಕೆ ಪಾತ್ರವಾಗುತ್ತಿದ್ದವು. ಹೀರೆ ರಾಜಾರಾಮನ ಮುಂದೆ ಸಾಧಾರಣ ಅರ್ಧ ಗಂಟೆಗೂ ಅಧಿಕವಾಗಿ ತನುವಿಕಾರ, ಹಾವಭಾವ, ಹಸ್ತ ಸಂಜ್ಞೆಗಳಿಂದ ಕುಣಿದಳು. ಹಾಗೆ ಕುಣಿಯುವಾಗ ಎಷ್ಟೋ ಬಾರಿ ಅವಳು ಅಲರಂಬನನ್ನು ತನ್ನ ಸಹಾಯಕ್ಕೆ ಕರೆದಳು. ಆದರೆ, ಹಾಳಾದವನು ಒಮ್ಮೆಯಾದರೂ ಬರಬೇಕೇ! ರಾಜಾರಾಮನು ಎಲ್ಲಿಯೋ ನೋಡುತ್ತಿದ್ದನು. ಹೀರೆಗೆ ಕುಣಿದು, ಕುಣಿದು ಸಾಕಾಗಿ ಮುಂಬರಿದಳು.

ಉಳಿದ ಸಭಿಕರಲ್ಲಿ ಹೆಚ್ಚಿನವರು ರಾಜಾರಾಮನಂತೆ ಮೂರ್ಖರಲ್ಲ. ಅವರಲ್ಲಿ ಎಷ್ಟೋಮಂದಿ ರಜತ ತಳಿಗೆಗೆ ತಮ್ಮ ಅಲ್ಪಕಾಣಿಕೆ (?)ಯನ್ನು ರವಾನಿಸುವಾಗ ತಮ್ಮ ಸುಂದರ ವದನಗಳನ್ನು ಮುಂದೆ ನೀಡಿದರು. ಆದರೆ, ಹೀರೆ ಹಿಮ್ಮುಖಿಯಾದುದನ್ನು ಕಂಡು ಅವರಿಗೆ ತುಂಬಾ ಬೇಸರವಾಯಿತು. ಇನ್ನು ಕೆಲವರು ಸಿಗರೇಟು ಸೇದುತ್ತಾ ಹೊಗೆಯನ್ನು ಹೀರೆಯ ಮುಖದ ಸುತ್ತಲೂ ಹಬ್ಬಿಸಿ, ಅವಳ ಸೌಂದರ್ಯವನ್ನು ಸೇವಿಸತೊಡಗಿದ್ದರು. ಆ

ಹೊಗೆಯ ನಡುವೆ ಹೀರೆಯ ಮೋರೆ ಅವರಿಗೆ 'ಬೆಳ್ಮುಗಿಲುಗಳ ನಡುವೆ ಚಂದಿರನು ಕಂಡಂತೆ' ಕಂಡರೆ ಯಾವ ಕಬ್ಬಿಗನಿಗಾದರೂ ಅದನ್ನು ಅಲ್ಲಗಳೆಯಲಾದೀತೇ?

ಸೂರ್ಯನು ಕಡುಗೆಂಪಾದ ಸಮಯ; ಬಂದವರಲ್ಲಿ ಗಂಡಸರು ರಾಜಾರಾಮನೊಡನೆಯೂ, ಹೆಂಗಸರು ಲಲಿತೆಯೊಡನೆಯೂ, "ಹೋಗಿಬರುತ್ತೇವೆ ರಾಜಾರಾಂರಾವ್!" "ಹೋಗಿಬರುತ್ತೇವೆ ಲಲಿತಾಬಾಯಿ!" ಎಂದು ಒಬ್ಬೊಬ್ಬರಾಗಿಯೇ ಮರೆಯಾಗುತ್ತಿದ್ದರು. ಹೀರಾ ಇನ್ನೂ ನಿಂತಿದ್ದಳು. ರಾಜಾರಾಮನು ಅವಳೊಡನೆ, "ತಾವು ಪ್ರೀತಿಯಿಟ್ಟು ಇಲ್ಲಿ ಬಂದು ನರ್ತಿಸಿದುದಕ್ಕಾಗಿ ತುಂಬಾ ಧನ್ಯವಾದಗಳು!" ಎಂದವನೇ ಸರ ಸರನೆ ಒಳಕ್ಕೆ ನಡೆದುಬಿಟ್ಟ. ಅವಳ 'ಹೂಂ' ಕಾರವನ್ನು ಕೇಳಲೂ ಅಲ್ಲಿ ನಿಲ್ಲಲಿಲ್ಲ.

ಅಲ್ಲೇ ಇದ್ದ ಲಲಿತೆಮಾತ್ರ ನಗುಮೋಗದಿಂದ, "ಎಷ್ಟು ಚೆನ್ನಾಗಿ ನರ್ತಿಸಿದಿರಮ್ಮಾ!" ಎಂದಳು.

"ಹೂಂ. ನಾನು ಹಾಗೆಲ್ಲಾ ಕರೆದಲ್ಲಿಗೆಲ್ಲಾ ಹೋಗುವವಳಲ್ಲವಮ್ಮ ನನಗೆ ಬೇರೆ ಬೆಳಿಗ್ಗೆ ತಲೆಸಿಡಿತವೂ ಪ್ರಾರಂಭವಾಗಿತ್ತು. ಆದರೂ, ನೀವು ನನ್ನ ಗೆಳತಿಯೆಂಬುದರಿಂದ ಬಂದೆ. ಆದರೆ, ಇಲ್ಲಿ ಬಂದು ನೋಡಿದರೆ...."

"ಏನು! ಏನಾಯಿತು?"

"ಏನೂ ಇಲ್ಲ. ಇರಲಿ. ನಿಮ್ಮ ಯಜಮಾನರಿಗೆ ನರ್ತನದಲ್ಲಿ ಅಷ್ಟೊಂದು ರುಚಿಯಿಲ್ಲವೇ?"

"ಅವರು ಹಾಗೆಯೇ!"

"ಅವರಿಗೆ ರುಚಿಯಿಲ್ಲದಿದ್ದಮೇಲೆ ನನ್ನನ್ನೇಕೆ ಕರೆಯಿಸಿದ್ದಿರಿ?"

"ಅವರೊಬ್ಬರ ರುಚಿಯನ್ನು ನೋಡಿದರೆ ಸಾಕೇ! ನನ್ನ ರುಚಿ, ನನ್ನ ಗೆಳತಿಯರ ರುಚಿಯನ್ನು ಕೇಳುವವರಿಲ್ಲವೇ? ಇರಲಮ್ಮ; ಇನ್ನು ಯಾವಾಗಲಾದರೂ ಹೀಗೆ ಅನುಕೂಲವಾದಗ ಕರೆಯಿಸುತ್ತೇನೆ. ಬರಲು ಮರೆಯಬೇಡಿ."

ಒಳಗಿನಿಂದ ರಾಜಾರಾಮನ ಆಣತಿಯ ಧ್ವನಿ ಕೇಳಿಸುತ್ತಿತ್ತು.

"ಷೋಫರ್! ಆ ಕುಣಿತದ ಅಮ್ಮನನ್ನು ಕರೆದುಕೊಂಡು ಹೋಗಿ ಅವರ ಜೋಡಮಠದ ಮನೆಗೆ ಬಿಟ್ಟು ಬಾ!"

ಮನೆಗೆ ಬಂದ ಹೀರಾ, "ಆ ರಾಜಾರಾಮನು ನನಗೆ ಲಭಿಸದಿದ್ದರೆ ನಾನು ನೀರನ್ನೂ ಮುಟ್ಟುವುದಿಲ್ಲ." ಎಂದು ಛಂಡಿ ಹಿಡಿದಳು.

ರಾಮಗೋಪಾಲನಿಗೆ ಮಹಾಸಂಕಟ ಪ್ರಾಪ್ತವಾಯಿತು.

೨೫

ಒಂದು ಕಾಲದಲ್ಲಿ ರಥಬೀದಿಯ ಮಾಳಿಗೆಯ ಮುಂದೆ ತೂಗುತ್ತಿದ್ದ, 'ಯತಿಪತಿ ಕಾರ್ಯಾಲಯ'ದ ಬೋರ್ಡು ಈಗ ಬಾಳೆಬೈಲಿನಲ್ಲಿ ಒಂದು ಚಿಕ್ಕ ಕೋಣೆಯ ಮುಂದೆ ಗಾಳಿಗೆ ಫಟಫಟನೆ ಅಲ್ಲಾಡುತ್ತಿದೆ. ರಾಜಾರಾಮನು ಬಾಳೆಬೈಲಿನ ಶಾಂತಿಕುಂಜದಲ್ಲಿ ವಾಸಿಸಲು ಪ್ರಾರಂಭಿಸಿದ ಮೇಲೂ ಒಂದೆರಡು [illegible]ಳು ಯತಿಪತಿ ಕಾರ್ಯಾಲಯವು ರಥಬೀದಿಯಲ್ಲೇ ಇತ್ತು. ಆಮೇಲೆ ವ[illegible], 'ಅಲ್ಲಿವರೆಗೆ ಯಾರು ನಡೆದು ಸಾಯುತ್ತಾರೆ' ಎಂಬುದರಿಂದ ಯತಿಪತಿ ಕಾರ್ಯಾಲಯವು ಬಾಳೇಬೈಲಿಗೇ ಬಂತು. ಬಾಳೆಬೈಲಿಗೆ ಬಂದ ಮೇಲೂ ರಾಜಾರಾಮನ ಪತ್ರಿಕಾ ವ್ಯವಸಾಯವು ಸುಗಮವಾಗಿ ಸಾಗಲಿಲ್ಲ. ಈಗ ಮನೆಯಾಡಳಿತೆಯ ಭಾರವು ಹೆಚ್ಚಾಗಿ ಅವನ ಮೇಲೆ ಬಿದ್ದುದರಿಂದ ಮೂರು ಹೊತ್ತೂ ಅವನು ಮನೆಯಲ್ಲಿಯೇ ಇರಬೇಕಾಗಿತ್ತು. ಒಮ್ಮೆ, 'ಈ ಪತ್ರಿಕೆ ಹೊರಡಿಸುವುದನ್ನು ನಿಲ್ಲಿಸೋಣವೇ?' ಎಂದು ಪರ್ಯಾಲೋಚಿಸಿದನು. ಆದರೆ ಇದಕ್ಕೆ ಪ್ರತಿಕೂಲವಾಗಿ ಎರಡು ಕಾರಣಗಳಿದ್ದವು. ಮೊದಲನೆಯದಾಗಿ ಒಮ್ಮೆ ಕೈಗೊಂಡ ಪತ್ರಿಕೋದ್ಯೋಗವನ್ನು ಯಾವ ಹೇತುಗಳಿಗಾಗಿಯೂ ಅವನಿಗೆ ತ್ಯಜಿಸುವ ಮನಸ್ಸಿರಲಿಲ್ಲ. ಅಲ್ಲದೆ, ಮನೆ ವ್ಯಾಪಾರ, ದುರುಸ್ತು, ಗೃಹಪ್ರವೇಶ ಸಮಾರಂಭಗಳಿಗಾಗಿ ಆತನು ಎಷ್ಟೋ ಹಣವನ್ನು ಕೈಬಿಡಬೇಕಾಯಿತು. ಅರ್ವಾಚೀನತೆಗೆ ಮನಮೂರಿ ಮೋಟಾರ್ ಕಾರ್, ರೇಡಿಯೋಗಳನ್ನು ಕೊಂಡುದರಿಂದ ಅರ್ಧ ಲಕ್ಷವು ಅರ್ಧಕ್ಕರ್ಧ ಕಡಮೆಯಾಯಿತು. ಈ ನ್ಯೂನತೆಯನ್ನು ಹೋಗಲಾಡಿಸುವುದಕ್ಕೆ ಪತ್ರಿಕೆಯು ಬೆಂಬಲಗೊಡುತ್ತಿದ್ದುದರಿಂದ ಅದನ್ನು 'ಬೇಡ' ಎಂದವನು ತಳ್ಳಿಹಾಕಲಿಲ್ಲ. ಆದರೆ ತಾನೇ ಆ ಕಾರ್ಯವನ್ನು ಕೈಗೊಳ್ಳುವುದು ಅಶಕ್ಯವಾಗಲು ಪತ್ರಿಕೆಯಲ್ಲಿ ಜಾಹೀರಾತು ಪ್ರಕಟಿಸಿದನು. ಪತ್ರಿಕೆ ಕರ್ನಾಟಕದ ಮೂಲೆ ಮೂಲೆಗಳಿಗೂ ಸಂಚರಿಸಿ ನೂರಾರು ಅರ್ಜಿಗಳನ್ನು ಕರತಂದಿತು. ಬಿ. ಎ., ಎಂ. ಎ. ಕಲಿತು ಕಾಲೇಜಿನಲ್ಲಿ ಉಪನ್ಯಾಸ ಹೊಡೆಯಬೇಕಾಗಿದ್ದ ಜಂಟಲ್‌ಮೇನ್

ಗಳೂ ಪತ್ರಿಕೋದ್ಯೋಗಕ್ಕೆ ಅರ್ಜಿ ಹಾಕಿದ್ದುದನ್ನು ಕಂಡು ರಾಜಾರಾಮನಿಗೆ, "ಅಯ್ಯೋ! ಉದ್ಯೋಗದ ಅವಸ್ಥೆಯೇ?" ಎಂದು ಗೊತ್ತಾಯಿತು. ಮೊದಲೇ ಹೇಳಿದಂತೆ ಅರ್ಜಿಗಳೇನೋ ನೂರಾರು ಇದ್ದವು. ಅರ್ಜಿದಾರರು ತಮ್ಮ ಮಹತ್ತ್ವ, ಯೋಗ್ಯತೆಗಳ ಕುರಿತು ತಾವೇ ತಮ್ಮ ಬೆನ್ನು ಚಪ್ಪರಿಸಿ ಬರೆದು ಕಳುಹಿಸಿದ್ದರು. ಕೆಲವರು ಕಾವ್ಯರೂಪವಾಗಿಯೇ ಅರ್ಜಿಯನ್ನು ಬರೆದಿದ್ದರು. ಇನ್ನು ಕೆಲವರ ಬರಹಗಳು ಪ್ರಾಸಾನುಪ್ರಾಸಗಳಿಂದ ನಿಬಿಡಿತವಾಗಿದ್ದವು.ಉಳಿದವರು ಮುದ್ದಣನ ರಾಮಾಶ್ವಮೇಧದ ಶೈಲಿಯನ್ನನುಕರಿಸಿದ್ದರು. ಹಾಸ್ಯವೇ ಜೀವಾಳವಾಗಿದ್ದವರು, ಸುಖಾತ್ಮಕವಾದಿಗಳು, ದುಃಖಾತ್ಮಕವಾದಿಗಳು ಸರ್ವರೂ ತಂತಮ್ಮ ಪಾಂಡಿತ್ಯವನ್ನು ತಂತಮ್ಮ ಅರ್ಜಿಗಳಲ್ಲಿ ತೋರ್ಪಡಿಸಿಕೊಂಡಿದ್ದರು. ಆದರೆ, ರಾಜಾರಾಮನ, 'ಈ ಮೊದಲು ಪತ್ರಿಕೋದ್ಯೋಗಿಗಳಾಗಿ ಅನುಭವವಿದ್ದವರಿಗೆ ಪ್ರಥಮ ಸ್ಥಾನ ಕೊಡಲಾದೀತು' ಎಂಬ ಅಂಶಕ್ಕೆ ಯಾವ ಪುಣ್ಯಾತ್ಮನೂ ಉತ್ತರಗೊಟ್ಟಿರಲಿಲ್ಲ. ಒಂದೊಂದೇ ಅರ್ಜಿಯನ್ನು ಓದಿ ಕೆಳಗಿಡುತ್ತಾ, ಇವುಗಳಲ್ಲಿ ಯಾವ ಅರ್ಜಿಯನ್ನು ಆರಿಸೋಣ, ಯಾವುದನ್ನು ಜಾರಿಸೋಣ, ಎಂದು ಆಲೋಚಿಸುತ್ತಿದ್ದಂತೆಯೇ ಒಂದು ಅರ್ಜಿ ಅವನ ಕಣ್ಣಿಗೆ ಬಿದ್ದಿತು. ರಾಮಗೋಪಾಲ ಎಂದು ಹೆಸರು. ಮೂರು ವರ್ಷ ಪತ್ರಿಕೋದ್ಯೋಗದ ಅನುಭವ ಎಂದಿದೆ. ರಾಮಗೋಪಾಲನೆಂದರೆ ಯಾರು? ಆ ಸೂಳೆಯ ಗಂಡನಲ್ಲವೇ! ಎಂದು ಕೇಳಿತು ಮನಸ್ಸು. ಸೂಳೆಗೆ ಗಂಡನೇ! ಎಂದು ನಕ್ಕಿತು. ಈಗ ಹೇಗಾದರೇನು? ಒಂದು ಕಾಲದಲ್ಲಿ ಗಂಡನಾಗಿದ್ದನೆಂಬುದನ್ನು ಉಲ್ಲಂಘಿಸುವುದು ಶಕ್ಯವೇ? ಎಂದಿತು ಮರುಕ್ಷಣವೇ. ಸೂಳೆಯ ಗಂಡ!—ಇವನನ್ನು ನೇಮಿಸಲೋ, ಬೇಡವೋ ಎಂದು ಮನಸ್ಸು ಹೊಯ್ದಾಡುತ್ತಿರುವಾಗಲೇ, ಕಾರ್ಯನೇಮಕಕ್ಕೆ ಪತಿತೆಯ ಗಂಡ, ಪತಿವ್ರತೆಯ ಗಂಡ ಎಂದಿದೆಯೇ? ಎಂದು ತೀರ್ಮಾನಿಸಿ, 'ಸಂಪೂರ್ಣ ವಿವರಗಳೊಂದಿಗೆ ಸ್ವತಃ ಬಂದು ನಮ್ಮನ್ನು ಕಾಣಿ' ಎಂದು ರಾಮಗೋಪಾಲನಿಗೆ ಪತ್ರ ಬರೆದು ಹಾಕಿಯೂ ಬಿಟ್ಟನು. ಉಳಿದವರ ಅರ್ಜಿಗಳು ಕಸದ ಕುಕ್ಕೆಯ ಭಾರವನ್ನು ಹೆಚ್ಚಿಸಿದವು.

ಮೂರು ದಿನದ ಮೇಲೆ ಒಂದು ಸಂಜೆ, ರಾಜಾರಾಮನು ಪತ್ರಿಕಾಲಯದಲ್ಲಿ 'ಫಾಯ್ಲ್' ನೋಡುವುದರಲ್ಲಿ ಮಗ್ನನಾಗಿದ್ದಾಗ, "ನಮಸ್ಕಾರ!" ಎಂದಿತು ಒಂದು ಧ್ವನಿ.

ರಾಜಾರಾಮನು ತಲೆಯೆತ್ತಿ ಪ್ರತಿನಮಸ್ಕರಿಸಿ, ಖುರ್ಚಿಯನ್ನು ತೋರಿಸಿದನು. ರಾಮಗೋಪಾಲನು ಆಸೀನನಾದನು.

" ತಮ್ಮ ಪತ್ರ ನಿನ್ನೆ ತಲಪಿತು " ಎಂದನು.

" ತಾವು ಹೀರಾಸಾನಿಯ ನಾಯಕರಲ್ಲವೇ ? "

" ಹೂಂ " ಎಂದನು ಮುಗುಳು ನಗುತ್ತಾ ರಾಮಗೋಪಾಲ.

" ತಮಗೆ ಪತ್ರಿಕೋದ್ಯೋಗದ ಅನುಭವವಿದೆ ಎಂದು ಬರೆದಿದ್ದೀರಲ್ಲಾ! ಎಲ್ಲಿ? ಹೇಗೆ ? "

" ಅದು ಮುತ್ತಾತನ ಕಾಲದ ಕಥೆ; ಅನುಭವ! ನಾನು ಬೆಂಗಳೂರಿನ 'ಕನ್ನಡವಕ್ಕಿ ಕಾರ್ಯಾಲಯ'ದಲ್ಲಿ ಮೂರು ವರ್ಷ ಉಪಸಂಪಾದಕನಾಗಿ ಇದ್ದೆ. ಅದರ ಸರ್ಟಿಫಿಕೇಟು ಇಲ್ಲಿದೆ " ಎಂದು ಕೋಟಿನ ಒಳಜೇಬಿಗೆ ಕೈ ಹಾಕಿ ಒಂದು ಸುರುಳಿ ಕಾಗದವನ್ನು ಹೊರದೆಗೆದನು ರಾಮಗೋಪಾಲ.

ಆ ಸುರುಳಿ ಕಾಗದವನ್ನು ಬಿಡಿಸಿ ನೋಡುತ್ತಾ ರಾಜಾರಾಮನು, " ಆ ಮೇಲೆ ಏಕೆ ಅಲ್ಲಿಂದ ಬಿಟ್ಟು ಬಂದಿರಿ ? ಏನಾದರೂ ಜಗಳಗಿಗಳ ಬಂತೋ ? "

" ಛೀ! ಹಾಗೇನೂ ಇಲ್ಲ. ಹಾಗೆಲ್ಲಾ ಜಗಳ-ಗಿಗಳ ಮಾಡುವ ಅಭ್ಯಾಸವೇ ನನಗಿಲ್ಲ. "

" ಅಲ್ಲ; ನೀವು ನಮ್ಮ ಪತ್ರಿಕಾಲಯದಿಂದಲೂ ಹಾಗೆಯೇ ಬಿಟ್ಟು ಹೋದರೆ?" ಎಂದು ಕೇಳಿದ. " ನೀವು ನಮ್ಮ ಪತ್ರಿಕೆ ಬದುಕಿ ಉಳಿಯುವಷ್ಟು ಕಾಲವೂ ನಮ್ಮ ಆಫೀಸಿನಲ್ಲಿ ಉಳಿಯಬೇಕು. "

" ಓ, ಯಸ್. ಅದಕ್ಕಡ್ಡಿಯಿಲ್ಲ. ಅಂದರೆ, ನಾನು ಕನ್ನಡವಕ್ಕಿಯನ್ನು ಬಿಟ್ಟು ಬರಲು ಕಾರಣ ಇದು. ನನ್ನ ಅಪ್ಪ-ಅಮ್ಮನಿಗೆ, ನನಗೆ ಮದುವೆ ಮಾಡುವ ಆಲೋಚನೆಯಾಯಿತು. ಹಾಗಾಗಿ ಕಾಗದ ಬರೆಯಿಸಿ ಊರಿಗೆ ಕರೆಯಿಸಿಕೊಂಡರು. ನನ್ನ ಮದುವೆಯಿಂದ, ನನ್ನ ಅಪ್ಪ-ಅಮ್ಮನಿಗೆ ಮರಣವಾಯಿತು. ಆ ಮೇಲೆ ಮನೆಯ ಭಾರ ಬಿದ್ದುದರಿಂದ ಪುನಃ ಬೆಂಗಳೂರಿಗೆ ಹೋಗಲಾಗಲಿಲ್ಲ. "

" ಹಾಗೋ ? "

" ಹೂಂ ; ಅಷ್ಟೇ ! "

" ಇರಲಿ ; ನೀವು ಬರೆಯುತ್ತಿರೋ ? ಇಷ್ಟರವರೆಗೆ ಏನಾದರೂ ಪ್ರಕಟವಾಗಿದೆಯೋ ? "

“ ಅಯ್ಯೋ! ಗೊತ್ತಿಲ್ಲವೇ? ಪತ್ರಿಕೋದ್ಯೋಗಿಗಳಾದ ನಿಮಗದು ಗೊತ್ತಿರಲೇಬೇಕಿತ್ತು. ಇರಲಿ, ಚಿಂತಿಲ್ಲ. ಹೇಳುತ್ತೇನೆ. ರಾಷ್ಟ್ರಬಂಧು, ಬಡವರಬಂಧು, ಸಮಾಜ, ಪ್ರಕಾಶ, ಉಷಾ, ಮುಂತಾದ ಪತ್ರಿಕೆಗಳಲ್ಲಿ ನವಗಿರಿ ರಾಮಗೋಪಾಲಯ್ಯ ಎಂಬ ಹೆಸರಿನಿಂದ ನನ್ನ ಎಷ್ಟೋ ಕತೆ, ಕವಿತೆಗಳು ಅಚ್ಚಾಗಿವೆ.”

“ ಹೋ! ಅಂಕಿತನಾಮವನ್ನಿಟ್ಟುಕೊಂಡು ಬರೆಯುತ್ತಿರೋ? ಅದೇ ಗೊತ್ತಾಗದಿರಲು ಕಾರಣ. ನವಗಿರಿ ಎಂದೇಕೆ ಇಟ್ಟುಕೊಂಡಿದ್ದೀರಿ. ನೀವು ಹೊಸಬೆಟ್ಟು ಕಡೆಯವರೋ?”

“ ಹೂಂ!”

“ ಇನ್ನೊಂದು ಪ್ರಶ್ನೆ! ನಿಮಗೆ ಚಿತ್ರ ಬಿಡಿಸಲು ಬರುತ್ತದೆಯೋ?”

“ ಮನೆಯಲ್ಲಿ ಒಂದು ದೊಡ್ಡ ‘ಆಲ್ಬಮ್’ ಇದೆ. ನೀವು ಅಪೇಕ್ಷಿಸುವುದಾದರೆ, ಬೇಕಾದರೆ ತರುತ್ತೇನೆ.”

“ ಮರೆಯದೆ ನಾಳೆ ಬರುವಾಗ ತನ್ನಿ. ಹಾಗಾದರೆ ಇನ್ನೇನೂ ಆತಂಕವೂ ಇಲ್ಲ. ನಿಮ್ಮನ್ನು ಸಂಪಾದಕನ ಸ್ಥಾನದಲ್ಲಿ ನೇಮಿಸಿದ್ದೇನೆ.”

“ ಹಾಗಾದರೆ ನಾನು ಬರಲೇ?”

“ ತಡೆಯಿರಿ! ಪ್ರಧಾನ ವಿಷಯಕ್ಕೇ ನಾವು ಬರಲಿಲ್ಲ. ಸಂಬಳದ ಕುರಿತು ತೀರ್ಮಾನವಾಗಬೇಡವೆ?”

“ ಸಂಬಳಕ್ಕೋಸುಗ ನಾನು ಬರಲಿಲ್ಲ. ನನ್ನ ಪ್ರಧಾನೇಚ್ಛೆ ಭಾಷೋದ್ಧಾರ! ಪ್ರಧಾನ ಗುರಿ ಭಾಷಾಸೇವೆ!”

“ ಸುಮ್ಮನಿರಿಯಯ್ಯಾ! ಭಾಷೋದ್ಧಾರ, ಭಾಷಾಸೇವೆ ಎಂದು ಧರ್ಮಾರ್ಥವಾಗಿ ಕೆಲಸಮಾಡುವವರು ಎಷ್ಟುಮಂದಿ ಇದ್ದಾರೆ, ನಮ್ಮ ಕನ್ನಡನಾಡಿನಲ್ಲಿ, ನೋಡೋಣ!”

ಈ ಮಾತಿನ ಸತ್ಯತೆ ಹೊಳೆದುಹೋದುದರಿಂದ ರಾಮಗೋಪಾಲನಿಗೆ ನುಡಿಗಳು ಸೂಸಲಿಲ್ಲ.

“ ಅಂಥ ದೊಡ್ಡ ಮಾತುಗಳೆಲ್ಲಾ ಹಾಗಿರಲಿ. ನಿಮಗೆ ಸಂಬಳವೆಷ್ಟು ಸಿಗಬೇಕು?”

“ನಾನೇನು ಹೇಳಲಿ?”

“ಹೇಳಿ, ಆದರಲ್ಲೇನೂ ಬೇಸರವಿಲ್ಲ.”

ರಾಮಗೋಪಾಲನು ಮತ್ತೂ ಮೌನವಾಗಿದ್ದನು.

"ಹಾಗಾದರೆ, ನಾನು ಹೇಳುತ್ತೇನೆ. ನೋಡಿ! ನಾಲ್ಕು ತಿಂಗಳ ಮೊದಲು ನನ್ನ ಸ್ನೇಹಿತರೊಬ್ಬರು ಸಂಪಾದಕರಾಗಿದ್ದರು. ಅವರಿಗೆ ನಾನು ತಿಂಗಳಿಗೆ ನಲುವತ್ತೈದರ ಹಾಗೆ ವೇತನ ಕೊಡುತ್ತಿದ್ದೆ."

". . . . ."

"ಏನು?"

"ನನಗೆ ನೀವು ಕೊಟ್ಟಷ್ಟೇ ಸಾಕು."

"ಹಾಗಾದರೆ, ಸರಿ; ನಾಳೆಯಿಂದಲೇ ಡ್ಯೂಟಿ ವಹಿಸಿಕೊಳ್ಳಿ."

"ಯಾವುದಕ್ಕೂ ನಾನೀಗ ಬರುತ್ತೇನೆ. ಕತ್ತಲಾಗಲಿಕ್ಕಾಯಿತು."

"ನಿಲ್ಲಿರಪ್ಪ; ಏನು ಹಾಗೆ ಅವಸರ ನಿಮಗೆ? ಕಾಫಿಗೆ ಹೋಗಿದ್ದಾನೆ. ಈಗ ಬಂದೀತು."

ಮಾತು ಮುಗಿಯುವಷ್ಟರಲ್ಲಿ ಕಾಫಿ, ತಿಂಡಿಯ ಗ್ಲಾಸ್, ಪ್ಲೇಟುಗಳು ಬಂದವು. ಕಾಫಿ, ತಿಂಡಿ ಬಂದಾದಾಗ, ಹೊರಗೆ ಮಾರ್ಗದಲ್ಲಿ ಸಾಲಾಗಿ ನಿಂತಿದ್ದ ಹಲವಾರು ವಿದ್ಯುದ್ದೀಪಗಳು ಝುಗಝುಗಿಸತೊಡಗಿದ್ದವು. ಸೂರ್ಯನು ಇನ್ನೂ ಸಂಪೂರ್ಣವಾಗಿ ಅದರ್ಶಿತನಾಗಿರದಿದ್ದರೂ, ಬೆಳಕು ತೊಲಗಿ ಹೋಗಿತ್ತು. ಸೂರ್ಯನು ಎರಚಿದ ಓಕುಳಿ, ಸಕಲ ದಿಙ್ಮಂಡಲ ವನ್ನು ವ್ಯಾಪಿಸಿ, ಪಲಾಯನವೆಸಗುತ್ತಿದ್ದ ಮೋಡಗಳ ಬೆಂಬತ್ತಿ, ಸಾಗರ ದೊಳಗೆ ಇಣಿಕಿ, ಪಶ್ಚಿಮಪ್ರೋಕ್ಷಿಸಿದ ತನ್ನ ಕೆಂಬಣ್ಣವನ್ನು ನೋಡುತ್ತಿತ್ತು. ಆಕಾಶವೆಲ್ಲವೂ ಸಂಜೆಗೆಂಪಿನಿಂದ ಅರುಣಾಂಬು ಸುರಿದ ರಣರಂಗದಂತೆ ನೋಡಲು ಭಯಂಕರವಾಗಿತ್ತು. ಗೂಡು ಸೇರುವ ಕಾಕಾಳಿಯೊಂದಿಗೆ, ಗೂಡಿಂದ ಆಗ ತಾನೇ ಹೊರಟಿದ್ದ, ಗಬ್ಬಿಲ, ಪೇಚಕಾಳಿಯು ರಣರಂಗಕ್ಕೆ ನಡೆತರುವ ಎರಡು ಕರಿಸೇನೆಯಂತೆ ಕಾಣುತ್ತಿತ್ತು.

ಬೀಸುತ್ತಿತ್ತು ತಂಗಾಳಿ! ಅದರ ತೀಟಕ್ಕೆ ಬಣ್ಣದ ಕೊಲ್ಲಣಿಗೆ ಮೆಲ್ಲ ಮೆಲ್ಲನೆ ಚಂಚಲವಾಗಿ ಚಲಿಸತೊಡಗಿತು. ಚೆನ್ನಾಗಿ ಪರೀಕ್ಷಿಸಿ ನೋಡಿದರೆ, ಅಷ್ಟ ದಿಕ್ಕುಗಳಿಂದಲೂ ಕರಿ ಛಾಯೆ ಒಯ್ಯೊಯ್ಯನೆ ಹೊರಹೊರಡುವುದು. ಕಾಣುತ್ತಿತ್ತು. ಕುಮುದಾರಿಯು ಕಡಲ ತೆರೆದ ಬಾಯಿಯೊಳಗೆ ಇಳಿದು ಹೋದನು. ಬೈಗೂ, ಬಣ್ಣವೂ, ಕ್ಷಿಪ್ರದಲ್ಲೇ ಅದನ್ನು ಹಿಂಬಾಲಿಸಿತ್ತು. ಕತ್ತಲೆಯು ನಾಲ್ಕೂ ದಿಕ್ಕಿನಿಂದೋಡಿ ಬಂದು ಭೂ, ಗಗನವನ್ನಪ್ಪಿಕೊಂಡಿತು

ಕೊಂಚಕಾಲ ಎಲ್ಲವೂ ಮೌನವಾಗಿತ್ತು, ದಿಗಂಬರಾಕಾಶವನ್ನು ನೋಡಿ ಮರ, ಗಿಡ, ಬಳ್ಳಿಗಳು 'ಛಿಕ್! ಛಿಕ್! ಎಂದು ತಲೆಗೊಡಹಿದವು. ಗಗನ ದೇವಿ ತನ್ನ ದೃಷ್ಟಿಗಳನ್ನರಳಿಸಿ ನೋಡಿದಳು. ಬೈಗುಮಲ್ಲಿಗೆಳರಳಿ ನಕ್ಕು ಅಲೆದಾಡುತ್ತಿದ್ದವು. ಸ್ವಲ್ಪಹೊತ್ತಿನಲ್ಲೇ ಗಗನಮಂಡಲವೆಲ್ಲವೂ ತಾರಾ ಭೂಷಿತವಾಯಿತು. ಎಲ್ಲವನ್ನೂ ಮಿಗಿಸಿ, ದೂರದಲ್ಲಿ, ರೋದೋಂತರದಲ್ಲಿ, ಕಡಲಣುಗ,, ಶೋಭಾಚಂದಿರನು ಮಧುರ ಮಂದಸ್ಮಿತದಿಂದ, ಬಂಧುರಾ ಕಾರದಿಂದ ಉದಯಿಸಿ ಬರುತ್ತಿದ್ದನು.

ರಾಜಾರಾಮನೂ, ರಾಮಗೋಪಾಲನೂ ಶಾಂತಿಕುಂಜದ ಬಳಿಗಾಗಮಿ ಸಿದ್ದರು.

"ಹಾಗಾದರೆ, ನಮಸ್ಕಾರ!" ಎಂದಿತು ರಾಮಗೋಪಾಲನ ಧ್ವನಿ.

"ಹುಂ, ನಮಸ್ಕಾರ! ಹಾಗಾದರೆ ನಾಳೆಯಿಂದಲೇ ಡ್ಯೂಟಿ ವಹಿಸಿ ಕೊಳ್ಳುತ್ತೀರಲಿವೇ?"

"ಅಡ್ಡಿಯಿಲ್ಲ."

ರಾಮಗೋಪಾಲನು ವಂದಿಸಿ ಹೊರಟುಹೋದನು. ರಾಜಾರಾಮನು ಗೇಟಿನೊಳಗಾದನು.

ಮರುಮುಂಜಾನೆಯೇ ರಾಮಗೋಪಾಲನು, "ರಾಯರಿದ್ದಾರೆಯೇ? ಅಮ್ಮಾ!" ಎಂದು ಕೇಳುತ್ತಾ, ಶಾಂತಿಕುಂಜಕ್ಕೇ ಬಂದನು.

"ಹೋ! ಇದ್ದೇನೆ." ಎಂದು ಒಳಗಣಿನಿಂದಲೇ ರಾಜಾರಾಮನು ಉತ್ತರಗೊಟ್ಟನು.

"ಏನು? ಪೂಜೆಯಲ್ಲಿದ್ದೀರಾ!"

"ಹೆಚ್ಚು ಸಮಯವಿಲ್ಲ; ಒಂದೈದು ನಿಮಿಷ............!"

"ಆಗಲಿ; ಆಗಲಿ;" ಎನ್ನುತ್ತಾ ರಾಮಗೋಪಾಲನು ಜಗಲಿಯಲ್ಲಿದ್ದ ಖುರ್ಚಿಯಮೇಲೆ ಕುಳಿತನು. ಪಾಚೀದೆಸೆಯಲ್ಲಿ ಅರುಣರಾಗವು ಇನ್ನೂ ಮಾಸಿರಲಿಲ್ಲ, ಕಾಗೆ, ಕುಕ್ಕುಟಗಳು ಕೂಗಿ ಮೌನವಾಗಿದ್ದರೂ, ಉಳಿ ದೆಷ್ಟೋ ಅಸಂಖ್ಯಾತ ಹಕ್ಕಿಗಳ ಕೀಚುಕೀಚೆಂಬ ಮಧುರಾಲಾಪ ಹೊದರು ಗಳ ನಡುವಣಿಂದ, ಮರಗಳ ಮೇಲಿಂದ ಮಾಡಿನ ಸೂರಿನಿಂದ ಕೇಳಿ ಬರುತ್ತಿತ್ತು. ಇದರ ಜೊತೆಗೆ ರಾಜಾರಾಮನ ಪೂಜಾರಾಧನೆಯು ಕಾಲದಲ್ಲಿ

ಬಡೆಯುವ ಕಂಸಾಳದ 'ಢಣ! ಢಣ!' ರವವು ಮನೋಹರವಾಗಿ ಕೇಳಿ ಬರುತ್ತಿತ್ತು.

"ನೀವು ಇಷ್ಟು ಬೇಗನೇ ಬಂದೀರೆಂದು ಭಾವಿಸಲಿಲ್ಲ," ಎಂದನು ರಾಜಾರಾಮನು ಜಗಲಿಗೆ ಬರುತ್ತಾ.

"ಓ! ಅದು ನನ್ನ ಅಭ್ಯಾಸವೇ ಹಾಗೆ. ಹೇಳಿದ ಸಮಯಕ್ಕಿಂತಲೂ ಒಂದು ಗಂಟೆ ಮುಂಚೆಯೇ ಹೋಗುವುದು."

"ಒಳಗೆ ಬನ್ನಿ! ಸ್ವಲ್ಪ ಕಾಫಿ ತೆಗೆದುಕೊಳ್ಳಿ."

"ಛೇ! ಛೇ! ನನಗೆ ಕಾಫಿ ಕುಡಿದರೆ ದೇಹಕ್ಕೆ ಆಗುವುದಿಲ್ಲ."

"ಕಾಫಿಯಾಗದಿದ್ದರೆ, ಹಾಲಿದೆ. ತೆಗೆದುಕೊಳ್ಳಿ, ಬನ್ನಿ" ಎಂದು ಒಳಗೆ ಕರೆದುಕೊಂಡು ಬಂದನು.

ನಡುಮನೆಯಲ್ಲಿದ್ದ ಎರಡು ಮಣೆಗಳ ಮೇಲೆ ಇಬ್ಬರೂ ಕುಳಿತರು. ಎದುರು ಬಾಳೆಯೆಲೆಯಲ್ಲಿ ಮಸಾಲೆ ದೋಸೆಗಳು ಗಮಗಮಿಸುತ್ತಿದ್ದವು. ಇಬ್ಬರೂ ಸೇರಿ ಅರ್ಧಡಜನ್ ಮಸಾಲೆಗೆ ಬಾಯಿಗೊಟ್ಟರು. ಒಂದು ಕುತ್ತಿಯಷ್ಟು ಕಾಫಿ, ಹಾಲನ್ನು ಹೀರಿದರು.

ಸಿಗರೇಟು ಸೇದುತ್ತಾ, ಮಣೆಯಿಂದ ಮೇಲೆದ್ದಾಗ ಬಾಲಸೂರ್ಯನು ಆಗ ತಾನೇ ಉದಯ ದೆಸೆಯಲ್ಲಿ ಥಳಥಳಿಸುತ್ತಿದ್ದ.

"ಸ್ವಲ್ಪ ನಿಲ್ಲಿ; ಡ್ರೆಸ್ ಮಾಡಿಕೊಂಡು ಬರುತ್ತೇನೆ" ಎಂದು ರಾಜಾರಾಮ ಧಡಧಡನೆ ಉಪ್ಪರಿಗೆಯ ಮೆಟ್ಟಿಲನ್ನೇರಿ, ಹಾಗೆಯೇ ಸದ್ದುಮಾಡುತ್ತಾ ಕೆಳಗಿಳಿದು ಬಂದ. ಇಬ್ಬರೂ ಹೊರಟರು. ರಾಜಾರಾಮನ ನಾಯಿ, ಅವರನ್ನು ಗೇಟಿನ ತನಕ ಹಿಂಬಾಲಿಸಿ ಮರಳಿತು.

ಶಾಂತಿಕ್ಕುಂಜದಿಂದ ಯತಿಪತಿ ಕಾರ್ಯಾಲಯಕ್ಕೆ ಹೆಚ್ಚೇನು ದೂರವಿಲ್ಲ. ಅರ್ಧ ಫರ್ಲಾಂಗು ಇರಬಹುದು. ಇಬ್ಬರೂ ಪಾದರಕ್ಷೆ ಚಪರಪನೆ ಸದ್ದಾಗುವಂತೆ ನಡೆದು, ಕಾರ್ಯಾಲಯದ ಬಳಿಗೆ ಬಂದಾಗ ಸೂರ್ಯನ ಚೆಂಗಿರಣಗಳ ಕಾವೇರತೊಡಗಿತ್ತು.

ಬಾಗಿಲು ತೆರೆದು ಇಬ್ಬರೂ ಒಳಹೊಕ್ಕರು. ರಾಜಾರಾಮನು ರಾಮಗೋಪಾಲನನ್ನು ಉದ್ದೇಶಿಸುತ್ತಾ, "ಈ ತಿಂಗಳ ಸಂಚಿಕೆಯ ಮಟ್ಟಿಗೆ ನಿಮಗೇನೂ ಕೆಲಸವಿಲ್ಲ. ಪ್ರೆಸ್ಸಿನಿಂದ ಸಂಚಿಕೆಯನ್ನು ಆಳಿನ ಕೈಲಿ ಹೊರಿಸಿಕೊಂಡು ಬಂದರಾಯಿತು. ಬಂದುದನ್ನು ತಲುಪಿಸಬೇಕಾದವರಿಗೆ

ತಲಪಿಸುವುದೊಂದು ಬಾಕಿ ನೋಡಿ, ಏಜಂಟರ ಪಟ್ಟಿಯಿಲ್ಲಿದೆ. ಅದು ಚಂದಾದಾರರ ಪಟ್ಟಿ. ಜಾಹೀರಾತುದಾರರ ಪಟ್ಟಿ ಕಪಾಟಿನಲ್ಲಿದೆ; ಜಾಹೀರಾತುದಾರರಿಗೂ, ಒಂದೊಂದು ಪ್ರತಿಯನ್ನು ಧರ್ಮಾರ್ಥವಾಗಿ ಕಳುಹಿಸುವ ಏರ್ಪಾಡು ಮಾಡಿಕೊಂಡಿದ್ದೇವೆ.'' ಎಂದು ಮುಂತಾಗಿ ಒಂದೊಂದನ್ನೇ ತೋರಿಸಿದ.

ಅಂದಿನಿಂದ ರಾಮಗೋಪಾಲ 'ಯತಿಪತಿ'ಯ ಸಂಪಾದಕನಾದ. ರಾಜಾರಾಮನು ಪೂರ್ವದಂತೆ ಪ್ರಕಾಶಕನಾದ. ಆದರೆ ಫಲತಃ, ಸಂಪಾದಕ-ಪ್ರಕಾಶಕ, ಇಬ್ಬರ ಕೆಲಸವನ್ನೂ ಮಾಡುತ್ತಿದ್ದವನು ರಾಮಗೋಪಾಲನೇ! ಆದರೆ ರಾಜಾರಾಮನಿಗೆ ಯಾವ ರೀತಿಯಿಂದಾದರೂ ಪತ್ರಿಕೆಯಲ್ಲಿ ತನ್ನ ಹೆಸರನ್ನು ಕಾಣಬೇಕು ಎಂಬುದರಿಂದ ಪ್ರಕಾಶಕನ ಸ್ಥಾನದಲ್ಲಿ ತನ್ನ ಹೆಸರನ್ನು ಸೇರಿಸುತ್ತಿದ್ದನು.

ಮೊದಮೊದಲು ರಾಜಾರಾಮನು ರಾಮಗೋಪಾಲನ ಮೇಲೆ ಭರವಸೆಯಿಲ್ಲದೆ ಪ್ರತಿಯೊಂದು ವಿಷಯದಲ್ಲಿಯೂ ತಪಾಸಣೆ ಮಾಡುತ್ತಿದ್ದನು. ಆದರೆ ಬರಬರುತ್ತಾ ಲೇಖನಗಳ ಆಯ್ಕೆಯಲ್ಲಿಯೂ, ಅಗ್ರಲೇಖಗಳನ್ನು ಬರೆಯುವದರಲ್ಲಿಯೂ, ಸಮಯಕ್ಕೆ ಸರಿಯಾಗಿ ಪತ್ರಿಕೆಯನ್ನು ಹೊರಡಿಸುವದರಲ್ಲಿಯೂ ರಾಮಗೋಪಾಲನ ಸಾಮರ್ಥ್ಯವು ಮನಂದಟ್ಟಾಗಲು ಮುಂದೆ ಅವನ ಗೋಜಿಗೆ ಹೋಗುವುದನ್ನು ಬಿಟ್ಟುಬಿಟ್ಟನು. ಮುಂದೆ, ತಿಂಗಳಿಗೊಮ್ಮೆ ಅವನು ಪತ್ರಿಕಾಲಯಕ್ಕೆ ಹೋದರೆ ಅದೇ ಹೆಚ್ಚು. ರಾಮಗೋಪಾಲನು ಹಣದ ವಹಿವಾಟಿನಲ್ಲೇನೂ ಮೋಸ ಮಾಡುತ್ತಿರಲಿಲ್ಲ. ಪತ್ರಿಕೆಯ ಒಂದು ಪ್ರತಿಯನ್ನು ತಪ್ಪದೇ ತಂದುಕೊಡುತ್ತಿದ್ದ. ಪ್ರತಿ ಸಂಚಿಕೆಯಲ್ಲಿಯೂ ರಾಜಾರಾಮನ ಒಂದಾದರೂ ಕತೆ-ಕವಿತೆ-ಲೇಖನವನ್ನು ಹಾಕದಿರುತ್ತಿರಲಿಲ್ಲ. ಇಷ್ಟಿದ್ದಮೇಲೆ ಕಾರ್ಯಾಲಯಕ್ಕೆ ಹೋಗುವ ಅಗತ್ಯವಾದರೂ ಏನು?

ರಾಮಗೋಪಾಲನು 'ಯತಿಪತಿ'ಯ ಸಂಪಾದಕನಾದ ಮೇಲೆ, 'ಯತಿಪತಿ'ಯ ವಾಚಕರಿಗೆ ಹೀರೆಯ ಕತೆಗಳನ್ನು ಓದುವ ಭಾಗ್ಯಲಭಿಸಿತು. ಪ್ರತಿಯೊಂದು ಸಂಚಿಕೆಯಲ್ಲಿಯೂ ಅವಳ ಒಂದೊಂದು ಕತೆ ಪ್ರಕಟವಾಗುತ್ತಿತ್ತು. ಸೂಳೆ ಬರೆಯುವ ಕತೆ ಸೂಳೆಯ ಕುರಿತೇ! ಅಶ್ಲೀಲವೇ ಕತೆಯ ಜೀವಾಳವಾಗಿದ್ದರೂ, ಶೈಲಿಯು ಸೊಗಸಿಲ್ಲದಿದ್ದರೂ ರಾಮಗೋಪಾಲನು ಅದನ್ನು

ಗವುನಿಸುತ್ತಿರಲಿಲ್ಲ. ಕತೆಗಳನ್ನು ತಾತ್ಸಾರದೃಷ್ಟಿಯಿಂದ ನೋಡುತ್ತಿರಲಿಲ್ಲ. ಓದುಗರಲ್ಲೂ, ಅಧಿಕಾಂಶ ಜನರು ಅವಳ ಕತೆಗಳನ್ನು ಮೆಚ್ಚಿದ್ದಾರೆಂದು ಪ್ರಕಾಶಕರಲ್ಲಿ ಹಲವರು ಅವಳ ಕಥಾಸಂಗ್ರಹವನ್ನು ಪ್ರಕಟಿಸುವ ಅಭಿಲಾಷೆಯನ್ನು ವ್ಯಕ್ತಪಡಿಸಿದ್ದರಿಂದ ಗೊತ್ತಾಗಿದೆ.

ಹೀರೆಯು ಕತೆಗಳನ್ನೋದುತ್ತಿದ್ದಂತೆಯೇ ರಾಜಾರಾಮನಿಗೇನೋ ಅನಿರ್ವಚನೀಯವಾದ ಸಂವೇದನೆಯಾಗುತ್ತಿತ್ತು. ಕತೆಯಲ್ಲಿ ಬರುವ ಸ್ತ್ರೀ ಪಾತ್ರಗಳ ಸ್ತನಗಳನ್ನು ಕತೆಗಾರ್ತಿ ಬಿಚ್ಚುಮಾತಿನಿಂದ ವರ್ಣಿಸಿದುದನ್ನು ಓದುವಾಗ ಮೈಯಲ್ಲಿ ವಿದ್ಯುತ್ಸಂಚಾರವಾಗುತ್ತಿತ್ತು; ರೋಮಾಂಚನವಾಗುತ್ತಿತ್ತು. ಪ್ರಣಯಪ್ರಸಂಗಗಳ ಪಠಣದಿಂದಂತೂ ಹೃದಯವು ಹಾರಿ ಹೋಗುತ್ತಿತ್ತು. ಹೀರಾ- ಅವಳ ಗುರು ಕ್ರಮೇಣ, ಮೆಲ್ಲಮೆಲ್ಲನೆ ಸಾಧನೆಯ ಕಡೆಗೆ ಚಲಿಸತೊಡಗಿತ್ತು.

ಬೇಸಗೆಯ ಕಾಲ ಕಿರಿದಾಗುತ್ತಾ ಬರುತ್ತಿದ್ದಂತೆ, ಲಲಿತೆಯ ಸ್ಥಿತಿಯಲ್ಲೇನೋ ವ್ಯತ್ಯಾಸ ಕಾಣತೊಡಗಿತು. ಸಾಧಾರಣ ಐದಾರು ತಿಂಗಳಿಂದಲೂ ಅವಳೇನೋ ವ್ಯಾಧಿಗ್ರಸ್ತಳಾದಂತಿದ್ದಳು. ಈಗ ಆ ವ್ಯಾಧಿಯ ಕಾಟ ಹೆಚ್ಚಾದಂತೆ ತೋರಿತು. ಸೇವಿಸಿದುದೆಲ್ಲಾ ಬವನದ ರೂಪದಲ್ಲಿ ತೆಂಗಿನ ಕಟ್ಟೆಗೆ ಹೋಗಿ ಸೇರುತ್ತಿತ್ತು. ಅವಳನ್ನು ನೋಡಿದವರೆಲ್ಲಾ, 'ಲಲಿತಾ, ಐದಾರು ತಿಂಗಳ ಗರ್ಭಿಣಿ' ಎಂದುಕೊಳ್ಳುತ್ತಿದ್ದರು. ರಾಜಾರಾಮನಿಗೂ ಅದೇ ಸಂಶಯವಾಯಿತು. ಲಲಿತೆಯೊಡನೆ, 'ಲಲಿತಾ! ನೀನು ಗರ್ಭಿಣಿಯೇ?' ಎಂದು ಕೇಳಿದರೆ ಸಾಕು, ಮುಖವನ್ನು ಕುಂಕುಮ ಮಾಡಿಕೊಂಡು, 'ಥೂ! ಹೋಗಿ ಆಚೆ' ಎಂದು ಅಲ್ಲಿಂದ ಹೊರಟು ಬಿಡುತ್ತಿದ್ದಳು. ದಿನಗಳೆದಂತೆ ಲಲಿತೆಯ ಪರಿಸ್ಥಿತಿ ಮತ್ತಷ್ಟು ವಿಪರೀತವಾಯಿತು; ಶೋಚನೀಯವಾಯಿತು. ದಿನಕ್ಕೆ ಮೂರು ನಾಲ್ಕು ಬಾರಿಯಾದರೂ ಅವಳಿಗೆ ಮೂರ್ಛೆದಪ್ಪುತ್ತಿತ್ತು.

ಮಳೆಗಾಲವು ಹೆಬ್ಬಾಗಿಲ ಬಳಿಗೈದ ಸಮಯ; ಗಣೇಶರಾಯರಿಗೆ ಮಗಳು ಗರ್ಭಿಣಿಯೆಂಬ ವರ್ತಮಾನ ತಿಳಿಯಿತು. ರಾಜಾರಾಮನು ತಿಳಿಸಿರಲಿಲ್ಲ. ಲಲಿತೆಯೂ ತಾನಾಗಿಯೇ ತಿಳಿಸುವಹಾಗಿರಲಿಲ್ಲ. ಆದರೂ ಒಬ್ಬರ ಕಿವಿಯಿಂದೊಬ್ಬರ ಕಿವಿಗೆ ಬಿದ್ದ ವಾರ್ತೆ ಗಣೇಶರಾಯರ ಕಿವಿತನಕವೂ ಬಂದು ಸೇರಿತ್ತು. ರೂಢಿಯಂತೆ ರಾಯರು ಮಗಳನ್ನು ತವರುಮನೆಗೆ ಕರೆದುಕೊಂಡು ಬರಲು ಮಗ ದಾಮುವನ್ನು ಕಳುಹಿಸಿದರು.

ದಾಮು ಬಂದಾಗ ರಾಜಾರಾಮ ಮನೆಯಲ್ಲಿರಲಿಲ್ಲ. ಹೊರಗೆ ಅಡ್ಡಾಡ ಹೋಗಿದ್ದನು. ಮರಳಿ ಬರುವಾಗ ಯಾರೋ ಗಂಡಸರ ಮಾತನ್ನು ಕೇಳಿ ಆಶ್ಚರ್ಯವಾಯಿತು. ದಾಮುವನ್ನು ಆ ಸಮಯದಲ್ಲಿ ಅವನು ನಿರೀಕ್ಷಿಸಿರಲಿಲ್ಲ. ಬಾಗಿಲೊಳಗೆ ಕಾಲಿಕ್ಕುತಲೇ ಕಾಫಿ ಸ್ನಾನ ಮಾಡುತ್ತಿರುವ ದಾಮೋದರನ ಮೂರ್ತಿ ಗೋಚರಸಿತು.

"ಯಾರು, ದಾಮುವೇ?" ಎಂದನು.

"ಹೌದು, ಭಾವಯ್ಯಾ! ನಾನು ಬಂದಿದ್ದೇನೆ."

"ಅದನ್ನೇನು ಹೇಳುತ್ತೀ! ನನಗೆ ಕಣ್ಣು ಕಾಣಿಸುವುದಿಲ್ಲವೇ?"

"ಮತ್ತೆ ನನ್ನನ್ನು ನೋಡಿಯೂ, ದಾಮುವೇ? ಎಂದಿರಲ್ಲಾ! ಆಗ ಕಣ್ಣು ಕುರುಡೇ?" ಎಂದು ನಕ್ಕನು.

"ಅದು ಕೇಳುವ ಕ್ರಮ! ಇರಲಿ; ಸಮಾಚಾರವೇನು?"

"ನೀವೆ ತಿಳಿಸಬೇಕಾಗಿತ್ತು. ಸಮಾಚಾರ! ಕೊನೆಗೆ ನಾವಾದರೂ ತಿಳಿದು ಬರಬೇಡವೇ? ಬಂದೆ!" ಎಂದು ತಂಗಿಯ ಮುಖವನ್ನು ನೋಡಿದನು.

"ನಾನು ಹೇಗೆ ತಿಳಿಸಲಿ ಮಹರಾಯ! ನನಗೆ ಗೊತ್ತಿದ್ದರೆ ತಾನೇ? ನಾನು ಕೇಳಿದರೆ ನಿನ್ನ ತಂಗಿ..........."

"ಏನು?"

"ಅವಳನ್ನೇ ಕೇಳು."

"ಏನದು ಲಲಿತಾ?"

"ನೀನು ಸುಮ್ಮನಿರಣ್ಣ." ಎಂದಳು ಒಳಗೆ ಅಡುಗೆ ಮನೆಯಿಂದ.

"ಆಗಲಿ, ಅಣ್ಣಾರಾಯರಿಗೆ ಮಧ್ಯಾಹ್ನದ ಊಟಕ್ಕೆ ಸಕ್ಕರೆ ಭಕ್ಷ್ಯ, ಬೆಲ್ಲದ ಪಾಯಸ!"

ರಾಮನು ಬಟ್ಟೆ ಹಾಕಿಕೊಂಡೇ ಮಾತನಾಡುತ್ತಿದ್ದವನು ಬಟ್ಟೆಗಳನ್ನು ಬಿಚ್ಚತೊಡಗಿದನು.

"ಎಷ್ಟು ಹೊತ್ತಿಗೆ ಹೊರಡುವುದಣ್ಣ?" ಎಂದಳು ಲಲಿತೆ ಹೊರಗೆ ಬಂದು.

"ನಿನ್ನ ಗಂಡನನ್ನೇ ಕೇಳು."

"ಏನು! ಇವತ್ತೇ ಹೋಗಬೇಕೇ?" ಎಂಬುದು ರಾಜಾರಾಮನ ಪ್ರಶ್ನೆ.

"ಮತ್ತೇ?"

"ನಾಳೆ ಹೋಗಬಹುದಯ್ಯಾ, ಸಾವಕಾಶವಾಗಿ!"

"ಛೇ! ಛೇ! ಸಾಧ್ಯವಿಲ್ಲ ಭಾವಯ್ಯಾ. ನನಗ ಪುರಸೊತ್ತಿಲ್ಲ ಹಾಗೇನಾದರೂ ಇದ್ದರೆ ನೀವೇ ನಾಳೆ ಕರೆದುಕೊಂಡು ಬನ್ನಿ. ನನಗೆ ಇವತ್ತು ಹೋಗದೆ ನಿರ್ವಾಹವಿಲ್ಲ."

"ನಿನ್ನನ್ನು, ಬಂದವನನ್ನು, ಹಾಗೆಯೇ ಹಿಂದೆ ಕಳುಹಿಸುವುದು ಸರಿಯೇ? ಚೆಂದವೇ?"

"ಹಾಗಾದರೆ ತೊಂದರೆ ಯಾಕೆ? ಇವತ್ತೇ ಕಳುಹಿಸಿಬಿಡಿ ಲಲಿತೆಯನ್ನು."

"ಅಡ್ಡಿಯಿಲ್ಲ!"

"ಮೂರೂಸಂಜೆಯ ಹೊತ್ತಿಗೆ ಹೊರಟರೆ ಸರಿ. ಅತ್ತ ಬಿಸಿಲ ಕಾಟವೂ ಇಲ್ಲ. ಇತ್ತ............."

"ಸರಿ!"

"ಮತ್ತೇನು! ಬೇರೇನಾದರೂ ವಿಶೇಷವಿದೆಯೇ?" ಎಂದನು ರಾಜಾರಾಮು.

"ಅದೇ ಲಲಿತೆಯನ್ನು ಕರೆದುಕೊಂಡು ಹೋಗುವುದೇ ವಿಶೇಷ!"

"ಛೇ! ಛೇ! ಹಾಗಲ್ಲ! ಏನಾದರೂ ಈ ವರ್ಷ ದಿಬ್ಬಣ ಹೊರಡಲಿಕ್ಕುಂಟೇ?– ಪರಿಣಯವಾಗಲಿಕ್ಕುಂಟೇ? ಎಂದು ಕೇಳಿದೆ."

"ಛಿಕ್! ಅದೇನೂ ಇಲ್ಲ."

"ಹಾಗೇನು?"

"ಮಾಡಿಸುವವರು ಬೇಕಲ್ಲ! ಅಪ್ಪನಿಗೆ ಯಾವಾಗ ನೋಡಿದರೂ ಸೊಂಟನೋವು– ಬೆನ್ನುನೋವು ........!"

"ಏನದು ಹಾಗೆ?"

"ಪ್ರಾಯ ಸುಮಾರಾಗಲಿಲ್ಲವೇ? ನಮ್ಮ ಜಾತಿಯಲ್ಲಿ ಹುಡುಗರ ಮದುವೆಯೆಂದರೆ ಹುಡುಗಿಯರ ಮದುವೆಯಷ್ಟು ಯಾರಿಗೂ ಆತುರವಿಲ್ಲ."

"ಊಟಕ್ಕೆ ಬನ್ನಿ" ಎಂದು ಕರೆದಳು ಲಲಿತೆ.

ಭೋಜನ ಮೌನವಾಗಿಯೇ ಸಾಗಿತು. ಲಲಿತೆ ಬಡಿಸಿದುದನ್ನು ಇಬ್ಬರೂ ಎರಡಿಲ್ಲದೆ, 'ಬೇಡ, ಬೇಡ'ವೆನ್ನದೆ ಚೆನ್ನಾಗಿ ಛಪ್ಪರಿಸಿದರು ಊಟವಾದಮೇಲೆ ದಾಮೋದರನಿಗೆ ತನ್ನ ಹಾಸಿಗೆಯನ್ನೇ ತಂದು ಹಾಸಿದನು

ರಾಜಾರಾಮ. ದಾಮೋದರನು ನಿದ್ರೆಯ ಭರದಿಂದ ಹಾಸಿಗೆಯಲ್ಲಿ ಹೊರಳಿಳಿದರೆ, ರಾಜಾರಾಮನು ಆರಾಮಾಸನದಲ್ಲೇ ಕಣ್ಮುಚ್ಚಿ ಪ್ರಪಂಚವನ್ನು ಮರೆತನು.

ಆದರೆ, ಲಲಿತೆ ಮಲಗಲಿಲ್ಲ. ತವರ್ಮನೆಗೆ ಹೋಗಲು ತನ್ನ ಸರಕುಗಳನ್ನು ಅಣಿಗೊಳಿಸತೊಡಗಿದಳು. ಅಷ್ಟರಲ್ಲೇ ಗಂಟೆ ನಾಲ್ಕು ಬಡೆಯಿತು. ಅಲ್ಲಿಂದೆದ್ದು ಕಾಫಿಗೆ ಒಲೆ ಹಚ್ಚಲು ಒಳಹೋದಳು. ಭಾವ, ಮೈದುನರಿಬ್ಬರೂ ಮೈಮುರಿದು ನಿದ್ದೆಯಿಂದೆದ್ದಾಗ ಕಾಫಿ-ತಿಂಡಿಗಳು ತಯಾರಾಗಿದ್ದವು.

ಸಡಗರದಲ್ಲೇ ಹೊತ್ತು ಇಳಿಯಿತು. ಪಡುವಲಲ್ಲಿ ಸಂಧ್ಯಾರಾಗವು ರಂಜಿಸಿತು. ಲಲಿತೆ, ದಾಮೋದರರಿಬ್ಬರೂ ಹೊರಟರು. ನದಿಯ ತನಕ ರಾಜಾರಾಮನೂ ಅವರನ್ನು ಹಿಂಬಾಲಿಸಿದನು. ಅಂಬಿಗನು ಈ ಮೊದಲೇ ದೋಣಿಯೊಂದಿಗೆ ಸಜ್ಜಾಗಿ ಬಂದಿದ್ದನು. ಪಯಣಿಗರು ಕುಳಿತುಕೊಳ್ಳುತ್ತಲೇ ಗಾಳಿ ದೋಣಿಯನ್ನು ತೇಲಿಸಿಕೊಂಡು ಹೋಯಿತು. ಲಲಿತೆ ಸಂತಸದಿಂದಲೇ ತವರ್ಮನೆಗೆ ಹೊರಟು ಹೋದಳು. ಆದರೆ, ರಾಜಾರಾಮ?–ಅವನ ಹೃತ್ಕಂದರದಿಂದ ಬೆಳಕು ತೊಲಗಿ ಹೋದಂತಾಯಿತು.

ಲಲಿತೆಯ ನಿರ್ಗಮನದ ನಂತರ ರಾಜಾರಾಮನಿಗೆ ಜೀವನದಲ್ಲಿ ಬೇಸರವುಂಟಾಯಿತು. ಮಳೆಗಾಲ ಕಾಲಿಟ್ಟಿದ್ದರೂ, ಇನ್ನೂ ಹನಿ ಕರೆಯಲಾರಂಭವಾಗಿರಲಿಲ್ಲ. ಗಳಿಗೆಗೊಮ್ಮೆ ಕಾರ್ಮೋಡಗಳು ಆಕಾಶದಲ್ಲಿ ಕವಿದು, ಗಾಳಿಯಿಂದ ಪಡುಬೆಟ್ಟಗಳೆಡೆಗೆ ತೇಲಿ ಹೋಗುತ್ತಿದ್ದವು. ರಾಜಾರಾಮನಿಗೆ ಬೀಡರಸಿ ಇಲ್ಲದ ಬೀಡಾರ ಬೇಸರವಾಯಿತು. ಮೂರು ಹೊತ್ತಿನ ಊಟ ಕೃಷ್ಣಭವನದಲ್ಲಿ. ಕಾಫಿ ಬೇಕೆಂದೆನಿಸಿದಾಗ ಅವನ ಮನೆಯ ಮುಂದಿನ ಆ ಚಿಕ್ಕ ಹೋಟೆಲಿನಲ್ಲಿ. ಮಧ್ಯಾಹ್ನದ ಊಟವಾದಬಳಿಕ ಕೆಲವೊಮ್ಮೆ ಕದ್ರಿಪರ್ವತವನ್ನೇರಿ, ಅಲ್ಲಿನ ಹುಲ್ಲಿನ ಹಾಸಿಗೆಯಲ್ಲಿ ತಂಗಾಳಿಗೆ ಮೈಯೊಡ್ಡಿ ಹಾಯಾಗಿ ಮಲಗಿಬಿಡುತ್ತಿದ್ದನು. ತಂಗಾಳಿಗೆ ಮೈದೂಗಿ ನಿದ್ರೆ ಬಂತೆಂದರೆ ಕೆಲ ಹೊತ್ತಾದರೂ ಯಾವ ಚಿಂತೆಯ ಪರಿವೆಯೂ ಇರುತ್ತಿರಲಿಲ್ಲ. ಆದರೂ, ಉಳಿದ ಹೊತ್ತನ್ನು ಕಳೆಯುವುದೆಂದರೆ ಬಹಳ ಪ್ರಯಾಸವಾಗಿತ್ತು.

ಲಲಿತೆ ಹೊರಟುಹೋಗಿ ಎರಡು ಮೂರು ವಾರಗಳ ಮೇಲಾಗಿತ್ತು. ಆಗಾಗೊಮ್ಮೆ ಹನಿ ಮಳೆ ಬರಲು ಪ್ರಾರಂಭವಾಗಿತ್ತು. ಇನ್ನೂ ಮುಂಜಾನೆ ಎಂಟು ಗಂಟೆಯಾಗಿರಲಿಲ್ಲ. ಮೊದಲೇ ಚೆನ್ನಾಗಿ ಬೆಳಕಾಗದಿರುವ ಸಮಯ;

ಇದ್ದ ಬೆಳಕನ್ನೂ ಕರ್ಮುಗಿಲೋಳಿ ಕವಿದು ಬಿಟ್ಟಿತ್ತು. ರಾಜಾರಾಮು ಅದೇ ತಾನೇ ಕಾಫಿಕುಡಿದು ಬಂದು ಮಲಗಿದ್ದಾನೆ. ಗಾಳಿಗೆ ಒಳಹಾರುವ ಚೀರ್ಹನಿಗಳನ್ನು ತಡೆಯಲು ಕಿಟಿಕಿ, ಬಾಗಿಲುಗಳೆಲ್ಲಾ ಮುಚ್ಚಿವೆ. ಮಲಗಿಕೊಂಡಲ್ಲಿಂದಲೇ ರಾಜಾರಾಮನ ಮನಸ್ಸು ಯಾವ ಯಾವ ವಿಚಾರಗಳನ್ನೋ ಕುರಿತು ಪರ್ಯಾಲೋಚಿಸುತ್ತಿತ್ತು. ನೀತಿಯ ಎಲ್ಲೆಯನ್ನು ಮೀರಿ ಹುಚ್ಚು ಗಾಳಿಗೆ ಅಲೆದಾಡುವ ತರಗೆಲೆಯಂತಾಗಿತ್ತು. ಅವನಿಗರಿಯದಂತೆ ಏನೇನೋ ಕೆಟ್ಟ ವಿಚಾರಗಳನ್ನು ಅವನ ಹೃದಯದಲ್ಲಿ ತುಂಬುತ್ತಿತ್ತು. ಮುಚ್ಚಿಕೊಂಡಿದ್ದ ಬಾಗಿಲು 'ಗಢಕ್!' ಎಂದಿತು.

ಮಲಗಿಕೊಂಡೇ ರಾಜಾರಾಮುನು "ಯಾರದು?" ಎಂದನು.

ಕೈಯಲ್ಲಿ ಕಾಗದದ ಕಟ್ಟನ್ನು ಹಿಡಿದುಕೊಂಡು ಒಳಗೆ ಬಂದು, 'ನಾನು!'' ಎಂದನು ರಾಮಗೋಪಾಲ.

"ರಾಮಗೋಪಾಲನೇ?"

"ಹುಂ; ಏನು! ಇನ್ನೂ ನಿದ್ದೆಯೇ?"

"ಓ! ಏನಿಲ್ಲ. ಈಗ ಕಾಫಿಕುಡಿದು ಬಂದೆ."

"ಮತ್ತೇನು ಮಲಗಿದ್ದೀರಿ?"

"ಬೇಸರವಾಯಿತು; ಮಲಗಿದ್ದೆ!"

"ಹೋ! ಹಾಗೆ! ಅಮ್ಮಾಅವರಿಲ್ಲವೇ?"

"ಇಲ್ಲ"

"ಏನೋ?"

"ಗರ್ಭಿಣಿಯಲ್ಲವೇ? ತವರ್ಮನೆಗೆ ಹೋಗಿದ್ದಾಳೆ!"

"ಹೋ! ಹಾಗೊ!" ಎಂದನು ರಾಮಗೋಪಾಲ.

"ಇರಲಿ; ನೀನೇನು ಬಂದೆ?"

"ಈ ಬಾರಿಯ ಸಂಚಿಕೆಯ ಲೇಖನಗಳನ್ನು ತೋರಿಸೋಣವೆಂದು ಬಂದೆ."

ರಾಮಗೋಪಾಲನೇ ಎಲ್ಲವನ್ನು ಒಂದೊಂದಾಗಿ ಬಿಡಿಸಿ ತೋರಿಸಿದನು. ನಾಲ್ಕಾರು ಕತೆಗಳು—ಮೂರು ನಾಲ್ಕು ಕವಿತೆಗಳು, ಎರಡು-ಮೂರು ಲೇಖಗಳು, ಸಂಪಾದಕೀಯ ಇತ್ಯಾದಿ. ಮೂವತ್ತೆರಡು ಪುಟದ ಸಂಚಿಕೆಯನ್ನು ತುಂಬಲು ಎಷ್ಟುಬೇಕೋ ಅಷ್ಟು, ಎಲ್ಲವನ್ನೂ ತೋರಿಸಿ,

ರಾಜಾರಾಮನ ಸಮ್ಮತಿಯನ್ನು ಪಡೆದುಕೊಂಡು, ರಾಮಗೋಪಾಲನು ಮೊದಲಿನಂತೆ ಕಾಗದಗಳನ್ನು ಕಟ್ಟಲಾರಂಭಿಸಿದನು.

ಅವನ ಭುಜದ ಮೇಲೆ ಕೈಹಾಕಿ ಮೆಲ್ಲನೆ ಹೇಳತೊಡಗಿದನು. ರಾಜಾ ರಾಮ; ನೋಡು, ರಾಮಗೋಪಾಲ್! ಲಲಿತೆ ಹೋದ ಮೇಲೆ ನನಗೆ ಜೀವನವೆಂದರೆ ಅಷ್ಟು ಬೇಜಾರಾಗಿದೆ. ರಾತ್ರಿ–ಹಗಲೂ ಒಬ್ಬಂಟಿಗನಾಗಿಯೇ ಸಮಯ ಕಳೆಯಬೇಕು. ಅವಳು ಬರುವುದಕ್ಕೆ ಇನ್ನೂ ಎರಡು–ಮೂರು ತಿಂಗಳುಗಳಿವೆ."

"ನೀವೊಂದು ಮರುಳು. ರಾಜಾರಾಮರಾಯರೇ!" ಎಂದನು ರಾಮಗೋಪಾಲ

"ಅದೇಕೆ ಹಾಗೆ ಹೇಳುತ್ತೀ?"

"ಹೇಳದೆ ಮತ್ತೇನು ಮಾಡಲಿ? ಇಲ್ಲವಾದರೆ ನಿಮ್ಮ ಹಾಗೆ ಎಷ್ಟು ಮಂದಿ ಗೃಹಿಣಿಯರನ್ನು ತವರುಮನೆಗೆ ಕಳುಹಿಸುವುದಿಲ್ಲ. ಆದರೆ, ಹೀಗೆ ನಿಮ್ಮ ಹಾಗೆ ಋಷಿಯ ಹಾಗೆ ಕುಳಿತುಕೊಳ್ಳುತ್ತಾರೇನು?"

"ಆಂ! ಮತ್ತೇನು ಮಾಡುತ್ತಾರೆ?"

"ಸುಖಪಡುತ್ತಾರೆ!"

"ಎಂಥಃ ಸುಖ! ಹೇಗೆ?"

"ಜೋಡುಮಠದ ಗಲ್ಲಿಗಳಲ್ಲಿ ಹೊಕ್ಕು ನೋಡಿ- ಗೊತ್ತಾಗುತ್ತದೆ!"

"ಅಂದರೆ?"

"ಅಂದರೆ, ಇನ್ನೂ ಅರ್ಥವಾಗಲಿಲ್ಲವೇ!" ಎಂದನು ನಗುತ್ತಾ ರಾಮಗೋಪಾಲ.

"ಅಂದರೆ," ಎಂದು ರಾಜಾರಾಮನು ಅಭಿನಯಪೂರ್ವಕವಾಗಿ, ಹೀಗೋ?" ಎಂದು ಕೇಳಿದನು.

"ಹೂಂ; ಹಾಗೆಯೇ!"

"ಈಗ ನಾನು ಕೂಡಾ ಹಾಗೆಯೇ ಮಾಡಬೇಕೆಂದುಕೆಂದು ನೀನು ಹೇಳುವುದೇ?"

"ಅಲ್ಲದೆ, ಬೇರೇನು?"

ರಾಜಾರಾಮನು ಕಣ್ಣುಗಳಿಂದ ಕೆಟ್ಟನಗುವನ್ನು ಸೂಸುತ್ತಾ, "ಅಂಥ ವರು ಯಾರಾದರೂ ಇದ್ದಾರೆಯೇ?" ಎಂದನು.

"ಓಹೋ! ಅದಕ್ಕೇನು ಕಡಿಮೆ?"

"ಯಾರವಳು?"

"ಮತ್ತಾರು? ನನ್ನವಳೇ!"

"ಹೀರಾ–ಅವಳೇ?"

"ಹೂಂ!"

ರಾಜಾರಾಮನ ಮೈಯಲ್ಲಿ ವಿದ್ಯುತ್ಸಂಚಾರವಾದಂತಾಯಿತು ಹಾಗೆಯೇ ಸ್ವಲ್ಪ ಅಂಜಿಕೆಯೂ ಆಯಿತು. ಅವನ ಮುಂದೆ ಗೋಡೆಯಲ್ಲಿ ಲಲಿತೆಯ ಭಾವಚಿತ್ರವು ತೂಗಾಡುತ್ತಿತ್ತು. ಅದನ್ನು ನೋಡಿದನು. ಆ ಚಿತ್ರವು 'ಹೋಗುತ್ತೀರಾ? ಹೋಗುತ್ತೀರಾ' ಎಂದು ಕೇಳಿದ ಹಾಗಾಯಿತು.

"ನಾನು ಬರಲಾರೆ; ನೀನು ಹೋಗು!" ಎಂದನು ರಾಮಗೋಪಾಲನನ್ನು ದಿಟ್ಟಿಸಿ.

ರಾಮಗೋಪಾಲನು ಮುಖದಲ್ಲಿ ನಿರಾಶೆಯ ಭಾವವನ್ನು ವ್ಯಕ್ತಪಡಿಸಿ ಬಂದ ಹಾಗೆಯೇ ಹೊರಟುಹೋದನು.

೬

ಲಲಿತೆ ಛಾವಡಿಯಲ್ಲಿ ಕುಳಿತುಕೊಂಡು ಆಕಾಶವನ್ನು ತದೇಕಚಿತ್ತದಿಂದೀಕ್ಷಿಸುತ್ತಿದ್ದಳು. ಮಳೆಗಾಲದ ಪ್ರಾರಂಭದ ದಿಡಿಗಳು; ಬಾಂದಳದಲ್ಲಿ ನಾನಾ ಪರಿಮಾಣದ, ತರ ತರ ಬಾಂಗಿನ, ಶ್ಯಾಮ ಪಯೋಧರಗಳು ಬಾಂದೇವಿಯ ಲಾವಣ್ಯಮಯ ವೇಣಿಗಳಂತೆ ಕಂಗೊಳಿಸುತ್ತವೆ. ಅವುಗಳ ಮಬ್ಬಾದ ಜವನಿಕೆಯೊಳಗೆ ಜಗತ್ತೆಲ್ಲವೂ ಪ್ರಚ್ಛನ್ನವಾದಂತಿದೆ ತಂಗಾಳಿ, ಬಿರುಗಾಳಿಯಂತೆ ಚಂಡಪ್ರಚಂಡವಾಗಿ ಮಹಾರ್ಭಟದಿಂದ ಬೀಸುತ್ತಿದ್ದರೂ, ನೆಲದ ಮಳಲನ್ನೆತ್ತಿಕೊಂಡು ಹೋಗುತ್ತಿಲ್ಲ. ಹೊಸ ಬಲ್ಸರಿಯ ಸಲಿಲವನ್ನೀಂಟಿದ ಭೂತಳವು ಕಾಲಿಟ್ಟರೆ ಜಾರುವಂತಿದ್ದರೂ, ಶಿಲೆಯಂತಾಗಿದೆ. ಅಂಗಳದಲ್ಲಿ ಕಾಲಿಕ್ಕಲೆಡೆಯಿಲ್ಲದಂತೆ, ಬೆಳ್ಳಗಾದ ನಾಯಿಕೊಡೆಗಳು; ಹಸುರಾದ ಗರಿಕೆ ಹುಲ್ಲುಗಳು. ದೂರದಲ್ಲಿ ಗುಡ್ಡದಿಂದ ಧುಮುಕುವ, ಬೆಟ್ಟದಿಂದ ಜಿಗಿಯುವ, ಕೊನ್ನಾರ–ಕಂದರಗಳಲ್ಲಿ ಹೊನಲಿಡುವ, ಕಾನನದಿಂದ ಹೊರಹೊಮ್ಮುವ ಅಬ್ಬಿ, ತಡಸಲು, ಕಾಳ್ಪುರ, ಹೊನಲು, ಹಳ್ಳಗಳು ದೃಷ್ಟಿಗೋಚರವಾದರೂ,

ಕೇಳಿ ಬರುವ ಅವುಗಳ ತಾರಸ್ವರ ಆಲಿಸುವವರ ಎದೆಯಲ್ಲಿ ಅವುಗಳ ನಿಜಸ್ಥಿತಿ, ರೂಪವನ್ನು ಚಿತ್ರಿಸುತ್ತಿತ್ತು. ಜಡಿಮಳೆ ಎಡೆವರಿಯದೆ. ಅವಿರತವಾಗಿ ಕರೆದು, ಉನ್ನತಭಾಗಗಳನ್ನು ಅವನತವನ್ನಾಗಿಸಿ, ಮಣ್ಣನ್ನು ಕೊರೆಕೊರೆದು, ತೆರೆಗಳನ್ನುರುಳಿಸಿ ಗಾಳಿಗೆ ದಿಕ್ಕುಪಾಲಾಗಿ ಚದರಿ ಕಾಣದಾಗುತ್ತಿತ್ತು. ಹೊಲ, ಕೆರೆ, ಭಾವಿಗಳ ಒಳ ಗೋಂಕರ ಕಪ್ಪೆಗಳು ತಮ್ಮ ವಾದ್ಯವನ್ನು ಬಾರಿಸ ಲಾರಂಭಿಸಿದ್ದವು. ಹುಲ್ಲುಹಾಸಿಗೆಯಾಗಿದ್ದರೂ, ಕಾಲ್ನಡೆಗಳು ಮೇಯಲು ಬರುವಂತಿರಲಿಲ್ಲ. ಬೆಳಗಿನಿಂದ ಮರುಬೆಳಗಿನತನಕವೂ ಏಕಪ್ರಕಾರವಾಗಿ ಬಿರು ಸೋನೆಯ ನಿರಂಕುಶಾಧಿಕಾರ! ರಾತ್ರಿಂದಿವವೂ ಏಕಪ್ರಕಾರವಾಗಿ ಗಾಢಾಂಧ ಕಾರ! ಹಗಲೂ ರಾತ್ರಿ; ರಾತ್ರಿಯೂ ರಾತ್ರಿಯೇ! ಸೂರ್ಯನ ಉದಯಾಸ್ತ ಮಾನಗಳು ಬರವು. ದರ್ಶನಗಳು ಎಂದೆಂದಿಗೂ ದುರ್ಲಭ. ಹಗಲಿರುಳೆನ್ನದೆ ಅವಿರಾಮವಾಗಿ ಹೊಯ್ಯುವ ಬಿರುಮಳೆಯಲ್ಲಿ ಹಾಸುಹೊಕ್ಕಾದ, ಅಯುತ ಪ್ರಯುತ ಕ್ರಿಮಿಕೀಟಗಳ ಕರ್ಕಶಧ್ವನಿ ಕಿವಿದೆರೆಯ ನಿಕ್ಕಡಿಸುವಂತಿದೆ. ನವ ಜಲಪಾನದಿಂದ ಉಬ್ಬಿದ ಮುನ್ನೀರ ಅಬ್ಬರವು ನೂರ್ಮಡಿಸಿದೆ. ತಾರಿದ ನದಿಗಳು ತೆರೆತೆರೆಯಾಗಿ ಹರಿದೋಡುತ್ತಲಿವೆ. ಅತ್ತ ಏಕಪ್ರಕಾರವಾಗಿ ಅಂಗ ವಿಸಿ, ಮೇಳಯಿಸಿ, ದಟ್ಟಯಿಸಿ, ಪಶ್ಚಿಮಘಟ್ಟಗಳ ಬಳಿಸಾರಿದ ಕಮರ್ಗಿ ಲೋಳಿ ತಂಪಾಗಿ, ಬರಬರನೆ ಸುರಿದು, ಸೌದಾಮಿನಿಯ ವೇಗದಿಂದ ಕೆಳ ಗಿಳಿದು, ಮನೆಗಳನ್ನುರುಳಿಸಿ, ತೊರೆಯ ತೆರೆಗೈಗಳನ್ನು ಮೇಲೆತ್ತಿ, ಇತ್ತಡಿ ಗಳನ್ನೂ ಮೀರಿ, ಭೋಂಕನೆ ಪ್ರವಹಿಸಿ, ಹೊಲಹೊಳೆಗಳನ್ನೇಕೀಭವಿಸಿ ಭೋರಿಡುತ್ತಾ, ಸುಂಟರಗಾಳಿಯ ಸಾಹ್ಯವು ಲಭಿಸಲು, ತರು. ನಿಕುಂಜ, ಬನಗಳ ತಾಳ ತಪ್ಪಿಸಿ, ಪದ ತಪ್ಪಿಸಿ, ತೆಂಗುಗಳನ್ನು ಸೀಳಿ, ಕಂಗುಗಳನ್ನು ಹೂಳಿ, ಬಾಳೆಗಳ ಕಿತ್ತು, ತಾಳೆಗಳ ಹೋಳುಮಾಡಿ, ತಾನೇ ತಾನಾಗಿ, ಸಾಟಿ ಯಿಲ್ಲದೆ, ಎಣೆಯಿಲ್ಲದ ಕಾಟಗಳಿಂದ, ಕಾಲಾಂತಕನಂತೆ, ಸ್ವಚ್ಛಂದಧಿ ಕಾರದಿಂದ ಮೆರೆಯುತ್ತಿತ್ತು. ಮನೆಮಾರುಗಳಿಲ್ಲದ ಅನಾಥಗಣನೆ ಕ್ಷಣ ಕ್ಷಣಕ್ಕೂ, ದಿನದಿನಕ್ಕೂ ವರ್ಧಿಸುತ್ತಿತ್ತು.

ಒಮ್ಮೆಲೇ ಮೋಡಗಳ ಉಚ್ಚೋಷಣವಾದಂತೆ ಗಗನವು ಮೌನ ವಾಯಿತು. ಬಿರುಗಾಳಿ ಶಾಂತವಾಯಿತು. ಮಳೆಗಂಜಿ ಮರೆಯಾದ ಖಗಮಿಗ ಗಳು ಆಹಾರ ಶೋಧನೆಗಾಗಿ ಹೊರಬರಲಾರಂಭಿಸಿದವು. ಹೆದ್ದಾರಿ, ಕಿರುದಾರಿ, ಓಣಿ, ಗಲ್ಲಿ, ಕೇರಿ, ಬೀದಿಗಳು, ಮಾರ್ಗಗಳಲ್ಲಿ ಒಂದೆರಡು ಛತ್ರಗಳು

ಹಿಂದಕ್ಕೂ, ಮುಂದಕ್ಕೂ ನಡೆಯತೊಡಗಿದ್ದವು. ಮಳೆಯು ಅವಿಶ್ರಾಂತ ಹೊಡೆತದಿಂದ ಬೇಸತ್ತ ಜನ ಜಂಗುಳಿ ಅಂಗಳಕ್ಕಿಳಿದು ಆಕಾಶ ಮುಖಿಗಳಾಗಿ, ಇನ್ನು ಹತ್ತುದಿನ ಮಳೆ ಬಾರದಿರಲೆಂದು ವರ್ಷಾಧಿಪತಿಯನ್ನು ಪ್ರಾರ್ಥಿಸುತ್ತಿದ್ದರು. ಆದರೆ, ಮಳೆಗೆ ತಾಳ್ಮೆ ಎಲ್ಲಿ–ವಿಶ್ರಾಂತಿ ಎಲ್ಲಿ?–ಲೇಶ ಮಾತ್ರವಾದರೂ ಕರುಣೆಯೆಲ್ಲಿ?–ಮಂದಿಯ ಬೇಡಿಕೆ, ಬಿನ್ನಹಗಳಿಗೆ ಕಿವಿಗೊಡುವಷ್ಟು ಅವಕಾಶವಾದರೂ ಎಲ್ಲಿ?–ಹವ್ವನೆ ಗಾಳಿಯೆದ್ದು ಭಾಮರದಂತೆ ಬೀಸಿತು. ಗಗನಾಂಗನೆಯ ಮ್ಲಾನವದನಕ್ಕೆ ಕರಿದೆರೆಯನ್ನು ಹಾಯಿಸಿತು. ಕರೆದ ಒಂದೆರಡು ಹನಿಗಳು ಮಳೆಯಾಗಮನವನ್ನು ಸಾರಿದವು. ಕಡಲು 'ಹೋ!' ಎಂದು ಮೊರೆಯಿತು. ಹೊಳೆ ಮಳೆ ಯಾಗಮನದ ಸಂತಸದಿಂದ ಥಕ ಥಕನೆ ಕುಣಿಯಿತು. ಭೂಕಂಪವಾದಂತೆ, ಕಾಲನ ಕಾಲಿನಂದುಗೆಯ ಧ್ವನಿಯಂತೆ, ಭೂಮ್ಯಾಕಾಶಗಳೂ ಭೇದಿಸುವಂತೆ, ಸಿಡಿಲು ಗುಡ ಗುಡನೆ ಗುಡುಗಿ, ಲಲಿತೆಯನ್ನು ಗಡ ಗಡನೆ ನಡುಗಿಸಿತು. ಕಣ್ಣು ಕೋರಯಿಸುವಂತೆ ಮಿಂಚು ಹೊಳೆದು ಹೋಯಿತು. ಲಲಿತೆ ಅದಕ್ಕಂಜಿ, ಅಲ್ಲಿ ನಿಲ್ಲಲಾರದೆ ಒಳಗೈದಳು. ಮಳೆ ಆಗಲೇ ಬಿರುಸಾಗಿ ಹೊಯ್ಯಲಾರಂಭಿಸಿತ್ತು.

ಒಳಗೆ ಬಂದವಳು ಗವಾಕ್ಷದ ಮೂಲಕ ಹೊರಗೆ ಕಣ್ಣುಗಳನ್ನು ಹೊರಳಿಸಿದಳು. ಅಲ್ಲಿ ಹಲವಾರು ನೋಟಗಳು ಒಮ್ಮೆಲೇ ದೃಗ್ಗೋಚರಿಸುತ್ತಿದ್ದವು. ಒಂದೆಡೆ ವಿಶಾಲವಾದ ಅವರ ಹಿತ್ತಲನೋಟ; ಗದ್ದೆ. ಇನ್ನೊಂದೆಡೆ ವಾಹಿನಿಯ ಸಂಭ್ರಮದ ಪ್ರವಾಹ. ಮುಂದೆ ಉಕ್ಕಿದ ಕಡಲು ಹರಿಯುವ ಭೀಕರ ದೃಶ್ಯ. ಏಕಪ್ರಕಾರವಾಗಿ ಸುರಿದ ನೀರಿನಿಂದ ಉಬ್ಬಿದ, ಕೊಬ್ಬಿದ ಆ ಮಹಾಸಾಗರವು ತನ್ನ ತೆರೆಗಾಲ್ಗಳಿಂದ ಬಹುದೂರದ ವರೆಗೂ ನಡೆದು ಬಂದು, ವಿಸ್ತಾರವಾದ ಮರಳಿನ ಹಾಸಿಗೆಯನ್ನು ಸಂಪೂರ್ಣವಾಗಿ ಕವಳಿಸಿ, ಊರನ್ನೇ ಕೊಚ್ಚಿಬಿಡುವೆನೆಂದು ಹಾರುತ್ತಾ ಘೂರ್ಣಿಸುತ್ತಿತ್ತು. ಅವರ ಹಿತ್ತಲ ಚಬಕಿನ ಮರಗಳೆಷ್ಟೋ ಅದರಲ್ಲಿ ಕುತ್ತಿಗೆಯ ತನಕ ಮುಳುಗಿ ನಿಂತಿದ್ದವು. ಎಷ್ಟೋ ಮರಗಳು ಭೂತಳವನ್ನು ಚುಂಬಿಸುತ್ತಿದ್ದವು. ಇನ್ನೆಷ್ಟೋ ಬೇರು ಸಹಿತವಾಗಿ ಉರುಳಿಕೊಂಡಿದ್ದವು. ಬೇರೆ ಹಲವು ಡಿಂಬ ಮಾತ್ರವಾಗಿ ನಿಂತುಕೊಂಡಿದ್ದವು. ಕೆಲವು ರುಂಡ, ಡಿಂಬಗಳೆರಡೂ ಬೇರೆಬೇರೆಯಾಗಿ ಕೆಡೆದಿದ್ದವು. ಕೆಲವು ಚಿಕ್ಕ ಮರಗಳು ದೀರ್ಘಕಾಯದ ಮರಗಳ ಕೈಗಳ ನಡುವೆ ವಾಲಿ, ಆಧರಿಸಿ ನಿಂತುಕೊಂಡಿದ್ದವು. ಹಿತ್ತಲು ತುಂಬಾ ನೀರು. ಅಲ್ಲಲ್ಲಿ ಕುಳಿಗಳು,

ಹೆಳ್ಳುಳಿಗಳು ನೀರು ತುಂಬಿ ತಮ್ಮಿರವನ್ನು ಮರೆಪಡಿಸಿಕೊಂಡಿದ್ದವು. ಹೊಲ, ಗದ್ದೆಗಳು, ಕೆನ್ನೀರ ಹೊಳೆಯಾಗಿದ್ದವು. ನೆರೆನೀರಿನಿಂದ ಅಸಾಧಾರಣವಾಗಿ ಮೇಲೇರಿದ ನದಿಯು ನೀರು ಜಲಾವರ್ತದಿಂದ ಗಿರಗಿರನೆ ತಿರುಗಿ, ತನ್ನ ದಾರಿಯಲ್ಲಿದ್ದ ಮಣ್ಣಿನ ಅಣೆಕಟ್ಟನ್ನು ಕೊಚ್ಚಿ ಹರಿದೋಡುತ್ತಿತ್ತು. ಅದರ ವೇಗಕ್ಕೆ ಎಷ್ಟೋ ಹೆಬ್ಬಂಡೆಗಳು ತಮ್ಮ ಪ್ರಸ್ಥಾನವನ್ನುಳಿದು ನೂರು ಮಾರು ದೂರದಲ್ಲಿ ಉರುಳಿದ್ದವು. ಬಿಳಿಪಟಗಳಿಂದ ಶೋಭಿಸುತ್ತಿರುವ ಕಾರೋಡಗಳು ಹಲವು ಅಂಬಿನ ವೇಗದಿಂದ ಆ ನದಿಯ ಮೇಲೆ ಸಾಗಿಹೋಗುತ್ತಿದ್ದವು. ನೀರ ನಡುವೆ ಎದ್ದುನಿಂತ ಕುದುರುಗಳ ಕುರುಹಾದರೂ ಕಾಣುತ್ತಿರಲಿಲ್ಲ. ಎಲ್ಲಿ ನೋಡಿದರೂ ನೀರು! ವರ್ಷಾಧಿಪನು ಅಲ್ಲಿ ಹಲವಂಗವಾಗಿ ತನ್ನ ಭೀಕರತೆಯನ್ನು ಪ್ರದರ್ಶಿಸುವಂತೆ ತೋರುತ್ತಿತ್ತು.

"ಲಲಿತೆ! ಊಟಕ್ಕೆ ಬಾ!" ಎಂದು ಕರೆದರು ಗಣೇಶರಾಯರು.

ಊಟವಾಗಿ ಬಂದಮೇಲೆ ಮಲಗಿಕೊಂಡವಳಿಗೆ ಹಾಗೆಯೇ ನಿದ್ರೆ ಬಂದಿತು. ಹೊರಗೆ ಜಡಿ ಮಳೆ ಪುನಃ ಹೊಯ್ಯಲು ಮೊದಲಾಗಿತ್ತು.

ಲಲಿತೆ ತವರುಮನೆಗೆ ಎಷ್ಟು ಸಂತೋಷದಿಂದ ಬಂದಿದ್ದಳೋ, ಬಂದ ಮೇಲೆ ಅಷ್ಟೇ ಬೇಸರ ವುಂಟಾಯಿತು. ಅದು ತನಕ ಅವಳ ಹೃತ್ಕಂದರದಲ್ಲಿ ಅಡಗಿದ್ದ ರಾಜಾರಾಮನ ಮೂರ್ತಿ ಮೇಲೆದ್ದು ಅವಳನ್ನು ಕಾಡಿಸತೊಡಗಿತು. ಆಕಾಶದಲ್ಲಿ ತೇಲುವ ಮುಗಿಲಿನಲ್ಲಿ, ಬಯಲಿನಲ್ಲಿ, ಹರಿವ ಹೊಳೆಗಳಲ್ಲಿ, ಕೆರೆಯ ತೆರೆಗಳ ನಡುವೆ, ಮರದ ಹೊದರುಗಳಲ್ಲಿ ಅವನ ಮೂರ್ತಿ ಗೋಚರಿಸತೊಡಗಿತು. ಹಕ್ಕಿಗಳ ಚಿಳಿಪಿಳಿ ಗಾನವು ಅವನು ಅವಳನ್ನು ಕರೆಯುವಂತೆ ಅವಳಿಗೆ ಕೇಳಿಸುತ್ತಿತ್ತು. ದೂರದಲ್ಲಿ ಯಾರಾದರೂ ನಡೆಯುವುದು ಕಣ್ಣಿಗೆ ಬಿದ್ದರೆ, ಅದು ರಾಜಾರಾಮನೆಂದೇ ಭಾವನೆ ಅವಳಿಗೆ. ಅರಳುವರಳು, ಬೀಸುವ ಗಾಳಿ, ಈಸುವ ದೋಣಿ, ಸೂಸುವ ಮಂಜು, ಚಲಿಸುವ ಮೋಡ-ಎಲ್ಲವೂ ಅವಳಿಗೆ ರಾಜಾರಾಮನ ಸ್ಮರಣೆಯನ್ನು ತರುತ್ತಿತ್ತು. ಮನೋವೇದನೆಯನ್ನುಂಟು ಮಾಡುತ್ತಿತ್ತಲ್ಲದೆ ಅವಳನ್ನು ಆಹ್ಲಾದಿಸುತ್ತಿರಲಿಲ್ಲ. ಸಂಕ್ಷೇಪವಾಗಿ, ಅವಳು ಕಾಯದಲ್ಲಿ ತವರ್ಮನೆಯಲ್ಲಿದ್ದರೂ ಅವಳ ಮನಸ್ಸಿ ಇನ್ನೂ ಸರ್ವದಾ ಪತಿಗೃಹದಲ್ಲೇ ಅಲೆದಾಡಿಕೊಂಡಿತ್ತು.

"ಅಯ್ಯೋ! ಅಯ್ಯೋ! ಅಯ್ಯೋ!"

ಲಲಿತೆ ಥಟ್ಟನೆ ಎಚ್ಚತ್ತಳು. ನಿದ್ದೆಯಲ್ಲೇ ಕನಸಿನಲ್ಲಿ ಅವಳು ಹಾಗೆ

ಭಯಂಕರವಾಗಿ ಕೂಗಿದಳು. ಬಳಿಯಲ್ಲೇ ಇದ್ದ ದಾಮೋದರನು ಓಡಿ ಬಂದನು.

"ಏನು? ಏನು, ಲಲಿತೆ! ಏನಾಯಿತು?"

ಹೊರಗೆ ಆಕಾಶದಲ್ಲಿ ಢಮಾಮಿ ಗದ್ದಲದಿಂದ ಸಿಡಿಲು ಭೇರಿ ಹೊಡೆಯಿತು. ಮಿಂಚು ಮಿಂಚಿ ಹೊಂಚಿತು. ಜಡಿಮಳೆ ಇನ್ನೂ ನಿಂತಿರಲಿಲ್ಲ. ನಿದ್ದೆ ಮುಗಿದು ಕನಸು ಮರೆಯಾದರೂ, ಇನ್ನೂ ಆ ಕನಸನ್ನೇ ಚಿಂತಿಸುತ್ತಾ ಅವಳು ಗಡಗಡನೆ ನಡಗುತ್ತಿದ್ದಳು. ಕಣ್ಣು ಇನ್ನೂ ನಿಮೀಲಿತವಾಗಿತ್ತು.

"ಏನಾಯಿತು, ಲಲಿತೆ?" ಎಂದು ಮಗುದೊಮ್ಮೆ ಕೇಳಿದನು ದಾಮೋದರ.

ಲಲಿತೆ ಮಾತನಾಡಲು ಸ್ವಲ್ಪ ಹೊತ್ತು ಬೇಕಾಯಿತು. ಅವಳು ಕಂಡ ಆ ಕನಸು ಬಹಳ ಭಯಂಕರ! ಅದನ್ನೇ ಸಂಕ್ಷೇಪವಾಗಿ ಬಣ್ಣಿಸಿ ನಿರವಿಸಿದಳು ...........

ಅವಳೂ ರಾಜಾರಾಮನೂ ಹೋಗುತ್ತಿದ್ದಾರೆ. ಎಲ್ಲಿಗೋ ಅವಳಗರಿಯದು. ಆಕಾಶಮಾರ್ಗವಾಗಿ ಹೋಗುತ್ತಿದ್ದಾರೆ. ಅವರ ಲೋಚನಗಳ ಮುಂದೆ ತಾರೆಗಳು ಆ ನಿಶಾಮುಖದ ಸೂರ್ಯನ ಮಾಂದ್ಯ ಬೆಳಕಿನಲ್ಲಿ ನಸು ಮಿನುಗುತ್ತಿವೆ. ತೆಂಗು, ಕೌಂಗುಗಳು, ಅವರ ಕಾಲನ್ನೂ ಚುಂಬಿಸುತ್ತಲಿವೆ. ಅವರ ಅಕ್ಕ ಪಕ್ಕಗಳಲ್ಲಿ ಧವಲ, ಶ್ಯಾಮ ಮೋಹರುಗಳು ಕುಣಿಯುತ್ತಿವೆ; ಉಯ್ಯಾಲೆಯಂತೆ ತೂಗುತ್ತಿವೆ. ಸಿಡಿಲ ಅಬ್ಬರವಿಲ್ಲ; ಮಿಂಚಿನ ಸುಳಿವಿಲ್ಲ. ಲಲಿತೆ, ರಾಜಾರಾಮರಿಬ್ಬರೂ ಈ ಸೊಗಸಿನ ವಾತಾವರಣದಲ್ಲಿ, ಆನಂದದಿಂದ, ಸೌಂದರ್ಯ ಪಾನ ಮತ್ತರಾಗಿ ಹೋಗುತ್ತಿದ್ದಾರೆ. ನಡೆಯುತ್ತಾ, ನಡೆಯುತ್ತಾ ಅವರಿಬ್ಬರೂ ಇಂದ್ರಪುರಿಯ ಸನಿಯ ಬಂದಿದ್ದರು

ನೋಡ ನೋಡುತ್ತಿದ್ದಂತೆ ಅವರಮುಂದೆ ಒಂದು ಮಹಾಗಾತ್ರದ ಬೆಳ್ಮುಗಿಲು ನಡೆದು ಬರತೊಡಗಿತು. ನೋಡಿದ ಲಲಿತೆಗೆ ಅದು ಕಾಳಿದಾಸನ 'ಮೇಘದೂತ' ದಲ್ಲಿ ಅನುವರ್ಣಿಸಿದ ಪ್ರಣಯ ದೂತನಂತೆ ಕಂಗೊಳಿಸಿತು. ಛೇ! ಅಲ್ಲ—ಧವಲ ಚೀರವನ್ನುಟ್ಟು, ಹೊನ್ನಿನ ಕಾಂತಿಯಿಂದ ಮೋಹಿಸುವ ನೋಟದಿಂದ, ತನ್ನ ಅಸಂಖ್ಯಾತ ಬಿಳಿ ರೆಕ್ಕೆಗಳಿಂದ ಹಾರಿ ಬರುವ ಅಚ್ಚರಿಸಿಯೇ ಅದು! ಇನ್ನೂ ಹತ್ತಿರ ಹತ್ತಿರಕ್ಕೆ ಬಂದಂತೆ ಲಲಿತೆ

ನೋಡಿದಳು. ಅದು ಮಾಗಿಲೂ ಅಲ್ಲ, ಅಚ್ಚರಸಿಯೂ ಅಲ್ಲ. ಮತ್ತೆ ?—ಯಾರೋ ಒಬ್ಬ ಮಹಿಳೆ. ಸಮೀಪಕ್ಕೈತಂದಂತೆ ಲಲಿತೆಗೆ ತಾನು ಹಿಂದೆ ಎಲ್ಲೋ ಅವಳನ್ನು ನೋಡಿದ್ದೇನೆಂಬ ಸ್ಮರಣೆಯುಂಟಾಯಿತು. ಆದರೆ, ಎಷ್ಟು ಯೋಚಿಸಿದರೂ, ಅವಳಾರೆಂದು ಗೊತ್ತಾಗಲಿಲ್ಲ.

ಅಷ್ಟರಲ್ಲಿ ಅವಳು ಕಿಲಕಿಲನೆ ನಕ್ಕಳು. ಲಲಿತೆಗೆ ಅದು ಅವಳು ತನ್ನನ್ನು ಅಣಕಿಸುವಂತೆ ತೋಚಿತು. ರಾಜಾರಾಮನ ಮೊಗವನ್ನೀಕ್ಷಿಸಿದಳು. ಅವನ ತುಟಿಗಳಮೇಲೆ ಮಂದಹಾಸ ಮೂಡಿದ್ದಿತು. ಲಲಿತೆ ಭಯ ಭೀತಳಾದಳು. ಆ ಮಹಿಳೆಯು ಕಡೆಗೆ ನೋಡಿದಾಗ ಆಕೆ ರಾಜಾರಾಮನನ್ನು ಕಣ್ಣು, ಕೈಗಳಿಂದ ಕರೆಯುತ್ತಿದ್ದಳು. ರಾಜಾರಾಮನು ಲಲಿತೆಯನ್ನು ನೋಡಿದನು. ಲಲಿತೆ, "ಹೋಗುತ್ತೀರಾ? ಹೋಗುತ್ತೀರಾ?" ಎಂದು ಕೇಳಿದಳು. ರಾಜಾರಾಮನ ಮನಸ್ಸು ಚಂಚಲವಾಯಿತು. ಆದರೆ ಆ ಮಹಿಳೆ ಬಿಡದೆ ಅವನ ಬಳಿಗೆ ಧುಮುಕಿ, ಅವನನ್ನೆತ್ತಿಕೊಂಡು ಮೇಲೆ ಹಾರಿದಳು. ಲಲಿತೆಯೂ ಕೂಗುತ್ತಾ ಅವರಿಬ್ಬರನ್ನು ಹಿಂಬಾಲಿಸಿದಳು. ಆದರೆ, ರಾಜಾರಾಮ— ಆ ಮಹಿಳೆ ಇಬ್ಬರೂ ಕೂಡಿ ಲಲಿತೆಯನ್ನು ಒದ್ದುಬಿಟ್ಟರು. ಲಲಿತೆ ಬಿದ್ದುದು ನೆಟ್ಟಗೆ ರಸಾತಳಕ್ಕೇ! ಹೆಬ್ಬಂಡೆಯೊಂದರ ಮೇಲೆ ಬಿದ್ದ ಅವಳ ಉಸಿರು ಕೊನೆಯ ಬಾರಿಗೆ ಶಾಂತವಾದಂತಾಗಲು ಅವಳು ಹಾಗೆ ಭಯಂಕರವಾಗಿ ಕೂಗಿಕೊಂಡಿದ್ದಳು.

ಕನಸನ್ನು ಕೇಳಿ ದಾಮೋದರನು, "ಇಷ್ಟೇಯೇ!" ಎಂದನು.

"ಅದೇನು! ನಿನಗದು ಅಷ್ಟು ಸಾಮಾನ್ಯವಾಯಿತೇ?"

"ಅಲ್ಲದೆ? ಇಂಥ ಕನಸುಗಳಿಗೆಲ್ಲಾ ತಲೆಯಿದೆಯೇ? ಬಾಲವಿದೆಯೇ? ಇದನ್ನೆಲ್ಲಾ ನಂಬಿ ಚಿಂತಿಸುವವರು ಮೂರ್ಖರು! ಹುಚ್ಚರು!"

"ಒಂದು ವೇಳೆ ಹಾಗೆ ಚಿಂತಿಸದಿರುವವರೇ ಮೂರ್ಖ-ಮರುಳರಾದರೆ!"

"ನೋಡಿ, ಆ ಸಮಯದಲ್ಲಿ ಹೇಳಬಹುದು."

ಲಲಿತೆ ಮಾತನಾಡಲಿಲ್ಲ.

"ಇದೆಲ್ಲಾ ಸುಮ್ಮನೆ ಅಲ್ಲವೇ! ನಾವು ಮನಸಿನಲ್ಲಿ ಯಾವುದನ್ನು ಚಿಂತಿಸುತ್ತೇವೋ, ಮಲಗಿಕೊಂಡರೆ ಅದೇ ವಿಷಯವಾಗಿ ನಮಗೆ ಕನಸು ಬೀಳುತ್ತದಂತೆ!"

"ಇರಬಹುದು!"

"ಇರಬಹುದೇ? ಹೆಂಗಸರಿಗೆ ಯಾವಾಗಲೂ ಗಂಡಸರ ಶೀಲದಲ್ಲಿ ಸಂಶಯುವೇ!"

"ಅದು ಹೆಂಗಸರ ತಪ್ಪೇ?"

"ಅಲ್ಲಲ್ಲ; ಗಂಡಸರದೇ ತಪ್ಪು! ಹೆಂಡತಿಗೆ ತನ್ನ ಯೋಗ್ಯ ಶೀಲದ ವಿಷಯುವಾಗಿ ಸರ್ಟಿಫಿಕೇಟ್ ಕೊಡದಿರುವುದು ತಪ್ಪು! ನಿಮಗೆ ಹೆಂಗಸರಿಗೆ ಗಂಡಸರ ಶೀಲದಲ್ಲಿ ಇಷ್ಟು ಸಂಶಯ ವಾದರೆ, ನಾವು–ಗಂಡಸರು, ನಿಮ್ಮನ್ನು–ಹೆಂಗಸರನ್ನು ಹೇಗೆ ನಂಬಬೇಕು?"

"ಹೇಗೆ ನಂಬಬೇಕೇ? ನಮಗೆ–ಹೆಂಗಸರಿಗೆ, ನಿಮಗೆ–ಗಂಡಸರಿಗಿರು ವಷ್ಟು ಸ್ವಾತಂತ್ರ್ಯವಿದೆಯೇ?"

"ಇಲ್ಲದೆ, ಎಲ್ಲಿಗೆ ಹೋಗಿದೆ? ಇತ್ತೀಚೆಗೆ ನೀವು ಸ್ವಾತಂತ್ರ್ಯಬೇಕು, ಸ್ವಾತಂತ್ರ್ಯಬೇಕು ಎಂದು ಹೊಡೆದಾಡಿ ಸ್ವಾತಂತ್ರ್ಯವನ್ನು ಕಸಿದು ತೆಗೆದು ಕೊಳ್ಳಲಿಲ್ಲವೇ?"

"ಅದು ನಮಗೆ ದೊರೆತುದು ಕೇವಲ ನೂರರಲ್ಲಿ ಒಂದು ಪಾಲು; ಅಷ್ಟೇ!"

"ಹೇಗೇ ಇರಲಿ; ಈಗ, ನಿನಗೆ ಮುಖ್ಯವಾಗಿ ಭಾವನ ಶೀಲದ ಕುರಿತು ಸಂಶಯು; ಅಲ್ಲವೇ? ಇದೇ ಹೆಂಗಸರಲ್ಲಿರುವ ಒಂದು ದೊಡ್ಡ ದುರ್ಗುಣ!"

"ಹೋಗೋ! ನಿನಗೊಂದು ಮದುವೆಯಾಗಲಿ. ಆಗ ಎಲ್ಲವೂ ಗೊತ್ತಾಗುತ್ತದೆ!"

"ಅದಕ್ಕೇ ಅಲ್ಲವೇ, ನಾನು ಮದುವೆಯಾಗುವುದಿಲ್ಲ ಎಂದು ಹೇಳು ವುದು!"

"ಅದೇಕೆ?"

"ನಾನು ನನ್ನಾಕೆಯು ಶೀಲದಲ್ಲಿ ಸಂಶಯು ತಾಳುವುದು, ಆವಳು ನನ್ನ ಶೀಲದಲ್ಲಿ ಕುಂದು ಹುಡುಕುವುದು,— ಈ ಮಲಾಮತ್ತೇ ಬೇಡ!"

"ಓಹೋಹೋ! ಇದೆಲ್ಲಾ ಬಾಯಿಯಲ್ಲಿ; ಕಾರ್ಯದಲ್ಲಿ ಮಾತ್ರ ಹತ್ತು ಮದುವೆಯಾಗುತ್ತೀಯೋ ಏನೋ?"

"ಇನ್ನು ಮುಂದೆ ನಿನಗೇ ಗೊತ್ತಾದೀತು!"

ಇವರ ಈ ಸಂಭಾಷಣೆಯನ್ನು ಹೊರಗಿನಿಂದಲೇ ಕೇಳುತ್ತಿದ್ದ ಗಣೇಶ ರಾಯರೂ ಒಳಗೆ ಬಂದರು.

"ಏನೋ, ದಾಮೂ! ಇದು ಲಡಾಯಿ?"

"ಲಡಾಯಿ ಏನೂ ಇಲ್ಲವಪ್ಪ!" ಎಂದಳು ಲಲಿತೆ.

"ಮತ್ತೆ?"

"ಲಲಿತೆಗೆ ಒಂದು ಕನಸಾಯಿತಂತೆ!"

"ಎಂಥ: ಕನಸು?"

"ಹೇಳೇ, ಲಲಿತಾ!"

ಕನಸನ್ನು ಕೇಳಿ ಗಣೇಶರಾಯರ ಮೋರೆ ಗಂಭೀರವಾಯಿತು. ಅವರ ಮೋರೆಯನ್ನು ನೋಡಿ ದಾಮೋದರ ಕಿಲಕಿಲನೆ ನಕ್ಕ.

"ಇದೇನಪ್ಪಾ! ನಿನಗೂ ಕನಸಿನ ನಂಬಿಕೆಯ ಹುಚ್ಚು ಹಿಡಿಯಿತೇ?"

"ಹಾಗೆ ಎಲ್ಲ ಕನಸನ್ನೂ ಸುಳ್ಳೆಂದು ತ್ಯಾಜ್ಯ ಮಾಡಲು ಬರುವಂತಿಲ್ಲ, ದಾಮೂ!"

"ಯಾರು ಹೇಳಿದವರು, ನಿನಗೆ?"

"ರಾಮಾಯಣದಲ್ಲಿ ದಶರಥ ಸಾಯುವ ಮುಂಚೆ ಭರತ, ಶತ್ರುಘ್ನರಿಗೆ ದುಸ್ವಪ್ನವಾಗಿತ್ತು."

"ಫೂ! ನಿನ್ನ ರಾಮಾಯಣವನ್ನೇನು ದೇವತೆಗಳು ಬರೆದಿಲ್ಲ. ಅದು ಶುದ್ಧ ಕಟ್ಟುಕಥೆ!"

ದಾಮೋದರನು ಇಬ್ಬರನ್ನೂ ಹಾಸ್ಯಮಾಡಿ ನಕ್ಕು ಅಲ್ಲಿಂದ ಹೊರಟು ಹೋದನು. ಗಣೇಶರಾಯರೂ ಆಲೋಚನಾಭರಿತರಾಗಿ ಹೊರಗೆ ನೋದರು. ಲಲಿತೆಯೂ ಕದಡಿದ ಮನಸ್ಸಿನಿಂದ ಹೊರಗೆ ಛಾವಡಿಗೆ ಬಂದಳು.

ಜಡಿಮಳೆ ಹನಿಹನಿಯಾಗಿ, ಕೊನೆಗೊಮ್ಮೆ ಆ ಹನಿಯೂ ಮಾಯವಾಗಿತ್ತು. ಕಣ್ಣೀರ ಕೋಡಿ ಬತ್ತಿ, ಕಣ್ಣುಗಳು ಬಾಡಿ ಮುಚ್ಚಿದ ಲಲನೆಯ ಮಲಿನ ವದನದಂತೆ ಅಂತರಿಕ್ಷವು ಮ್ಲಾನವಾಗಿತ್ತು. ಲಲಿತೆ, ತನ್ನ ಮುಖವನ್ನೂ, ಆಕಾಶದ ಮುಖವನ್ನೂ ಹೋಲಿಸಿ ನೋಡಿದಳು. ನಿಶಾಮುಖ ಸಮಯ; ಉತ್ಕ್ರಮಿಸುವ ಸೂರ್ಯನ ಸಂಧ್ಯಾರಾಗದಿಂದ ನಭಸ್ತ್ರೀಯ ಮುಗಿಲುಮೊಗಗಳು ರಕ್ತರಂಜಿತವಾಗಿದ್ದವು. ಮಳೆಯು ಕೊನೆಯ ಬಾರಿಗೆ ಮೌನವಾದ ಸೂಚನೆಯಂತೆ, ವ್ಯೋಮಾಂಗನೆ ಧರಿಸಿದ ಕೊರಳಹಾರದಂತೆ, ಕಾಮನಬಿಲ್ಲು

ಪಡುದಿಗಂತದಿಂದ ಮೂಡುದಿಗಂತದ ವರೆಗೂ ಚಾಚಿಕೊಂಡಿತ್ತು. ಅದರ ಛಾಯೆ, ನದಿ, ಹಳ್ಳಗಳಲ್ಲಿ ಲಕಲಕಿಸುತ್ತಿತ್ತು. ಕಾಮನಬಿಲ್ಲು ಮೆಲ್ಲಮೆಲ್ಲನೆ ಮರೆಯಾದಂತೆ, ಸೂರ್ಯನ ಬೆಳಕೂ ಕುಂದುತ್ತಾ ಬರುತ್ತಿತ್ತು. ಅಸ್ತಾಚಲ ದಿಂದ ಪದದಪ್ಪಿ, ಅವನು ಅಗಾಧವಾದ ಸಮುದ್ರದೆಡೆಗೆ ಜಾರಿದ್ದನು. ಕಾಮನ ಬಿಲ್ಲು ಮರೆಯಾಯಿತು. ಸೂರ್ಯನು ಕಡಲಾಶ್ರಯವನ್ನು ಪಡೆದನು. ದೂರದ ಒಂದು ಮನೆಯಲ್ಲಿ ವೃಂದೆಯ ಮುಂದೆ ದೀಪವನ್ನು ಮಡಗಿ ಊದಿದ ಶಂಖದ 'ಭೂಂ!' ನಾದವು ಬಂದು ಕಿವಿದೆರೆಯೊಳಗೆ ಸೇರಿತು. ಲಲಿತೆ ಮನೆಯೊಳಗೆ ಹೋದಳು.

ಆ ದಿನವಿಡೀ ಇರುಳು ಲಲಿತೆಗೆ ನಿದ್ದೆ ಬರಲಿಲ್ಲ; ಮೊದಲೇ ಊಟದಿಂದ ಭಾರವಾದ ಒಡಲು, ಯೋಚನೆಯಿಂದ ಭಾರವಾದ ಮನಸ್ಸು, ಎರಡೂ ಕೂಡಿ ನಿದ್ದೆಯನ್ನು ಒದ್ದೋಡಿಸಿ ಬಿಟ್ಟವು. ರಾತ್ರಿ ಹನ್ನೆರಡು ಗಂಟೆಯ ಮೇಲೆ ಒಂದು ಗಂಟೆಯಾಯಿತು. ನಿದ್ದೆಯಿಲ್ಲ. ಹೊರಳಿ, ಹೊರಳಿ ದೇಹವು ಬೆವತಿತು; ಆಯಾಸವಾಯಿತು. ಗಣೇಶರಾಯ—ದಾಮೋದರ— ಇಬ್ಬರೂ ನಿದ್ದೆಯಲ್ಲಿ ಗುರುಕಾಯಿಸುವುದು ಚೆನ್ನಾಗಿ ಕೇಳುತ್ತಿತ್ತು. ವನಧಿಯ ಗರ್ಜನೆ ಆ ನಿಶಿಯ ನೀರವತೆಯಲ್ಲಿ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಗಾಳಿಗೆ ಚಲಿಸುವ ಮರ ಗಿಡಗಳ ಸ್ಪಂದನಾರವವೂ ಕರ್ಣಗೋಚರವಾಗಿತ್ತು. ಮಳೆ ಸುರಿದು, ಅರೆಕ್ಷಣ ನಿಂತು, ಪುನಃ ಹೊಯ್ಯುತ್ತಿತ್ತು. ಆಗಾಗ, ಪಟ್ಟಣದಲ್ಲಿ ಬೀಟಿನ ಪೋಲೀಸರ ಸಿಳ್ಳು ಕೇಳಿಸುವಂತೆ, ನಾಯಿಗಳು ಗುರುಗುಟ್ಟುವುದು ಕೇಳಿಸು ತ್ತಿತ್ತು. ಸಮುದ್ರ ಕಿನಾರೆಯಲ್ಲಿ ನರಿಗಳ ಹುಯ್ಯಲು.

ಆದರೆ, ಲಲಿತೆಗೆ ಇದಾವುದರ ಗಮನವೇ ಇರಲಿಲ್ಲ. ಅವಳು ಆಲೋ ಚನಾಭರಿತಳಾಗಿಲ್ಲದಿದ್ದರೆ, ಇಂಥ ಮಧ್ಯರಾತ್ರಿಯಲ್ಲಿ ಒಬ್ಬಳೇ ಹೆದರದೆ, ಎಚ್ಚರದಿಂದಿರುವುದು ಅಸಾಧ್ಯವಾಗಿತ್ತು. ಭೂತ, ಪಿಶಾಚಿಗಳೆಂದರೆ ಅವಳಿಗೆ ತುಂಬಾ ಹೆದರಿಕೆ. ಅವಳು ಮಲಗಿಕೊಂಡ ಕೋಣೆಯ ಹೊರಗೆ ಐದಾರು ಮಾರು ದೂರದಲ್ಲೇ ಒಂದು ಭೂತದ ಗುಡಿಯಿತ್ತು. ಅವಳ ತಾಯಿ ಮಡಿ ದಾಗ, ಅವಳ ಭೌತಿಕ ಶರೀರವನ್ನು ಅದೇ ಆ ಭೂತದ ಗುಡಿಯ ಸಮೀಪವೇ ದಹಿಸಿದ್ದರು. ಸತ್ತವರ ಆತ್ಮಗಳು ರಾತ್ರಿಕಾಲದಲ್ಲಿ ಮಸಣದಿಂದೆದ್ದು ಸುತ್ತು ಸುತ್ತಾಡಿ, ತಮ್ಮ ಮನೆಯ ಬಳಿಗೆ ಬಂದು ತಮ್ಮ ಬಂಧುಗಳ ಹೆಸರನ್ನು ಕೂಗುತ್ತಿವೆಯೆಂದು ಅವಳು ಕೇಳಿದ್ದಳು. ಇವೇ ಮುಂತಾದವು ಅವಳಿಗೆ

ಇತರ ಸಮಯದಲ್ಲಾದರೆ ಹೆದರಿಸುವಂಥ ವಿಷಯಗಳು. ಆದರೆ ಇಂದು ಆಲೋಚನಾ ಪ್ರವಾಹವು ಅಂಜಿಕೆ, ನಿದ್ದೆ ಎರಡನ್ನೂ ದೂರ ತೇಲಿಸಿ ಬಿಟ್ಟಿದ್ದಿತು.

ಲಲಿತೆ ಆಲೋಚನೆಯಲ್ಲೇ ಬೆಳಗನ್ನು ಕಾಣಲು ಯತ್ನಿಸಿದಳು. ಸುರಿಯುವ ಮಳೆಯ ಗಂಭೀರವಾದ, 'ಝೋ! ಝೋ!' ಸ್ವರದ ನಡುವೆ ಗಡಿಯಾರದ ಕಿರುಸ್ವರವು ಅಶ್ರುತವಾಗಿತ್ತು. ವರ್ಷಾಧಾರೆ ಸುರಿದಂತೆ, ಆಲೋಚನಾಧಾರೆ ಹರಿಯಲು ಉಪಕ್ರಮಿಸಿತು.

ಲಲಿತೆ ಆಲೋಚಿಸಿದಳು: ತಾನು ಆ ಕನಸನ್ನು ನಂಬಲೇ? ನಂಬದಿರುವುದೆಂತು? ಆದರೆ, ದಾಮೋದರ ಹಾಸ್ಯಮಾಡಿ ನಕ್ಕುಬಿಟ್ಟನಲ್ಲ! ಅವನೆಂದಂತೆ ತನ್ನದು ಬರೇ ಹುಚ್ಚು ಕಲ್ಪನೆಯಾಗಿರಬಹುದೇ? ಸಂಸ್ಕೃತರು ಹೇಳುವಂತೆ ನಿಜವಾಗಿಯೂ ಕನಸಿನಲ್ಲಿ ಹುರುಳಿಲ್ಲವೇ? ಹಾಗಿದ್ದರೆ ಕನಸು ಬೀಳಲು ಕಾರಣವಾದರೂ ಯಾವುದು? ಆಲೋಚನೆಯಲ್ಲಿರುವಾಗಲೇ ಕೋಳಿ ಮೊದಲ ಬಾರಿಗೆ ಕೂಗಿತು. ಚೆನ್ನಾಗಿ ಬೆಳಕಾಗುವವರೆಗೂ ಲಲಿತೆ ಹಾಸಿಗೆಯಲ್ಲೇ ಕುಳಿತುಕೊಂಡು, ಹೊರಗೆ ಆಕಾಶದಲ್ಲಿ ಮಿಂಚಿನ ಬಳುಕಾಟವನ್ನೂ, ಗುಡುಗುತ್ತಿರುವ ಮುಗಿಲುಗಳನ್ನೂ, ಧಾರಾಸಂಪಾತವಾಗಿ ಕರೆಯುತ್ತಿರುವ ಮಳೆಯನ್ನೂ ನೋಡುತ್ತಿದ್ದಳು.

ಚೆನ್ನಾಗಿ ಬೆಳಗಾಯಿತು; ಲಲಿತೆಯ ಮಾಂದ್ಯವು ಸ್ವಲ್ಪವೂ ಕಡಮೆಯಾಗಲಿಲ್ಲ. ಹಕ್ಕಿಗಳ ಚಿಳಿಪಿಳಿ ಗಾನವು ಆಕೆಗೆ ಕರಕರೆಯನ್ನುಂಟು ಮಾಡಿತು. ಅರುಣರಾಗದ ಬೆಡಗಿನಲ್ಲಿ ಕಿಳಕಿಳನೆ ನಗುತ್ತಿರುವ ಜಗತ್ತು ತನ್ನನ್ನು ಅಣಕಿಸುವಂತೆ ಅವಳಿಗೆ ಭಾಸವಾಯಿತು. ಜಗತ್ತಿಗೇ ಬೆಳಕಾಗಿದ್ದರೂ, ಅವಳ ಹೃದಯದಿಂದಿನ್ನೂ ನಿಶಿ ಮರೆಯಾಗಿರಲಿಲ್ಲ.

ಆಗ ತಾನೇ ಎದ್ದು ಬಂದ ದಾಮೋದರನು ಜಗಲಿಯಲ್ಲಿ ಹುಚ್ಚಿಯಂತೆ ಕುಳಿತಿದ್ದ ಲಲಿತೆಯನ್ನು ನೋಡಿದನು. ಹುಚ್ಚನಂತೆ ಅವನು ಕಿಲಕಿಲನೆ ನಕ್ಕನು.

"ಲಲಿತಾ!"

"............"

"ಏನು, ಲಲಿತಾ! ನಿನಗೆ ಊಮರೋಗ ಹಿಡಿಯಿತೇನು?"

ಲಲಿತೆ ಮತ್ತೂ ಮಾತನಾಡಲಿಲ್ಲ.

ಹತ್ತಿರ ಬಂದು ಅವಳನ್ನು ಅಲುಗಿಸಿ ಕೇಳಿದನು. ಇನ್ನೂ ಮೌನ!

"ಇಲ್ಲ; ನಿನಗೆ ಖಂಡಿತ ಹುಚ್ಚೇ ಹಿಡಿದಿದೆ!"

"ಬೆಕ್ಕಿಗೆ ಆಟ; ಇಲಿಗೆ ಕಾಟ!"

"ಹಾಗಾದರೆ ನಿನಗೆ ಬಾಯಿ ಬರುತ್ತದೆ."

"ನನಗೆ ನಿನ್ನೆ ರಾತ್ರಿಯೂ ಒಂದು ಕನಸಾಯಿತು!"

"ಫು! ಸ್ವಲ್ಪ ವರ್ಣಿಸು ನೋಡೋಣ."

"ಒಂದು ಸೇತುವೆ; ನಾನೂ ಅವರೂ ಹೋಗುತ್ತಿದ್ದೇವೆ ಸೇತುವೆ ಬಹಳ ಸಪೂರ! ಕಬ್ಬಿಣದ್ದೇನಲ್ಲ; ಒಂದೇ ಒಂದು ಕೌಂಗಿನ ಮರ. ಕೆಳಗೆ ದೊಡ್ಡ ಹೊಳೆ. ಭೋರ್ಗರೆಯುವ ಜಲರಾಶಿ. ಪಡುಗಡಲನ್ನೂ ಮೀರಿ, ಚಿಮ್ಮಿಚಿಗಿಯುವ ತೆರೆಗಳು; ಅವುಗಳ ತುಂತುರ ಹನಿ ನಮ್ಮ ತಲೆಯ ಮೇಲಕ್ಕೂ ಹಾರುತ್ತಿತ್ತು. ನಮ್ಮ ಮುಂದಿದ್ದುದು ಒಂದು ವಿಶಾಲವಾದ ಮೈದಾನು; ಶಾಡ್ವಲತೃಣಸಂದೋಹದ ನಡುವೆ ಚುಕ್ಕಿಗಳಂತೆ ರಂಜಿಸುತ್ತಿರುವ ಕರಿತುರುವಿಂಡು. ನಾವು ಸ್ವಲ್ಪ ದೂರಕ್ಕೆ ನಡೆದಿದ್ದೆವು. ಉದಯಾಚಲದಿಂದ ಮೆಲ್ಲಡೆಯಿಂದ ಮೇಲೆ ಬರುತ್ತಿದ್ದ ಪಗಲಾಣ್ಮನನ್ನೂ, ಅವನ ಕಡುಗಾಂತಿಯಲ್ಲಿ ಶಾಂತಿಹೀನವಾಗುತ್ತಿದ್ದ ಪಡುವಲ ದಿಗಂತದ ಕಾಮನ ಬಿಲ್ಲನ್ನೂ ನಾನು ದಿಟ್ಟಿಸುತ್ತಿದ್ದೆ. ಇದ್ದಕ್ಕಿದ್ದಂತೆ ಸೇತುವೆ ಬಳುಕಿದಂತಾಯಿತು. ನಾನು ನೋಡಿದೆ. ಅವರು ಸೇತುವೆಯನ್ನು ದಾಟಿ ಮೈದಾನು ಸೇರಿದ್ದರು. ಸೇತುವೆ ಜಲರಾಶಿಯ ತೆರೆಗೈಗಳನಕವೂ ಬಳುಕಿತು. ಅವುಗಳ ಶೀತಲಸ್ಪರ್ಶದಿಂದ ನನ್ನ ಕಾಲು ಕೋಡಿ ಹೋಯಿತು. ಒಂದೇ ಒಂದು ಕ್ಷಣ! ಆ ತೀಕ್ಷ್ಣವಾದ ಬಳುಕಾಟಕ್ಕೆ ಸೇತುವೆ ಇಕ್ಕಡಿಯಾಯಿತು. ಅಯ್ಯೋ! ನಾನು ಮೇಲುಗಾಲಾಗಿ ಆ ಪ್ರಚಂಡ ಜಲರಾಶಿಯೊಳಗೆ ಉರುಳಿದೆ. ಶಿಂಶುಮಾರವೊಂದು ಹಿಡಿಬಂದು ನನ್ನನ್ನು ಗಿಳಂಕರಿಸಿತು—ಅಯ್ಯೋ!"

ದಾಮೋದರನು ಮೌನಮುಖಿಯಾಗಿ ಅಲ್ಲಿಂದೆದ್ದು ಹೋದನು. ಲಲಿತೆಯನ್ನು ಹಾಸ್ಯಮಾಡಿದ ಅವನಿಗೆ ಈಗ ತನ್ನ ವರ್ತನೆ ದೋಷಪೂರ್ಣವೆನಿಸಿತು. ಪುನಃ ಪುನಃ ಹೀಗೆ ಕನಸು ಬೀಳುವುದರ ಹೊಲಬಾಗಲಿಲ್ಲ. ಗಣೇಶರಾಯರಂತೂ ಇದನ್ನು ಕೇಳಿ ಹೌಹಾರಿ ಹೋದರು.

ಅದೇ ದಿನವೇ ಲಲಿತೆಯ ಅಂಜಿಕೆಯನ್ನು ಮತ್ತಷ್ಟು ಹೆಚ್ಚಿಸುವ ಪ್ರಸಂಗವೊಂದು ಸಂಭವಿಸಿತು. ಮಳೆ ನಿಂತ ಸುಸಮಯವನ್ನು ನೋಡಿ,

ಊರಿನ ಶ್ಯಾನುಭಾಗರ ಹೆಂಡತಿ, ಮಾತಿನ ಮಲ್ಲಕ್ಕ ಭಾಗೀರಥಿ ದೊಣ್ಣೆಯನ್ನೂರಿಕೊಂಡು ಬಂದಳು. ಗಣೇಶರಾಯರ ಮನೆಯ ಮುಂದಿನಿಂದ ಹಾದು ಹೋಗುವಾಗ ಸಹಜವಾಗಿಯೇ ಮನೆಯ ಕಡೆಗೆ ತಿರುಗಿ ನೋಡಿದಳು. ಬಾಚಿಕೊಳ್ಳದೆ ಹಾರಾಡುತ್ತಿದ್ದ ತಲೆಯಿಂದ, ಅಸ್ತವ್ಯಸ್ತವಾಗಿ ಸೀರೆಯನ್ನುಟ್ಟ ಲಲಿತೆ ಹುಚ್ಚಿಯಂತೆ ಜಗಲಿಯಲ್ಲೇ, ಜಗಲಿಯ ಕೆಳಗೆ ಕಾಲನ್ನಿಳಿಬಿಟ್ಟು ಕುಳಿತುಕೊಂಡಿದ್ದಳು. ನೋಡಿ, ಭಾಗೀರಥಿಯ ಕುತೂಹಲವು ದ್ವಿಗುಣಿಸಿತು. ಮುಂದೆ ಹೋಗಬೇಕೆಂದಿದ್ದವಳು, ಹಾಗೆಯೇ ತಿರುಗಿ ಈ ಕಡೆಗೆ ಬಂದಳು.

ಭಾಗೀರಥಿ ಅತ್ಯಂತ ಸಮೀಪಕ್ಕೆ ಬಂದರೂ ಲಲಿತೆ ಅವಳನ್ನು ಮಾತನಾಡಿಸಲಿಲ್ಲ. ಆಕಾಶವನ್ನೇ ನೋಡುತ್ತಿದ್ದಳು. ಭಾಗೀರಥಿಯೇ ಮೊದಲು ಮಾತನಾಡಿಸಿದಳು:

"ಏನಮ್ಮ! ಯಾವಾಗ ಬಂದದ್ದು? ನನಗೆ ಗೊತ್ತೇ ಇಲ್ಲ."

"ಆಂ? ಹೋ! ನೀವೋ? ಏನೆಂದಿರಿ?"

"ಮತ್ತೇನೂ ಇಲ್ಲ! ಯಾವಾಗ ಬಂದಿರಿ?"

"ನಾನು ಬಂದು ಎರಡು ತಿಂಗಳ ಮೇಲಾಯಿತು!"

"ಓಹೋ! ನನಗೆ ಗೊತ್ತೇ ಇಲ್ಲ. ಏನು ವಿಶೇಷ?" ಎಂದವಳೇ ಲಲಿತೆಯ ಸ್ಥಿತಿಯನ್ನು ನೋಡಿ, ಊಹಿಸಿ, ಸುಮ್ಮನಾದಳು.

"ಏನಿದು? ಏನೋ ಜಾಡ್ಯ ಹಿಡಿದವರ ಹಾಗಿದ್ದೀರಲ್ಲ!"

"ಹಾಗೇನೂ ಇಲ್ಲ."

"ಬೇಸರವೇನು? ಹೇಳಿ! ನಾಚಿಕೆಯೇಕೆ? ನಾನೂ ನಿಮ್ಮಂತೆಯೇ ಹೆಂಗಸಲ್ಲವೇ!"

"ವಿಶೇಷವೇನೂ ಇಲ್ಲ; ನನಗೆ ನಿನ್ನೆ ರಾತ್ರಿ ಒಂದು ಕನಸಾಯ್ತು."

ಭಾಗೀರಥಿ ಅತ್ಯುತ್ಸಾಹದಿಂದ, "ಏನದು? ಹೇಳಿ ನೋಡೋಣ!" ಎಂದಳು.

ಕನಸನ್ನು ಹೇಳಿ ಮುಗಿಸಿಯೂ ಆಯಿತು. ಭಾಗೀರಥಿಯ ಕರಿಮೊಗವು ಅದನ್ನು ಕೇಳಿ ನೀಲಿಯಾಯಿತು.

"ನೀವೇನೀಗ ಇದನ್ನು ನಂಬದಿರುವವರೋ?"

"ನಂಬಲಿಕ್ಕೂ ಇಲ್ಲ; ನಂಬದಿರಲಿಕ್ಕೂ ಇಲ್ಲ!"

"ಹೂಂ !"

"ನಿಮ್ಮ ಆಲೋಚನೆ ಹೇಗೆ?"

"ನಾನಾದರೆ ನಂಬುವವಳೇ !"

"ಏಕೋ?"

"ಏಕಂತೀರಾ? ಗಂಡಸರನ್ನು ನಂಬಬಾರದು! ನಂಬಬಾರದಮ್ಮಾ, ನಂಬಬಾರದು! ಕಾಲತ್ರಯದಲ್ಲಿಯೂ ನಂಬಬಾರದು! ಏಕಂತೀರಾ? ಅವರಷ್ಟು ಕೋತಿ ಬುದ್ಧಿಯವರನ್ನು ನಾನೆಲ್ಲಿಯೂ ಬೇರೆ ನೋಡಲಿಲ್ಲ. ಕೇಳಿ! ನನ್ನ ಅಣ್ಣನೇ ಒಬ್ಬನಿದ್ದ. ಅಷ್ಟು ಜಾಂಬವಂತನಾದ ಮೇಲೂ, ಅವನಿಗೆ ಏಕೆ ಮದುವೆ ಮಾಡಿದರೋ ನಾ ಕಾಣೆ. ಆ ಮೇಲೆ, ಕೇಳಿ ಕಥೆಯನ್ನು. ಇದ್ದಕ್ಕಿದ್ದಂತೆ ಅವನ ಹೆಂಡತಿ ಗರ್ಭಿಣಿಯಾದಳು. ತವರುಮನೆಯವರು, ಬಡವರಾದರೂ, ರೂಢಿಯಲ್ಲವೇ? ಕರೆದುಕೊಂಡು ಹೋದರು. ಪತ್ನಿಯ ವಿಯೋಗ ಕಾಲದಲ್ಲಿ ಇವನಿಗೆ ಕಾಮನ ಬಾಣದ ನೋವನ್ನು ತಡೆಯುವುದಕ್ಕಾಗಲಿಲ್ಲ. ಬಿದ್ದೇ ಬಿದ್ದ ಕೆಟ್ಟ ಹಾದಿಗೆ. ಪಾಪಿ!"

"ಅನಂತರ?"

"ಅನಂತರದ ಕಥೆ ಬಹಳ ಸ್ವಾರಸ್ಯ ಹಾಗೂ ಶೋಚನೀಯ! ತವರ್ಮನೆಗೆ ಹೋದ ಅವನ ಪತ್ನಿ, ನಾಲ್ಕು ಕೈಕಾಲುಗಳೊಂದಿಗೆ ಹಿಂದಿರುಗಿ ಬಂದಾಗ ಇವನು ಸಂಪೂರ್ಣ ಪಾಷಂಡಿಯಾಗಿದ್ದ. ಹೆಂಡತಿಗೆ 'ಪೀಡೆ!' 'ಮಾರಿ!' 'ತೊಲಗು!' ಎಂದು ಬೈಯುವುದಕ್ಕೆ ಮೊದಲಾಯಿತು. ಜೊತೆಗೆ ಅವಳನ್ನು ಚಿತ್ರಹಿಂಸೆಗೂ ಗುರಿಪಡಿಸಿದ! ಆ ಸಾಧ್ವಿ ಎಷ್ಟೆಂದು ಇದನ್ನು ಸಹಿಸಿಯಾಳು? ಅಂಗ್ರೇಜಿಯಲ್ಲಿ ಹಿಸ್ಟೀರಿಯಾ ಏನೋ ಅಂತಾರಲ್ಲ, ಅದು ಒಂದು ದಿನ ಪ್ರಾರಂಭ! ಆ ಪಾಪಿ ಡಾಕ್ಟರ್ ಸಾಹೇಬರನ್ನು ಕೂಡಾ ಕರೆಯಲಿಲ್ಲ. ಒಂದು ಆದಿತ್ಯವಾರ ಸಂಜೆ ಸುರುವಾದ ಜ್ವರ, ಇನ್ನೊಂದು ಆದಿತ್ಯವಾರ ಸಂಜೆಯ ವರೆಗೂ ಅವಳನ್ನು ಬದುಕಗೊಡಲಿಲ್ಲ. ಅವಳ ಮಗು, ಗಂಡುಮಗು! ದುಂಡುದುಂಡಾದ ಮೈಕಟ್ಟು, ಸೂರ್ಯದೇವರಂಥ ಮುಖ, ಅದು ಹೇಗಿತ್ತೆಂದು ಮಾಡಿದ್ದೀರಿ? ಅಹಾ! ಅರಸುಕುಮಾರ!—"

"ಅದು ಬದುಕಿತೇ?"

"ಅಯ್ಯಯ್ಯೋ! ಅಷ್ಟು ಭಾಗ್ಯ ನಮಗೆಲ್ಲಿ? ತಾಯಿಯ ಪೋಷಣೆ, ಆರೈಕೆಯಿಲ್ಲದೆ, ಮೊಲೆಹಾಲು ಕುಡಿಯದೆ, ಮತ್ತೊಂದು ತಿಂಗಳೊಳಗಾ

ಗಿಯೇ, ಅದು ತಾಯಿಯನ್ನು ಹುಡುಕಿಕೊಂಡು ಯಮಲೋಕಕ್ಕೇ ಹೋಯಿತು"

ಕೇಳಿ ಲಲಿತೆ, ಶಿಲಾಪ್ರತಿಮೆಯಂತೆ ಕುಳಿತುಬಿಟ್ಟಳು.

"ನಾನು ಕಥೆ ಹೇಳಿದೆ ಎಂತ ಏನೂ ಬೇಸರ ಮಾಡಬೇಡಿ, ಅಮ್ಮಾ! ನಿಮಗೆ ಇಂಥ ಸ್ಥಿತಿ ಬಾರದಿರಲೆಂದು ನಾನು ದೇವರಿಗೆ ಸಾವಿರ ಬಾರಿ ಕೈ ಮುಗಿವೆ."

ಅದೇ ರಾತ್ರಿ ಲಲಿತೆಗೆ ಮತ್ತೊಂದು ದುಸ್ವಪ್ನ; ಇದು ಮೊದಲಿನೆರಡು ಕನಸಿಗಿಂತಲೂ ಭಯಂಕರ!

ಈ ಕನಸನ್ನು ಕಂಡಮೇಲೆ ಲಲಿತೆ ತವರ್ಮನೆಯಲ್ಲಿ ನಿಲ್ಲುವುದು ಸಾಧ್ಯವೇ ಇರಲಿಲ್ಲ. ಮರುದಿನವೇ ಅವಳು ಮಂಗಳೂರಿಗೆ ಪೆಟ್ಟಿಗೆ ಕಟ್ಟಿದಳು. ಗಣೇಶರಾಯರಿಗೆ ಮಗಳನ್ನು ಇಷ್ಟು ಬೇಗನೇ ಹಿಂದೆ ಕಳುಹಿಸುವ ಮನಸ್ಸಿರಲಿಲ್ಲ. ಆದರೂ ಬೇರೆ ದಾರಿಯೆಲ್ಲಿ? —

"ಇಷ್ಟು ಬೇಗ ಹೋಗುತ್ತೀಯಾ ಮಗು?"

"ಇನ್ನು ಇಲ್ಲಿ ನಿಲ್ಲುವುದೆಂದರೆ ಮುಳ್ಳಿನ ಹಾಸಿಗೆಯ ಮೇಲೆ ನಿಂತ ಹಾಗೇ!"

"ಬಂದವಳು ಮೂರು–ನಾಲ್ಕು ತಿಂಗಳಾದರೂ ನಿಲ್ಲದಿದ್ದರೆ ಹೇಗೆ? ಚೊಚ್ಚಲು ಮಗುವನ್ನು ತವರ್ಮನೆಯಲ್ಲಿಯೇ ಹೆರುವುದು ವಾಡಿಕೆ!"

"ನನ್ನ ಸ್ಥಿತಿಯನ್ನು ನೋಡಿಯೂ ನೀವು ಹೀಗೆ ಹೇಳಬಹುದೇ ಅಪ್ಪಾ!"

ಗಣೇಶರಾಯರು ಮತ್ತೆ ಮಾತನಾಡಲಿಲ್ಲ. ಬೆಳಿಗ್ಗೆ ಲಲಿತೆ ಬಸಪ್ಪನ ಗಾಡಿಯಲ್ಲಿ ಕುಳಿತು ಹೊರಟಳು. 'ಸುಖಪ್ರಸವವಾಗಿ ಬಾ' ಎಂದು ಗಣೇಶರಾಯರು ಹರಸಿ ಬೀಳ್ಕೊಟ್ಟರು. ಗಾಡಿ ಕುಲುಕಾಡುತ್ತಾ ಚಲಿಸತೊಡಗಿತು. ಮುಂದೆ ಬರಲಿರುವ ಕಷ್ಟಪರಂಪರೆಗಳನ್ನು ಎದುರ್ಗೊಳ್ಳಲು ಪತಿಗೃಹಕ್ಕೆ ಹೊರಟಳು.

೭

ಇನ್ನೂ ಮಳೆಗಾಲ ಮುಗಿಯುವುದಕ್ಕೆ ಮುಂಚೆ ಲಲಿತೆ ಮಂಗಳೂರಿಗೆ ಬಂದಳು. ಮೋಡಗಳು ಮೊದಲಿನಂತೆ ಆಕಾಶದಲ್ಲಿ ಹಿಂಡುಗಟ್ಟಿಕೊಂಡು

ಸುಳಿದಾಡುತ್ತಿದ್ದವು. ಮಳೆ ಒಮ್ಮೊಮ್ಮೆ ಧಾರೆಧಾರೆಯಾಗಿಯೂ, ಒಮ್ಮೊಮ್ಮೆ ಹನಿಹನಿಯಾಗಿಯೂ ಸುರಿಯುತ್ತಿತ್ತು. ಬಂದ ಒಂದೆರಡು ದಿನಗಳಲ್ಲಿಯೇ ರಾಜಾರಾಮನಲ್ಲಿ ಏನೋ ವ್ಯತ್ಯಾಸವಾಗಿದೆ ಎಂಬುದನ್ನು ಲಲಿತೆ ಕಂಡುಕೊಂಡಳು. ಪತ್ರಿಕೆ ಹೊರಡಿಸುವುದನ್ನು ಅವನು ಇಷ್ಟರೊಳಗಾಗಿಯೇ ನಿಲ್ಲಿಸಿಬಿಟ್ಟಿದ್ದನು. ಕೇಳಿದಾಗ; "ಸುಮ್ಮನೆ ಯಾರು ಅದರ ಕೆಲಸಮಾಡಿ ಸಾಯುತ್ತಾರೆ! ನನಗೇನು ಪತ್ರಿಕೆ ಹೊರಡಿಸಿ ಉದ್ಧಾರವಾಗಬೇಕಿದೆಯೇ?" ಎಂದು ಉತ್ತರವಾಯಿತು.

ಲಲಿತೆ ಕತ್ತಲಾದ ಮೇಲೆ ತನಗೊಬ್ಬಳಿಗೇ ಹೆಚ್ಚು ಹೊತ್ತು ಇರಲು ಹೆದರಿಕೆಯಾಗುತ್ತದೆಂದು ಸಾವಿರ ಬಾರಿ ಹೇಳಿದ್ದರೂ, ಪುಣ್ಯಾತ್ಮ ರಾಜಾರಾಮ ಒಂದು ದಿನವಾದರೂ ಬೇಗನೇ ಮನೆಗೆ ಹಿಂದಿರುಗಿದವನಲ್ಲ. ಒಂದು ದಿನ ರಾತ್ರಿ ಒಂಭತ್ತು ಗಂಟೆ; ಮರುದಿನ ಹತ್ತು ಗಂಟೆ. ಇನ್ನೊಂದು ದಿನ ಇನ್ನೂ ಒಂದು ತಾಸು ತಡ! ಲಲಿತೆಯ ಪ್ರಶ್ನೆಗೆ ಉತ್ತರ, "ಕ್ಲಬ್ಬಿಗೆ ಹೋದರೆ ಹಾಗೇನೇ! ಏನು ಮಾಡುವುದು?" ಲಲಿತೆಗೆ ಇವೆಲ್ಲವುಗಳಿಂದ ಸಂಶಯ ಉತ್ಪನ್ನವಾಗದಿರಲಿಲ್ಲ. ದಿನದಿನಕ್ಕೆ ಲಲಿತೆಯ ಕಡೆಗೆ ರಾಜಾರಾಮನ ಅಸಡ್ಡೆ ಅಧಿಕವಾಗುತ್ತಾ ಹೋಗುತ್ತಿತ್ತು. ಲಲಿತೆ, "ನಿಮಗೆ ಗಂಡುಮಗುವಾದೀತೋ? ಹೆಣ್ಣಾದೀತೋ?" ಎಂದು ಕೇಳಿದರೆ, "ಯಾವುದಾದರೇನು?" ಎನ್ನುತ್ತಿದ್ದ. "ಹಾಗಾದರೆ, ನಿಮಗೆ ಎರಡರ ಮೇಲೂ ಏಕರೀತಿಯಾದ ಪ್ರೀತಿ ತಾನೇ?" ಎಂದರೆ, ಅವನಿಗೆ "ಮಗುವೇ ಬೇಡ"ವಾಗಿತ್ತು. ಯಾವಾಗ ನೋಡಿದರೂ, ಅವನ ಬಾಯಿಯಲ್ಲಿ ಸ್ತ್ರೀಯರ ವರ್ಣನೆಯೇ! ಅವಳ ಫೇಸ್–ಕಟ್ ಎಷ್ಟು ಚಂದ? ಇವಳ ಹೆರಳಿಲ್ಲವೇ, ಉರಗನಂತೆ! ಅವಳ ಬಾಫ್–ಕಟ್ ತಲೆಯಹಾಗೆ ನನಗಿನ್ನು ಕ್ರಾಫ್ ಬಿಡಿಸಬೇಕು. ಅವಳ ನಡಿಗೆ, ಹಾಗೆ-ಹೀಗೆ! ಆ ಲೇಡಿ ಸೀರೆ ಉಡುವ ರೀತಿಯೇ ಒಂದು ಚಂದ! ಆ ಮುದ್ದಮ್ಮ · ಅವಳು ತೀಟು ಮುದ್ದಮ್ಮನಪ್ಪ! ಅವಳು ಜರತಾರಿ ಬಿಟ್ಟು ಬೇರೆ ಸೀರೆಯನ್ನು ಸೊಂಟಕ್ಕೆ ಹಾಕುವುದೇ ಇಲ್ಲ. ಲಲಿತೆ ಎಲ್ಲವನ್ನೂ ಕೇಳಿ, "ಬೇಕಾದರೆ ನಾನೂ ಹಾಗೆ ಮಾಡುತ್ತೇನೆ." "ಎನ್ನುತ್ತಿದ್ದಳು. "ಅಲ್ಲಲ್ಲ? ನಿನ್ನದು ಸರಿಯಲ್ಲ, ಎಂದು ನನ್ನ ಅಭಿಪ್ರಾಯವಲ್ಲ. ಇದ್ದ ವಿಷಯ ಹೇಳಿದ್ದು ನಿನಗೆ," ಎಂದು ರಾಜಾರಾಮನು ಮೆಲ್ಲನೆ ಉಪಾಯವಾಗಿ ಜಾರಿ ಬಿಡುತ್ತಿದ್ದನು.

ರಾತ್ರಿ ಮಲಗಿದಾಗ ಲಲಿತೆಗೇನೋ ಅಸಹ್ಯ ದುರ್ವಾಸನೆ ಬರುತ್ತಿತ್ತು. ಲಲಿತೆಗೆ ಅದು ರಾಜಾರಾಮನ ಬಾಯಿಯೋ, ಎಂದು ಅನುಮಾನವಾಗದಿರುತ್ತಿರಲಿಲ್ಲ. ಅವಳು ಉಪಾಯವಾಗಿ, ''ಇದೇನೋ ಕೆಟ್ಟ ವಾಸನೆ ಬರುತ್ತಿದೆಯಲ್ಲಾ!'' ಎಂದು ಕೇಳುತ್ತಿದ್ದಳು. ಆದರೆ, ಇಂಥ: ಪ್ರಶ್ನೆಗಳಿಗೆ ಉತ್ತರಗೊಡುವುದರಲ್ಲಿ ರಾಜಾರಾಮನ ಚಮತ್ಕಾರಕ್ಕೇನು ಕಡಿಮೆಯೇ? ಅವನು ''ಹೌದು? ನಮ್ಮ ಹಿತ್ತಲಿನಾಚೆ ಹಂದಿಯೊಂದು ಸತ್ತು ಬಿದ್ದಿದೆ. ಎರಡು ದಿನವಾಯಿತು. ಅದೀಗ ಕೊಳೆತು ನಾರುವುದು. ಹ್ಞು! ಹಾಳಾದ ಮುನ್ಸಿಪಾಲ್ಟಿಯವರು ಅದನ್ನಿನ್ನೂ ತೆಗೆಯಿಸಲೇ ಇಲ್ಲ. ಈ ನಮ್ಮ ಮಂಗಳೂರು ಮುನ್ಸಿಪಾಲ್ಟಿಯಷ್ಟು ತೆಗೆದು ಹಾಕಿದ ಮುನ್ಸಿಪಾಲ್ಟಿ ಬೇರೊಂದು ಇಲ್ಲವೇ ಇಲ್ಲ!'' ಎನ್ನುತ್ತಿದ್ದನು.

ಇಷ್ಟಿದ್ದರೂ, ರಾಜಾರಾಮನು ಒಳಗಿಂದೊಳಗೆ ಹೃದಯದಲ್ಲಿ ಬಹಳವಾಗಿ ಲಲಿತೆಗೆ ಅಂಜುತ್ತಿದ್ದನು. ಇದಕ್ಕೆ ಕಾರಣವೂ ಇತ್ತು.

ಒಂದುದಿನ್ನರಾತ್ರಿ ರಾಜಾರಾಮ ಮನೆಗೆ ಮರಳುವಾಗ ಲಲಿತೆ ಎಂದಿನಂತಲ್ಲ,–ಹೊರಗೈಮಾರ್ಗದ ಬದಿಯಲ್ಲಿ ಗೇಟಿನಲ್ಲೇ ನಿಂತುಕೊಂಡಿದ್ದಳು. ಮುಖವು ಕರಿಶಿಲೆಯಂತಾಗಿತ್ತು. ರಾಜಾರಾಮನು ಇನ್ನೂ ಗೇಟನೊಳಗೆ ಕಾಲಿಡುವಷ್ಟರಲ್ಲೇ, ''ನನ್ನ ನೆಕ್ ಲೇಸ್ ಕಳವಾಗಿದೆ!'' ಎಂದಳು.

''ಆಂ!?'' ಎಂದು ರಾಜಾರಾಮನು ಆಶ್ಚರ್ಯದಿಂದ ನಿಂತಲ್ಲಿಯೇ ನಿಂತನು.

''ನಾನು ತಾಯಿಮನೆಗೆ ಹೋಗುವಾಗ, ಸುಮ್ಮನೆ ಹಳ್ಳಿಯಲ್ಲಿ ಅಷ್ಟು ಅಮೂಲ್ಯವಾದ ಚಿನ್ನಾಭರಣವೇಕೆ? ಎಂದು ಇಲ್ಲಿಯೇ ಪೆಟ್ಟಿಗೆಯಲ್ಲಿಟ್ಟು ಹೋಗಿದ್ದೆ. ಬಂದಕೂಡಲೆಯೂ ನೋಡಲಿಲ್ಲ. ಇವತ್ತು ಸಾಯಂಕಾಲವೇನೋ ಆಕಸ್ಮಾತ್ ಪೆಟ್ಟಿಗೆಯ ಬಾಗಿಲು ತೆರೆದು ನೋಡುತ್ತೇನೆ. ಹಾಗವೇ ಕಾಣೆ!''

''ಹಾಗಾದರೆ ಯಾವಾಗ ಕಳವಾದದ್ದು?''

''ಯಾರಿಗೆ ಗೊತ್ತು?''

''ಎಲ್ಲಾದರೂ ಇದ್ದೀತು. ನಿನ್ನ ಕಣ್ಣು ಸುಮ್ಮನೆ ತಪ್ಪಿರಬಹುದು. ಇನ್ನೊಮ್ಮೆ ಸರಿಯಾಗಿ ಹುಡುಕಿ ನೋಡು!''

ಇಬ್ಬರೂ ಇನ್ನೊಮ್ಮೆ ಸರಿಯಾಗಿ ಅರಸಿ ನೋಡಿದರೂ ಸಿಕ್ಕಲಿಲ್ಲ.

“ಅಯ್ಯೋ! ದೇವರೇ! ಎಷ್ಟು ಬೆಲೆಯ ಚಿನ್ನ! ಇನ್ನೇನು ಮಾಡುವುದು?”

“ಮಾಡುವುದೇನು? ಈ ನಿಮಿಷವೇ ಹೋಗಿ ಪೋಲೀಸಿಗೆ ವಾರಂಟು ಕೊಡಿ!”

“ಸಾಯಲಿ, ಲಲಿತೆ! ಹೋದರೆ ಹೋಗಲಿ; ಅದು ನಮಗೊಂದು ಯಾವ ಲೆಖ್ಖ? ಅದಕ್ಕಿಂತಲೂ ಹೆಚ್ಚಿನ ಬೆಲೆಯ ಇನ್ನೊಂದನ್ನು ಕೊಂಡರಾಯಿತು!”

“ನಿಮಗೇನಾದರೂ ಹುಚ್ಚು ಹಿಡಿಯಿತೇ!? ಹೋದುದು ಹೋಯಿತು. ಇನ್ನು ಮುಂದೆಯಾದರೂ ಹೋಗದಂತೆ-ಆ ಕಳ್ಳನು ಬರದಂತೆ-ಜಾಗ್ರತೆ ಮಾಡಬೇಕಲ್ಲ! ಹೆಗ್ಗಣದ ಬಿಲವನ್ನು ನೋಡಿ, ಸುಮ್ಮನೆ ಕುಳಿತುಕೊಳ್ಳುವುದಲ್ಲ. ಅದನ್ನು ಮುಚ್ಚುವ ಪ್ರಯತ್ನ ಮಾಡಬೇಕು!”

“ಆಯಿತಪ್ಪ, ಆಯಿತು; ಹಾಗೇ ಮಾಡೋಣ! ಆದರೆ ಏನೆಂದು ವಾರಂಟು ಕೊಡಲಿ?”

“ಅಯ್ಯೋ! ಹೆಂಗಸಾದ ನಾನು ಅದನ್ನು ನಿಮಗೆ ಹೇಳಿಕೊಡಬೇಕೇ? ಇಷ್ಟು ಬೆಲೆಯ, ವಸ್ತು, ಇಂಥಃ ಸ್ಥಳದಲ್ಲಿದ್ದುದು ಕಳವಾಗಿ ಹೋಗಿದೆ, ಎಂದು ರಿಪೋರ್ಟು ಬರೆದರಾಯಿತು!”

“ಬಹಳ ಸುಲಭವಾಗಿ ಹೇಳಿಬಿಟ್ಟೆ ನೀನು! ಅವರು ‘ನಿಮಗೆ, ಯಾರಮೇಲೆ ಸಂಶಯ?’ “ಎಂದು ಕೇಳುತ್ತಾರೆ. ಅದಕ್ಕೇನು ಹೇಳೋಣ?”

“ಹಾಗೂ ಕೇಳುತ್ತಾರೆಯೇ?”

“ಮತ್ತೆ! ಕೇಳದೆ ಎಲ್ಲಿಯಾದರೂ ಉಂಟೇ?”

“ಅದೇನೂ ಅಷ್ಟೊಂದು ಕಷ್ಟದ ಸಂಗತಿಯಾಗಿ ಕಾಣಿಸುವುದಿಲ್ಲ ನನಗೆ! ಯಾರನ್ನಾದರೂ ತೋರಿಸಿಬಿಟ್ಟರೆ ಆಯಿತು!”

“ಇದು ಒಳ್ಳೆ ಮಲಾ ಮಾತ್ತು! ಅವನಲ್ಲಿ ಚಿನ್ನ ಸಿಕ್ಕದಿದ್ದರೆ.... ...”

“ಸಿಕ್ಕದಿದ್ದರೆ ಬೇಡ!”

“ಹುಂ! ನಿನ್ನ ಮಾತು ಕೇಳಿದರೆ, ನನ್ನ ಗತಿ, ಹುಂ!-ವಿಗತಿಯಾದೀತು!”

“ಅದೇಕೆ?”

“ಅವನಲ್ಲಿ ಚಿನ್ನ ಸಿಕ್ಕದೆ ಇರುವುದು, ಮತ್ತೆ ಅವನು ನನ್ನ

ಮೇಲೆಯೇ ಸುಮ್ಮನೆ ಸುಳ್ಳು ರಿಪ್ರೋರ್ಟು ಕೊಟ್ಟಿದ್ದಾರೆಂದು, ರಿಪೋರ್ಟು ಬರೆಯಲಿ! ಆಗ--?''

‹‹ ಏನಾದೀತು ? ''

‹‹ಏನೂ ಆಗಲಾರದು. ನಿನಗೆ ನನಗೆ ಮಾತ್ರ ಜೈಲಾದೀತು!''

‹‹ಹಾಂ!?''

‹‹ ನೀನು ಸುಮ್ಮನಿರು, ಲಲಿತೆ! ಒಂದು ವೇಳೆ ಅದನ್ನು ಕಳ್ಳನು ಅಪಹರಿಸಿದುದೇ ನಿಜವಾದರೂ, ಅವನೀಗ, ಎಲ್ಲಿದ್ದಾನೋ ಯಾರಿಗೆ ಗೊತ್ತು ?—ಬೊಂಬಾಯಿಯೋ, ದೆಹಲಿಯೋ, ಅಥವಾ ಇಂಗ್ಲಾಂಡೋ! ಒಂದು ವೇಳೆ ಸರಾಫನಿಗೆ ಮಾರಿದ್ದರೆ, ಅವನು ಇಷ್ಟರೊಳಗೆ ಅದನ್ನು ಕರಗಿಸಿಯೂ ಆಗಿರಬೇಕು ! ''

ಲಲಿತೆ ಮತ್ತೆ ನುಡಿಯಲಿಲ್ಲ. ರಾಜಾರಾಮನು ಒಮ್ಮೆಗೆ ಹೇಗೂ ಬಚಾವಾದನು. ಆದರೆ, ಲಲಿತೆಗೆ ಮಾತ್ರ ಆ ಹಾರದ ಮೇಲಣ ಮೋಹ-ಚಿಂತೆ, ಎರಡೂ ಕಡಮೆಯಾಗಲಿಲ್ಲ. ಹೊಸದು ಬಂದರೂ, ‹ ಹಳೆಯದೆಲ್ಲಾ ಹೊನ್ನು ' ಎಂಬ ನಾಣ್ಣುಡಿಯಂತೆ. ಆಕೆಗೆ ಹಳೆಯ ಹಾರದ ಮೇಲೆ ಇನ್ನಷ್ಟು ಅಭಿಮಾನ! ರಾಜಾರಾಮನು ಹೇಳಿದಂತೆ ಹೊಸ ಹಾರವನ್ನು ತಂದುಕೊಡಲೂ ಇಲ್ಲ; ಲಲಿತೆ ಅದನ್ನು ಕೇಳಲೂ ಇಲ್ಲ. ಅವಳಿನ್ನೂ ಆ ಹಳೆ ಹಾರದ ಚಿಂತೆಯಲ್ಲೇ ಸಂಪೂರ್ಣ ಮಗ್ನಳಾಗಿದ್ದಳು. ಊಟ-ತಿಂಡಿ-ಪಾನೀಯಗಳಲ್ಲಿ ಎಲ್ಲಿಲ್ಲದ ಬೇಸರ! ಇದಕ್ಕೆ ಅವಳ ಗರ್ಭವೇ ಸ್ವಲ್ಪ ಮಟ್ಟಿಗೆ ಕಾರಣ. ಆದರೆ, ಹಾರದ ಚಿಂತೆಯೆಂದರೆ ಈ ಬೇಸರಕ್ಕೆ ಗಿಲೀಟಿನ ಹಾಗೆ! ಕುಳಿತರೆ ಬೇಸರ, ನಿಂತರೆ ಆಲಸ್ಯ, ಮಲಗಿದರೆ ಆಯಾಸ! ರೇಡಿಯೋ ಗಾಯನವನ್ನು ಕೇಳಿದರೆ ರುಚಿಸದು. ಅವಳ ಪ್ರೀತಿಯ ಗಾಯಕನಾದ, ಸೈಗಲನ, ‹ ಪ್ರೇಮ ಕ್ಯಾ ಹೈ ಇಸ್ ಜಗಮೇ ' ಪಂಕಜ ಮಲಿಕನ, ‹ ಏರಾತೆ, ಏ ಮೂಸಮು, ' ಕೇಳಿದರೂ ಕರಕರೆ ! ಖುರ್ಶೀದಳು ಹಾಡಲುಪಕ್ರಮಿಸಿದರೆ ಸಾಕು, ಪೆಟ್ಟಿಗೆಯನ್ನು ಮುಚ್ಚಿಬಿಡುತ್ತಿದ್ದಳು. ನೂರ್‌ಜಹಾನಳ ಹೆಸರೆತ್ತಿದರೆ, ‹‹ ಅಯ್ಯೋ ! ಅವಳ ಹಾಳು ಗಾಯನವನ್ನೇನು ಕೇಳುವದು ? '' ಎಂದು ಮುಖ ಸೊಟ್ಟಗೆ ಮಾಡಿಬಿಡುತ್ತಿದ್ದಳು. ಆದರೆ, ಈ ಎಲ್ಲಾ ಗಾಯಕ-ಗಾಯಕಿಯರು, ಈ ಹಿಂದೆ ತನ್ನ ಪ್ರೀತಿ ಪಾತ್ರರಾಗಿದ್ದರೆಂಬುದನ್ನೂ ಅವಳು ಮರೆತಿದ್ದಳು.

ಸಾಯಂಕಾಲವಾಗುತ್ತಾ ಬರುತ್ತಿತ್ತು. ಸಂಜೆಮಲ್ಲಿಗೆಗಳು ಮೆಲ್ಲಮೆಲ್ಲನೆ ಅರಳುವುದರಲ್ಲಿದ್ದವು. ಅಂತರಿಕ್ಷಕ್ಕೆ ಹರಿದ ಶ್ವೇತವಸ್ತ್ರವನ್ನು ಪಸರಿಸಿದಂತೆ, ತುಂಡು ತುಂಡು ಬೆಳ್ಮುಗಿಲ ಪ್ರಸ್ತಾರ. ಅವುಗಳ ನಡುವೆ ಅಲ್ಲಲ್ಲಿ ನೀಲಾಕಾಶದ ಕುರುಹು. ಗಾಳಿಯೂ ಇಲ್ಲ, ಮಳೆಯೂ ಸುರಿಯದು. ಮಳೆಗಾಲವು ಮುಗಿದು ಏಳೆಂಟು ದಿನಗಳಾದರೂ ಕಳೆದಿರಬೇಕು. ಲಲಿತೆ ಭಾವಡಿಯಲ್ಲಿ ಕುಳಿತಿದ್ದಳು. ಪ್ರೋರ್ಟಿಕೋದಲ್ಲಿ ನಿಂತು ಬೀದಿಯ ಜನರನ್ನು ಎಣಿಸಿ ಸಾಕಾಗಿ ಕೆಳಗಿಳಿದು ಬಂದಿದ್ದಳು. ರಾಜಾರಾಮ ಕಾಫಿ ಕುಡಿದು ಕೋಟು ಹಾಕಿಕೊಂಡವನು ಎಲ್ಲಿಗೆ ಹೋದನೋ ಯಾರಿಗೆ ಗೊತ್ತು? ಆ ಮಹಾರಾಯನು ತಾನು ಹೋಗುವಾಗ ಇಂಥಲ್ಲಿಗೆ ಹೋಗುತ್ತೇನೆಂದು ಲಲಿತೆಯೊಡನೆ ಹೇಳಿಹೋಗುವ ಅಭ್ಯಾಸವನ್ನಿಟ್ಟುಕೊಂಡಿರಲಿಲ್ಲ. ಲಲಿತೆಯಾಗಿಯೇ, "ಎಲ್ಲಿಗೆ?" ಎಂದು ಕೇಳಿದರೆ "ಹೊರಡುವಾಗಲೇ ಅಪಶಕುನ!" ಎಂದು ಘರ್ಜನೆಯಾಗುತ್ತಿದ್ದುದರಿಂದ, ಅವಳೂ ಕೇಳುವ ಹವ್ಯಾಸವನ್ನಿಟ್ಟುಕೊಂಡಿರಲಿಲ್ಲ. ಕತ್ತಲೆಯಾಗುತ್ತಾ ಬಂದಿತ್ತು. ಇನ್ನು ಕಾಲುತಾಸಿನಲ್ಲಿ ದೇವರಿಗೆ ದೀಪ ಹಚ್ಚಲು ಲಲಿತೆ ಒಳಗೆಹೋಗುವವಳು. ಕೆಲಸದ ಹೆಂಗಸು ಸೇಸಿ ಬಂದಳು.

"ಏನಮ್ಮ! ಬರುತ್ತೀರೇ?"

"ಊಂ ಎಲ್ಲಿಗೆ?"

"ಇವತ್ತು ರಾತ್ರಿ ಕದರಿ ದೇವಸ್ಥಾನದಲ್ಲಿ ಒಂದು ದೊಡ್ಡ ಆಯನವಂತೆ. ಲಕ್ಷದೀಪೋತ್ಸವವೋ, ಮತ್ತೊಂದೋ?– ಏನೋ ಹೇಳಿದರು."

"ಹೂಂ!"

"ಇಷ್ಟೇ ಅಲ್ಲ; ಒಂಭತ್ತು ಗಂಟೆಗೆ ಸರಿಯಾಗಿ ಹರಿಕಥೆಯೂ ಉಂಟಂತೆ."

"ಯಾರಿಂದ?"

"ಅದೇ ಮುಖ್ಯ; ಗಡ್ಡದ ರಾಮದಾಸರದಲ್ಲ!"

"ಆವರ ಹರಿಕಥೆಯಾದರೆ ಏನೂ ಪ್ರಯೋಜನವಿಲ್ಲ; ಅದಕ್ಕೋಸ್ಕರ ಕೇಳಿದೆ."

"ನಾನು ಕೂಡಾ ಅದಕ್ಕಾಗಿಯೇ ಹಾಗೆ ಹೇಳಿದೆ! ಇಷ್ಟು ಚೋಟುದ್ದದ ಹುಡುಗಿ; ಸುಸೀಲಾ ಎಂದು ಹೆಸರು. ಪ್ರಾಯ ಹತ್ತಾದರೆ ಹೆಚ್ಚು."

ಲಲಿತೆಗೆ ಹೋಗಬೇಕೆಂಬ ಇಚ್ಛೆಯುಂಟಾಯಿತು. ಅವಳಿಗೇನು ಹರಿಕಥೆಯಲ್ಲಿ ಅಷ್ಟೊಂದು ಅಭಿರುಚಿಯಿಲ್ಲ. ಸಿನಿಮಾ, ನಾಟಕಗಳ ಸಾಲಿನಲ್ಲಿ ಹರಿಕಥೆ ಬರಲಾರದೆಂದು ಅವಳ ತರ್ಕ. ಅಲ್ಲದೆ ಅದರಲ್ಲಿ ನವೀನತೆಯೇನಿದೆ? ಹರಿದಾಸರು ಬೇರೆ ಬೇರೆಯಾದರೂ ಹೇಳುವ ಕತೆ ಒಂದೇ ಅಲ್ಲವೇ? ಸಿನಿಮಾ, ನಾಟಕಗಳಲ್ಲಿರುವಂತೆ, ಹೊಸ ಕತೆ, ಹೊಸ ತಂತ್ರಗಳನ್ನು ಸೃಜಿಸಿ ಆಡುವಷ್ಟು ಅವರು ಸಮರ್ಥರೇ? ಅದೇ ಗಡ್ಡದ ರಾಮದಾಸರ ಹರಿಕಥೆಯನ್ನು ಅವಳು ಹಳ್ಳಿಯಲ್ಲಿದ್ದಾಗ ಎಷ್ಟೋ ಬಾರಿ ಕೇಳಿದ್ದಳು. ಅವಳ ತಾಯಿಗೆ ಅದರಲ್ಲಿ ಅಷ್ಟೊಂದು ಮಮತೆ! ತಾಯಿಯೊಂದಿಗೆ ಮಗಳೂ ಹೋಗುತ್ತಿದ್ದಳು. ಆದರೆ, ಸರಿಯಾಗಿ ಕುಳಿತು ಕೇಳಿದ ಸನ್ನಿವೇಶ ಮಾತ್ರ ಬಹಳ ವಿರಳ. ಬಯಲಾಟದಲ್ಲಿ ರಾವಣನ ವೇಷ ಧರಿಸಿ, ಧರಿಸಿ ಅಭ್ಯಾಸವಾದ ಹರಿದಾಸರು, ಅಟ್ಟಹಾಸದಿಂದ, 'ತತ್ವ ಉವಾಚ' ಎಂದು ಗಂಟೆಗಂಟೆಗಳ ಕಾಲ ಉಪನ್ಯಾಸಕ್ಕೆ ತೊಡಗಿದರೆಂದರೆ, ಇವಳಿಗೆ 'ಸತ್ತೆ! ಸತ್ತೆ!' ಎಂದು ನಿದ್ರೆ ಬರುವುದು.

ಒಮ್ಮೆ ದೇವಸ್ಥಾನದಲ್ಲಿ ಹನ್ನೆರಡು ವರ್ಷದ ಬಾಲಕನ ಹರಿಕಥೆಯಾಯಿತು. ಹನ್ನೆರಡು ವರ್ಷದ ಬಾಲಕನೇ ಮುದ್ದು! ಅವನು ಕುಣಿದರೂ ಛಂದ, ಮಣಿದರೂ ಚಂದ. ದಣಿದರೂ ಚಂದವೇ! ಧ್ರುವನ ಕತೆಯನ್ನು ಚೆನ್ನಾಗಿ ಬಣ್ಣಿಸಿ ಅವನು ಹೇಳಿದಾಗ, ಕೇಳಲು ಬಂದ ಅಜ್ಜಮ್ಮಗಳೆಷ್ಟೋ 'ಅಯ್ಯೋ! ಅಯ್ಯೋ!' ಎಂದರು. ಅವರ ಕಣ್ಣುಗಳು ಸೆರಗಿನಿಂದ ನಮ್ಮನ್ನು 'ಉಜ್ಜಮ್ಮ!' ಎಂದವು. ಲಲಿತೆ ಕೂಗದಿದ್ದರೂ, ಅಂದಿನ ಬಾಲಕನ ಆ ನಿರೂಪಣೆ ಅವಳ ಅಂತಃಕರಣವನ್ನೇ ಸೂರೆಗೊಂಡಿತ್ತು. ಅಂದಿನಿಂದ ಚಿಕ್ಕವರ ಕತೆಯಾದರೆ, 'ಕೇಳೋಣ' ಎಂಬಾಸೆ ಲಲಿತೆಗೆ! ಇಂದು ಸೇಸಿಯ ಮಾತನ್ನು ಕೇಳಿ ಹೊರಟಳು. ಬಾಗಿಲಿಗೆ ಬೀಗ ಹಾಕಿ, ರಾಜಾರಾಮನಿಗೆ ಚಿಕ್ಕದೊಂದು ಪತ್ರವನ್ನು ಬರೆದು, ಚಿಲಕದಲ್ಲಿ ಸೇರಿಸಿ ಕದರಿಗೆ ಬಂದರು.

ದೇವಸ್ಥಾನದಲ್ಲಿ ದೀಪೋತ್ಸವವನ್ನು ನೋಡಲು ಅಲಕ್ಷವಾದ ಜನ. ಪಣಂಬೂರು, ಸುರತ್ಕಲ್, ಮುಲ್ಕಿಗಳಿಂದಲೂ ಜನರು ಬಾಡಿಗೆಯ ದೋಣಿ ಹತ್ತಿಬಂದಿದ್ದರು. ಆ ದಿನ ಅಂಬಿಗರು ದುಡ್ಡಿನಲ್ಲಿ ಕಲೆಕ್ಟರ್ ಸಾಬರ ಸಮಾನರಾದರು. ಲಲಿತೆ–ಸೇಸಿ, ಇಬ್ಬರೂ ದೇವಸ್ಥಾನ ತಲಪಿದಾಗ, ಆಕಾಶ ಕೆಂಪಾಗಿದ್ದರೂ ಜನರು ಭಯಂಕರವಾಗಿ ನೆರೆದುಬಿಟ್ಟಿದ್ದರು. ಗುಡ್ಡದ ಮೆಟ್ಟಲು

ಮೆಟ್ಟಲುಗಳಲ್ಲಿ, ಫೋಟೋ ತೆಗೆಯಿಸಿಕೊಳ್ಳಲು ಸಿದ್ಧರಾದ ಶಾಲಾ ಬಾಲಕ-ಬಾಲಕಿಯರಂತೆ ಮಂಡಿತರಾಗಿದ್ದರು. ಜಾತ್ರೆಯ ದೃಶ್ಯ ಬೇಕಾದ ಸಿನಿಮಾ ಫೋಟೋಗ್ರಾಫರಸಿಗೆ ಇದುವೇ ಸುದಿನ! ಅವರ 'ಕಿರಿ-ಪಿರಿ'ಯ ಸ್ವರವನ್ನು ಅನುಕರಿಸಿದರೆ, ನಮ್ಮ ರೇಡಿಯೋ ಮೂರು ದಿನದಲ್ಲಿ ಯಾವುದಕ್ಕೂ ಬೇಡವಾಗಬಹುದು.

ಲಲಿತೆ-ಸೇಸಿಯರಿಗೆ, ದೇಗುಲದ ಹೊರ ಅಂಗಣದೊಳಗೆ ಕಾಲಿಡುತ್ತಲೇ ಮೊದಲು ಕಂಡುದು ವ್ಯಾಪಾರೀ ಜಾತ್ರೆ! ಕಿತ್ತಳೆ-ಸೋಡಾ-ಲೆಮೊನೇಡ್-ಬೀಡಾ, ಬೀಡಿ, ಚುಟ್ಟಾ, ಸಿಗಾರ್,—ಕಡಲೆ, ನೆಲಗಡಲೆ! ತೂಗುವ ತೊಟ್ಟಿಲಿನ, 'ಗರ್, ಗರ್' ಶಬ್ದ! ಲಲಿತೆ-ಸೇಸಿ, ನಿದ್ರೆಗೆ ರಾಮಬಾಣವೆಂದು, ಕಡಲೆ-ಮಂಡಕ್ಕಿಗಳನ್ನು ಕೊಂಡುಕೊಂಡು, ಆ ಜನಜಾತ್ರೆಯಲ್ಲಿ ಸ್ಥಳವನ್ನರಸುತ್ತಾ ಹೊರಟರು.

ಹೇಗೂ ಒಂದು ಕಡೆಯಲ್ಲಿ ಕುಳಿತದ್ದಾಯಿತು. ಅರ್ಧ ತಾಸು ಸುಮ್ಮನೆ ಕುಳಿತುಕೊಂಡು ಸೇಸಿಗೆ ಬೇಸರವಾಯಿತು.

"ಒಮ್ಮೆ ದೇವಸ್ಥಾನದೊಳಗೆ ಹೋಗಿ ಬರೋಣವೇನಮ್ಮ?" ಎಂದು ಕೇಳಿದಳು.

ಲಲಿತೆ, "ಹೂಂ!" ಎಂದಳು. ಹೊರಟರು.

ದೇವಸ್ಥಾನದೊಳಗೆ ದೇವರಿಗಿಂತಲೂ ಮೊದಲಾಗಿ ಅವರ ಕಣ್ಣಿಗೆ ಬಿದ್ದುದು ಆ ಸೂಳೆ—ಹೀರೆ! ದೇವಸ್ಥಾನದೊಳಗೆ, ಹೊಲೆಯ, ಬಿಲ್ಲವ, ಮುಂತಾದ ಹಿಂದುಳಿದ ಜಾತಿಯವರಿಗೆ ಪ್ರವೇಶವಿಲ್ಲದಿದ್ದರೂ, ಆ ಹಿಂದುಳಿದ ಜಾತಿಯವರಿಗಿಂತಲೂ ಕೀಳಾದ ಜಾತಿಯವರನ್ನು ಅಡ್ಡಿಯಿಲ್ಲದೆ ಮನೆಯೊಳಗೆ ಬಿಡುವ ಸೂಳೆಯರಂಥ ಪತಿವ್ರತೆಯರಿಗೆ ಮಾತ್ರ ಪ್ರವೇಶಕ್ಕೆ ಯಾವ ನಿರ್ಬಂಧವೂ ಇರಲಿಲ್ಲ. ಅವರನ್ನು ತಮ್ಮ ದೇವಕುಲದೊಳಗೆ ಬಿಡದಿದ್ದರೆ, ಮುಂದೆ ಅವರು ತಮ್ಮನ್ನು ಅವರ ಗೋಕುಲದೊಳಗೆ ಬಿಡದಿದ್ದರೆ, ಎಂಬ ಪರಮಭಯ ದೇಗುಲದ ಅಧಿಕಾರಿಗಳಿಗೆ!

ಲಲಿತೆಯನ್ನು ನೋಡಿದೊಡನೆಯೇ ಹೀರೆ, ಮುಗುಳು ನಗುತ್ತಾ ಹತ್ತಿರ ಬಂದಳು.

"ಏನಮ್ಮಾ, ಬಹಳ ಅಪರೂಪವಾಗಿಬಿಟ್ಟಿರಲ್ಲಾ! ನಿಮ್ಮನ್ನು ನೋಡದೆ ನಾನೆಷ್ಟು ಸಮಯವಾಯಿತು!"

“ ಹೂಂ ! ”

“ ಏನು, ಊರಲ್ಲಿ ಇರಲಿಲ್ಲವೇ ? ”

“ ಇಲ್ಲ! ”

“ ಎತ್ತ ಹೋಗಿತ್ತು ಸವಾರಿ ? ”

“ ತಾಯಿಮನೆಗೆ ! ”

“ ಏಕೆ ? ”

ಲಲಿತೆ ಸುಮ್ಮನಿದ್ದಳು.

“ ಓಹೋ ! ಗೊತ್ತಾಯಿತು ! ”

ಆಗಲೇ ಲಲಿತೆಯ ದೃಷ್ಟಿ ಹೀರೆಯ ಕೊರಳ ಕಡೆಗೆ ಹರಿಯಿತು. ಅಲ್ಲಿದ್ದ ಹಾರವನ್ನು ನೋಡಿ ಅವಳು ಶಿಲಾಮೂರ್ತಿಯಂತಾದಳು.

“ ಏನಿದು ! ಹೊಸದಾಗಿ ಹಾರವನ್ನು ತೆಗೆದುಕೊಂಡಿರಾ ? ”

ಹೀರೆ ಒಂದು ವಿಧವಾಗಿ ನಗುತ್ತಾ, “ ಹೂಂ ! ” ಎಂದಳು.

ಲಲಿತೆಗೆ ಅದು ಅಣಕದಂತೆ ತೋರಿತು. ಮುಖವು ಕಾರಿರುಳ ಸಮಾನವಾಯಿತು.

“ ಸೇಸಿ ! ”

“ ಏನು ತಾಯಿ ? ”

“ ನನಗೆ ಕಣ್ಣು—ಕತ್ತಲೆ ಬರುವ ಹಾಗಿದೆಯಲ್ಲಾ ! ”

“ ಈಗ ಹರಿಕಥೆ ಸುರುವಾಗಲಿಕ್ಕಾಯಿತು. ”

“ ನಿನ್ನ ಹರಿಕಥೆಗೆ ಬೆಂಕಿಬಿತ್ತು ! ”

“ ........... .... ”

“ ಈಗೇನು, ನೀನು ನನ್ನನ್ನು ಮನೆಗೆ ಕರೆದುಕೊಂಡು ಹೋಗುತ್ತೀಯೋ ಇಲ್ಲವೋ ? ”

ಸೇಸಿ ಮಾತನಾಡಲಿಲ್ಲ. ಅವಳಿಗೆ ದೀಪೋತ್ಸವವನ್ನು ನೋಡಬೇಕೆಂದೂ, ಅದಕ್ಕಿಂತಲೂ ಅಧಿಕವಾಗಿ, ಆ ಬಾಲಕಿಯ ಹರಿಕಥೆಯನ್ನು ಕೇಳಬೇಕೆಂದೂ ಆಸೆ. ಆದರೆ, ಒಡತಿಗೆ ವಿರೋಧವಾಗಿ ನಡೆಯಲಾರದೆ ಹೊರಟಳು.

ಮನೆಗೆ ಬಂದಾಗ ೧೦-೩೦ ತಾಸಾಗಿತ್ತು. ರಾಜಾರಾಮನು, ತನ್ನ ಕೋಣೆಯಲ್ಲಿ, ದೀಪದ ಮುಂದೆ, ಆರಾಮ ಖುರ್ಚಿಯಲ್ಲಿ ಕುಳಿತು ಸಿಗರೇಟು ಬೂದಿ ಮಾಡುವ ಉದ್ಯಮದಲ್ಲಿದ್ದಾನೆ. ಲಲಿತೆ, ತಾನು ಕಂಡುದನ್ನು ಅವನಿಗೆ

ಹೇಳಲೇ ಎಂದು ಕ್ಷಣಕಾಲ ಯೋಚಿಸಿದಳು. ಆದರೆ, ಏಕೋ ಬೇಡವೆಂದು ತೋರಿತು. ಸುಮ್ಮನಿದ್ದಳು.

× × × ×

ಮರುದಿನ ಸಂಜೆ; ಏಳು ಗಂಟೆ. ಲಲಿತೆಯೂ, ಇನ್ಸ್‌ಪೆಕ್ಟರ್ ಸಾಹೇಬರೂ, ಇಬ್ಬರು ಕಾನ್ಸ್‌ಟೇಬಲ್ಲರೂ, ಪೋಲೀಸ್ ಸ್ಟೇಶನಿನಿಂದ ಹೊರಬಿದ್ದರು. ಜೋಡುಮಠದ ದಿಕ್ಕಿಗಾಗಿ ನಡೆದರು.

ಜೋಡುಮಠದ ಗಲ್ಲಿಯಲ್ಲಿ ಬಂದಾಗ ಎಂಟು ಗಂಟೆ; ಚೆನ್ನಾಗಿ ಕತ್ತಲಾಗಿತ್ತು. ದೀಪದ ಬೆಳಕಿಲ್ಲದೆ, ಯಾವುದೂ ಕಾಣಿಸುವಂತಿಲ್ಲ. ಆ ಮಾರ್ಗದಲ್ಲಿ ಮುನ್ಸಿಪಾಲ್ಟಿಯವರ 'ದೀಪಸ್ತಂಭ' (?) ಗಳೂ ಇರಲಿಲ್ಲ.

"ಯಾವುದಮ್ಮಾ, ಮನೆ?" ಎನ್ನುತ್ತಾ ಇನ್ಸ್‌ಪೆಕ್ಟರರು ಮುಂಬರಿಯತೊಡಗಿದರು.

"ಕತ್ತಲೆಗೆ ಯಾವುದೂ ಸರಿಯಾಗಿ ಕಾಣುವುದಿಲ್ಲ. ಅಯ್ಯೋ! ಹಾಳು ಬೀದಿಯೇ! ಸ್ವಲ್ಪ ಟಾರ್ಚ್ ಹಿಡಿಯಿರಿ, ಇನ್ಸ್‌ಪೆಕ್ಟರ್ ಸಾಹೇಬರೇ!" ಎಂದಳು. ಆ ಟಾರ್ಚಿನ ಬೆಳಕಿನಲ್ಲಿ ಮನೆಯನ್ನು ಸೇರಿದರು.

ಬಾಗಿಲನ್ನು ತಟ್ಟಬೇಕಾಗಿಯೂ ಇರಲಿಲ್ಲ; ವೇಶ್ಯೆಯರ ಗೃಹಗಳೆಂದರೆ ಕವಲಯುಗಳಂತೆ. ಕಾಮುಕನಾದ ಚಂದಿರನು, ಹಗಲೆಲ್ಲಾ ಅಡಗಿಕೊಂಡಿದ್ದು, ರಾತ್ರಿಯಾದೊಡನೆ ಮೈದೋರಿ ನೀಲೋತ್ಪಲಗಳನ್ನರಳಿಸುವಂತೆ, ಕಾಮುಕರು ಹಗಲೆಲ್ಲಾ ಸಂಭಾವಿತರಾಗಿದ್ದು, ರಾತ್ರಿಯಾದೊಡನೆ ಸೆಂಟಿನ ಸುವಾಸನೆಯಿಂದ ಘಟಿಂಗರಾಗಿ, ವೇಶ್ಯಾಗೃಹಗಳ ಬಾಗಿಲನ್ನು ತೆರೆಯಿಸುತ್ತಾರೆ! ಲಲಿತೆಯೂ, ತಳವಾರರೂ, ನಿಶ್ಶಬ್ದವಾಗಿ ಒಳಸಾರಿದರು.

ಒಳಗಿನ ಕೋಣೆಯಲ್ಲೇ ಇಬ್ಬರೂ ಇದ್ದರು. ಹೀರೆ, ಅರ್ಧದಿಗಂಬರೆಯಾಗಿ, ಮಂಚದಮೇಲೆ ಕುಳಿತಿದ್ದಳು. ಅವಳನ್ನು ನೋಡಿ ವಿದ್ಯುದ್ದೀಪವು ಕಿಳಕಿಳನೆ ನಗುವಂತಿತ್ತು. 'ತಿರುಗುತ್ತಿದ್ದ ಬೀಸಣಿಗೆ, ಅರ್ಧವೇಕೆ? ಪೂರ್ಣದಿಗಂಬರೆಯಾಗಿಬಿಡು' ಎನ್ನುವಂತೆ, ಅವಳ ವಸನಗಳನ್ನು ಹಾರಿಸುತ್ತಿತ್ತು. ಅವಳ ಬಳಿಯಲ್ಲೇ ಈಜಿ ಚೆಯರಿನಲ್ಲಿ, ಅವಳ ಅಂದಿನ ಬೇಟೆ ಕುಳಿತಿತ್ತು. ಮುಖ, ಮೈತುಂಬಾ ಒಂದೇ ಸವನೆ ಸಿಗರೇಟಿನ ಧೂಮದ ಮುಸುಕು! ನೋಡಿ ಲಲಿತೆ ಆಶ್ಚರ್ಯದಿಂದ ಮೈಮರೆತಳು.

"ಲಲಿತಾ!" ಎಂದನು ರಾಜಾರಾಮ

"ನೀವು!" ಎಂದಳು ಲಲಿತೆ. "ಇಲ್ಲಿ!"

ಕೂಡಲೇ ಇನ್ಸ್‌ಪೆಕ್ಟರ್ ಸಾಹೇಬರೊಡನೆಂದಳು; ಸ್ವಾಮಿ! ಈ ರಾಕ್ಷಸಿಯೇ ನನ್ನ ಹಾರವನ್ನು ಕಳವು ಮಾಡಿದವಳು!"

"ರಾಕ್ಷಸಿ! ನಾನು! ಹಾರ! ಕಳವು! ಹ್ಹ, ಹ್ಹ, ಹ್ಹೊ, ಹ್ಹೋ!" ಎಂದು ನಕ್ಕಳು ಹೀರಾ.

"ನಿನ್ನ ನಗುವೆಲ್ಲಾ ಸಾಕು, ಚಂಡಾಲೀ!" ಎಂದು ಲಲಿತೆ "ಇನ್ಸ್‌ಪೆಕ್ಟರ್‌ಸಾಹೇಬರೇ, ನಾನು ಹೇಳಿದ್ದು ಅರ್ಥವಾಯಿತಷ್ಟೇ!" ಎಂದಳು.

"ಎಲ್ಲಿದೆಯಮ್ಮಾ ಆ ಹಾರ?"

"ಆ ಆಭರಣದ ಪೆಟ್ಟಿಗೆಯಲ್ಲಿರಬೇಕು!"

"ನೋಡೋಣ, ಬೀಗದ ಕೈ!"

"ಬೀಗದ ಕೈ ಇಲ್ಲ. ಕಳೆದುಹೋಗಿದೆ." ಎಂದಳು ಹೀರಾ.

"ಕಾನೂನಿಗೆ ಸರಿಯಾಗಿ ನಡೆಯಬೇಕು ನೋಡಿ. ಬರಲಿ ಬೀಗದ ಕೈ ಈಚೆ "ಇಲ್ಲವಾದರೆ ಟ್ರಂಕು ಒಡೆಯಬೇಕಾದೀತು" ಎಂದು ಇನ್ಸಪೆಕ್ಟರರು ಎಚ್ಚರಿಸಿದರು. ಬೀಗದ ಕೈ ಈಚೆ ಬಂತು. ಟ್ರಂಕಿನ ಬಾಗಿಲು ತೆರೆದು, ಹಾರವನ್ನು ಹೊರಗೆ ತೆಗೆದರು.

"ಹಾ! ಅದೇ! ಅದೇ!" ಎಂದಳು ಲಲಿತೆ.

"ಇನ್ಸ್‌ಪೆಕ್ಟರ್ ಸಾಹೇಬ್! ಅದು ನನ್ನ ಹಾರ!" ಹೀರೆ ಮಾರ್ನುಡಿದಳು.

"ನಿನ್ನದೆಂಬುದಕ್ಕೆ ರುಜುವಾತೇನು?"

"ಮತ್ತೆ ನಿನ್ನ ರುಜುವಾತೇನು?"

"ಅದರಲ್ಲಿ 'ಲಲಿತಾ' ಎಂದು ಅಕ್ಷರಗಳನ್ನು ಕೆತ್ತಿದೆ."

ಇನ್ಸ್‌ಪೆಕ್ಟರರು ನೋಡಿ, "ಇದಕ್ಕೇನು ಹೇಳುತ್ತೀರಿ?" ಎಂದು ಕೇಳಿದರು.

ಹೀರೆ ಸುಮ್ಮನಿದ್ದಳು.

"ಮಿಸೆಸ್ ಹೀರಾಬಾಯಿ!" ಇನ್ಸ್‌ಪೆಕ್ಟರರು ಮುಂದುವರಿಸಿದರು. 'I am very sorry" ಕಾನೂನು ಪ್ರಕಾರ ನಿಮ್ಮನ್ನು ಎರೆಸ್ಟ್ ಮಾಡಬೇಕಾಗುತ್ತದೆ."

"ಸಾಹೇಬ್! ನಾನು ಅದನ್ನು ಕಳವು ಮಾಡಲಿಲ್ಲ."

" ಮತ್ತೆ ? "

ಹೀರಾ ರಾಜಾರಾಮನನ್ನು ನಿರ್ದೇಶಿಸಿದಳು.

" ಹಾಂ ! " ಎಂದು ಲಲಿತೆ-ಇನ್ಸ್‌ಪೆಕ್ಟರರಿಬ್ಬರೂ, ಆಶ್ಚರ್ಯದಿಂದ ಏಕಕಾಲದಲ್ಲಿ ಕೇಳಿದರು.

" ಹೂಂ! ಗೊತ್ತಾಯಿತಷ್ಟೇ, ಈ ರಾಯರೇ ನನಗೆ ಇದನ್ನು ತಂದು ಕೊಟ್ಟವರು. "

ಇನ್ಸ್‌ಪೆಕ್ಟರರು ಲಲಿತೆಯ ಕಡೆಗೆ ನೋಡಿ, ಇದನ್ನು ಮೊದಲೇ ಊಹಿಸಿಕೊಂಡವರಂತೆ ಸೂಕ್ಷ್ಮವಾಗಿ ನಕ್ಕರು

ಲಲಿತೆಗೆ ಮೂರ್ಛೆ ಬಂದಂತಾಯಿತು. ಅವಳು ಮತ್ತೆ ಕ್ಷಣಕಾಲವೂ ಅಲ್ಲಿ ನಿಲ್ಲಲಿಲ್ಲ. ಹುಚ್ಚು ಸುಂಟರಗಾಳಿಯಂತೆ, ಅಲ್ಲಿಂದೆದ್ದು ಮನೆಯ ಕಡೆಗೆ ಓಡಿದಳು. ಹೊಸ್ತಿಲು ದಾಟುತ್ತಲೇ ನಿಜವಾಗಿಯೂ ಸ್ಮೃತಿದಪ್ಪಿ ಧೊಪ್ಪನೆ ಉರುಳಿದಳು.

೮

ಅವಳಿಗೆ ಎಚ್ಚರವಾದಾಗ, ಅವಳು ಆಸ್ಪತ್ರೆಯ ಹೆರಿಗೆ ವಾರ್ಡಿನಲ್ಲಿದ್ದಳು. ಯಾರೋ ಅವಳನ್ನು ತಂದು ಅಲ್ಲಿಗೆ ಸೇರಿಸಿದ್ದರು. ಮಗುವಿನ ಕೂಗು ಅವಳನ್ನು ಎಚ್ಚರಿಸಿತು. ಆನಂದದ ತೆರೆಗಳ ಸ್ಪರ್ಶದಿಂದ ತನು ಪುಲಕಿತವಾಯಿತು. ಆಗಲೇ ಕಳೆದ ಘಟನೆಗಳ ಸ್ಮರಣೆ ಮರುಕಳಿಸಿ ಪುನಃ ಮೂರ್ಛೆ ಬರುವಂತಾಯಿತು.

ತನಗೆ ಪುತ್ರೋತ್ಪತ್ತಿಯಾಯಿತೆಂದು ರಾಜಾರಾಮನಿಗೆ ವದಂತಿಯಾಯಿತು. ಆನಂದದ ಸುಗ್ಗಿಯಿಂದ ಆಸ್ಪತ್ರೆಯಕಡೆಗೆ ಧಾವಿಸಿದನು. ರಾಜಾರಾಮನು ವ್ಯಭಿಚಾರದ ಪಾಪಕೂಪಕ್ಕೆ ಬಿದ್ದಿದ್ದರೂ, ಅವನಿಗೆ ಲಲಿತೆಯ ಮೇಲಿನ ಮಮತೆಯಾಗಲೀ, ವಾತ್ಸಲ್ಯವಾಗಲೀ, ಏನೂ ಕಡಿಮೆಯಾಗಿರಲಿಲ್ಲ. ಲಲಿತೆಯಮೇಲಿನ ಅಸಮಾಧಾನದಿಂದ, ಅವನು ಹೀರೆಯ ಸ್ನೇಹವನ್ನು ಗಳಿಸಿದುದೂ ಅಲ್ಲ. ವ್ಯಭಿಚಾರಿಗಳೆಲ್ಲರೂ, ತಮ್ಮ ಮಡದಿಯರ ವಿಷಯದಲ್ಲಿ ನಿರಾಸಕ್ತರು ಎಂದು ಹೇಳುವಂತಿಲ್ಲ ಮುಖ್ಯವಾಗಿ ತಮ್ಮ ಶೀಲದ ವಿಷಯದಲ್ಲಿ, ತಮ್ಮಾಕೆಗೆ ಸಂಶಯ ಬಾರದಿರಲೆಂದು ಅಂಥವರು, ವಿಪರೀತವಾದ ಮಮತೆಯನ್ನು ತೋರಿಕೆಗಾದರೂ ಪ್ರದರ್ಶಿಸುತ್ತಾರೆ.

ಆದರೂ ವ್ಯಭಿಚಾರವೆಂಬುದು ಒಂದು ಹುಟ್ಟುಗುಣದಂತೆ, ಅವರ ರಕ್ತಗತವಾಗಿರುವುದರಿಂದ, ಅವರಿಂದ ಅದನ್ನು ಬೇರ್ಪಡಿಸುವುದು ಸಾಧ್ಯವೂ ಅಲ್ಲ. ಗೃಹಶಾಂತಿಯಿದ್ದವರೆಲ್ಲರೂ ವ್ಯಭಿಚಾರಿಗಳಲ್ಲ ಎನ್ನಲು ಬರುವುದಿಲ್ಲ. ಗೃಹಶಾಂತಿಯಿಲ್ಲದವರೆಲ್ಲರೂ ವ್ಯಭಿಚಾರಿಗಳು ಎನ್ನುವುದು ಹೇಗೆ? ತಮ್ಮ ನೀರೆಯರ ವಿಷಯದಲ್ಲಿ ಬೇಸತ್ತರೂ, ಅಂಥವರು ವ್ಯಭಿಚಾರವೆಂಬುದು ಪಾಪಕೂಪವೆಂದು ಅಂಜಿ, ಅದರಿಂದ ದೂರವೇ ಇದ್ದುಬಿಡುತ್ತಾರೆ.

ರಾಜಾರಾಮನು ಹೋದಾಗ, ಲಲಿತೆ ಎಡಮಗ್ಗುಲಾಗಿ ಮಲಗಿಕೊಂಡಿದ್ದುದರಿಂದ ಅವಳು ಇವನನ್ನು ನೋಡಲಿಲ್ಲ. ರಾಜಾರಾಮನು ಮಗುವನ್ನು ಮುದ್ದಿಸಿ, ' ಲಲಿತಾ!" ಎಂದು ಕರೆಯುತ್ತಲೇ ಈಚೆ ನೋಡಿದಳು.

''ಯಾರು! ಇಲ್ಲಿ? ನಡೆ ಹೊರಗೆ! ನರ್ಸ್, ನನ್ನ ಮಗುವನ್ನು ಅಪಹರಿಸಿಕೊಂಡು ಹೋಗಲು ಬಂದಿದ್ದಾನೆ. ಕಳುಹಿಸು ಅವನನ್ನು ಹೊರಗೆ!'' ಎಂದು ಗರ್ಜಿಸಿದಳು.

ನರ್ಸ್, ''ಅಮ್ಮಾವರಿಗೆ ಏನೋ ಉನ್ಮಾದವಾದ ಹಾಗಿದೆ, ಸ್ವಾಮಿ! ಮತ್ತೆ ಬನ್ನಿ.'' ಎಂದು, ''ಯಾರಮ್ಮಾ ಅವರು?" ಎಂದು ಕೇಳಿದಳು.

''ಅವನೊಬ್ಬ ವ್ಯಭಿಚಾರಿ!''

ಕೇಳಿ, ರಾಜಾರಾಮನಿಗೆ ಸಿಡಿಲು, ಮಿಂಚುಗಳೆರಡೂ ಏಕಕಾಲಕ್ಕೆ ಬಂದು ತನ್ನನ್ನು ಬಡಿದು ಭೇದಿಸಿದಂತೆ ಭಾಸವಾಯಿತು. ಉನ್ಮಾದ ಹಿಡಿದಂತೆ, ಅವನು ಅಲ್ಲಿಂದ ಹೀರೆಯ ಮನೆಗೆ ಬಂದನು; ಹೀರಾ, ಅವನನ್ನು ಸ್ವಾಗತಿಸುತ್ತಾ, ''ಏನು, ರಾಯರಿಗೆ ಪುತ್ರೋತ್ಪತ್ತಿಯಾದುದಕ್ಕೆ ನಮಗೆ ಕಾಫಿ ಇಲ್ಲವೇ?" ಎಂದು ನಗುತ್ತಾ ಕೇಳಿದಳು.

''ಅದು ಸತ್ತರೆ ಸಾಕಿತ್ತು ಹೀರೆ," ಎಂದನು ಇವನು.

ಹೀರಾ, ಯಾವುದೋ ಆಲೋಚನೆಯಿಂದ ಮೌನವಾಗಿದ್ದಳು.

ಲಲಿತೆ, ಪ್ರಸವಿಸಿದ ಮರುದಿನವೇ ದಾಮುವೂ, ಗಣೇಶರಾಯರೂ ಹಳ್ಳಿಯಿಂದ ಓಡಿ ಬಂದರು. ಲಲಿತೆಯ ಶೋಚನೀಯ ಸ್ಥಿತಿಗಾಗಿ, ಅವರು ತುಂಬಾ ಮರುಕಗೊಂಡು ಧಾರಾಕಾರವಾಗಿ ಕಂಬನಿ ಸುರಿಸಿದರು. ಅದಕ್ಕಿಂತ ಮಿಗಿಲಾಗಿ ಅವರು ಏನನ್ನೂ ಮಾಡುವಂತಿರಲಿಲ್ಲ. ಆದರೂ, ಅವರಿಗಾಗಲೀ' ಲಲಿತೆಗಾಗಲೀ, ಮುದ್ದುಮುದ್ದಾದ ಮಗುವನ್ನು ನೋಡಿದರೆ, ಆ ದುಃಖವು ಎಷ್ಟೋ ಪಾಲು ಶಾಂತವಾಗುತ್ತಿತ್ತು.

ಆಸ್ಪತ್ರೆಯ ಲೇಡಿ ಡಾಕ್ಟರ್ ಕೂಡಾ ಬಹಳ ಕರುಣಾಳು ಅವಳು ಹಿಂದೆ ರಾಜಾರಾಮನ ಸಹಪಾಠಿಯಾಗಿದ್ದಳಂತೆ. ಈಗ L. M. P. ಡಾಕ್ಟರಳಾಗಿದ್ದಾಳೆ. ಲಲಿತೆಯ ಸ್ಥಿತಿಗಾಗಿ ಬಹಳ ಮರುಕಪಡುತ್ತಾ ಅವಳು "ಈಗಿನ ಕಾಲದಲ್ಲಿ ಯಾರನ್ನೂ ನಂಬಲಿಕ್ಕೆ ಬರುವುದಿಲ್ಲ. ಇವತ್ತು ಹೀಗಿದ್ದವನು ನಾಳೆ ಹೀಗಿರುವುದಿಲ್ಲ. ಇಲ್ಲವಾದಲ್ಲಿ ಅಷ್ಟು ಒಳ್ಳೆಯವರಾಗಿದ್ದ ರಾಜಾರಾಮರಾಯರು ಹೀಗಾಗುತ್ತಿದ್ದರೇ? ನಾವು ಒಟ್ಟಿಗೆ ಕಲಿಯುತ್ತಿರುವಾಗ, ಅವರಿಗೆ ಹುಡುಗಿಯರ ಹತ್ತಿರ ಮಾತನಾಡುವುದೆಂದರೂ, ಪಾಪ! ತುಂಬಾ ನಾಚಿಕೆ. ಆದರೆ, ಈಗ?—ಅದಕ್ಕೇ ನೋಡಿ, ನಾನು ಈ ತನಕ ಮದುವೆಯಾಗಿಲ್ಲ, ಇನ್ನು ಆಗುವುದೂ ಇಲ್ಲ. ನಾವು ಮದುವೆಯಾಗದವರು ಸೂಳೆ-ವಿಟರ ಮನೆಗಲ್ಲ, ಅವರ ಅಪ್ಪನ ಮನೆಗೆ ಹೋದರೂ ಕೇಳುವವರು ಯಾರು?" ಎಂದು ಅವಿವಾಹಿತರ ಮಹಿಮೆಯನ್ನು ಕೊಂಡಾಡಿದಳು.

ಹತ್ತು ಹನ್ನೊಂದು ದಿವಸಗಳು ಕಳೆದ ಮೇಲೆ ಕೂಸು ಸಹಿತವಾಗಿ ಲಲಿತೆ ಮನೆಗೆ ಹಿಂದಿರುಗಿದಳು. ದಾಮುವೂ, ಗಣೇಶರಾಯರೂ ಎರಡು ದಿನಗಳ ಹಿಂದೆಯೇ ಬಂದಿದ್ದು, ಲಲಿತೆಗೆ ಆಸ್ಪತ್ರೆಯಿಂದ ಮನೆಗೆ ಮರಳಲು ಬಾಡಿಗೆಯ ಮೋಟಾರುಕಾರು, ಮಗುವಿಗೆ ತೊಟ್ಟಿಲು, ಬಟ್ಟೆ ಇತ್ಯಾದಿ ಸಲಕರಣೆಗಳನ್ನೂ ದಗಿಸಿದರು.

ಆಸ್ಪತ್ರೆಯಿಂದ ಮನೆಗೆ ಬಂದ ದಿನವೇ, ಊಟ-ಸಮಾರಾಧನೆ, ಪುರೋಹಿತ, ಹೋಮ, ಮುಂತಾದವುಗಳ ಗದ್ದಲವಿಲ್ಲದೆ ಹುಡುಗನಿಗೆ ಭುಜಂಗನೆಂದು ನಾಮಕರಣವಾಯಿತು. ಸ್ವಲ್ಪ ದಿನಗಳಲ್ಲೇ ಅವನು ತನ್ನ ಆಟವನ್ನೂ ಪ್ರಾರಂಭಿಸಿ ಬಿಟ್ಟನು. ಆದರೆ, ಲಲಿತೆಗೆ ಸುಖಶಾಂತಿಗಳು ದೊರೆಯಲು ಇನ್ನೂ ಎಷ್ಟೋ ದಿನಗಳು ಬೇಕಾಗಿದ್ದವು. ಅವುಗಳ ಲಭ್ಯವು ಕೂಡಾ ಅವಳ ಮನೋಸ್ಥಿತಿಯನ್ನೇ ಹೊಂದಿಕೊಂಡಿತ್ತು. ಅರಮನೆಯ ಹಾಗಿದ್ದ ಮನೆಯು ಕೂಡಾ ಅವಳಿಗೆ ಈಗ ಮರುಭೂಮಿಯಾಯಿತು. ಸುತ್ತಣ ಜನರು, ನೆರೆಯವರು ಬಂದು ಏನೇನೋ ಸಮಾಧಾನದ ಮಾತುಗಳನ್ನು ಹೇಳುವರು. ಆದರೆ, ಎಲ್ಲವೂ ಲಲಿತೆಯ ಕಿವಿದೆರೆಯ ಹೊರಗೇ! ನಾಲ್ಕಾರು ದಿನಗಳ ಮೇಲೂ ಅವಳು ಹುಚ್ಚಿಯಂತಿದ್ದಳು. ದಾಮುವೂ ಗಣೇಶರಾಯರೂ ಲಲಿತೆಯ ಸ್ಥಿತಿ ಸುಧಾರಿಸುವ ತನಕ ಎಂಬಂತೆ—ಮಂಗಳೂರಿನಲ್ಲಿ ಬಂದು ಮೊಕ್ಕಾಂ ಮಾಡಿದ್ದರು. ಮನೆಯಲ್ಲಿ ಎಲ್ಲಾ ಮೇಲ್ವಿಚಾರಣೆಯೂ ಅವರದೇ!

ಲಲಿತೆಯಾಗಿಯೇ ಯಾವುದನ್ನೂ ಮಾಡುತ್ತಿರಲಿಲ್ಲ, ಕೇಳುತ್ತಿರಲಿಲ್ಲ. ಅವಳ ಊಟೋಪಚಾರಗಳೆಲ್ಲವೂ ತಂದೆ-ಅಣ್ಣಂದಿರ ಒತ್ತಾಯದ ಮೇಲೆಯೇ! ಅದು ಕೂಡಾ ಅವರು ಒಲ್ಮೆಯಿಂದ ಹೇಳಿ, ಹೇಳಿ ಬೇಸತ್ತು ಕೊನೆಗೆ ಗದರಿಸಿದ ಮೇಲೆಯೇ ಅವಳು ಕುಳಿತಲ್ಲಿಂದ ಏಳುತ್ತಿದ್ದಳು. ದುಃಖವು ಕ್ರಮೇಣವಾಗಿ ಇಲ್ಲವಾಗುತ್ತದೆಂದು ನೆರೆನಂಬಿಕೊಂಡಿದ್ದ ರಾಯರಿಗೂ ದಿನೇ ದಿನೇ ಲಲಿತೆಯ ದುಃಖವು ಇನ್ನಷ್ಟು ಹೆಚ್ಚುತ್ತಿರುವುದನ್ನು ನೋಡಿ, ತಮ್ಮ ನಂಬಿಕೆಯು ಖಂಡಿತ ತಪ್ಪಿಹೋಯಿತು. 'ಇವಳದೇನು ಮಹಾ ದುಃಖ? ಲೋಕದಲ್ಲಿ ಇವಳಂಥ ಸ್ಥಿತಿ ಎಷ್ಟು ಮಂದಿ ಮಹಿಳೆಯರಿಗಾಗಿರಲಿಕ್ಕಿಲ್ಲ! ಆದರೂ, ಎಲ್ಲರೂ ಹೀಗೆಯೇ ಇರುತ್ತಾರೇನು? ಅವನು ಹಾಳಾದನೆಂದು ನಾವೂ ಹಾಳಾಗಲಿಕ್ಕಾಗುತ್ತದೆಯೇ? ನಮ್ಮ ಪ್ರಪಂಚ ಸರಿಯಾಗಿ ನಡೆಯಬೇಕಲ್ಲ?" ಎಂದು ಮುಂತಾಗಿ ಬೇಸತ್ತರು.

ಲಲಿತೆ ಈಗ ಮೂರೂ ಹೊತ್ತನ್ನೂ ಕಳೆಯುವುದು ತನ್ನ ಕೋಣೆಯಲ್ಲಿಯೇ! ಮನೆಯ ಮುಂದೆ ರಾಶಿರಾಶಿಯಾಗಿ ತರಲೆಗೆ ಬಿದ್ದಿದ್ದರೂ ಕೇಳುವವರಿಲ್ಲ. ಹೂ-ಗಿಡಗಳ ನೀರು, ಗೊಬ್ಬರವಿಲ್ಲದೆ ಬಾಡಿಹೋಗಿವೆ. ಬಾಳೆಗಿಡಗಳು ಕಂಗಾಲಾಗಿವೆ. ತೆಂಗಿನ ಮರಗಳು, 'ಇನ್ನು ಇದೇ ಸ್ಥಿತಿಯಲ್ಲಿ ಹೆಚ್ಚುಕಾಲ ನಿಲ್ಲುವುದು ನಮ್ಮಿಂದ ಸಾಧ್ಯವಿಲ್ಲ' ಎನ್ನತೊಡಗಿವೆ. ಆದರೂ ಅವುಗಳನ್ನು ಕೇಳುವವರಿಲ್ಲ.

ಲಲಿತೆ ಮನೆಗೆ ಬಂದ ಮೊದಲಲ್ಲಿಯೇ ತನ್ನ ಕೋಣೆಯಲ್ಲಿ, ರಾಜಾರಾಮನ ಬಳಿಯಲ್ಲೇ ಇದ್ದ, ತನ್ನ ಭಾವಚಿತ್ರವನ್ನು ಕಿತ್ತು ಹರಿದುಹಾಕಿದ್ದಳು. "ಅದೇಕೆ ಹಾಗೆ ಮಾಡಿದೆ?" ಎಂದು ಗಣೇಶರಾಯರು ಪ್ರಶ್ನಿಸಿದಾಗ, "ಈಗ ಸಧವೆಯಾದರೂ, ನನ್ನದು ವಿಧವೆಯ ಬಾಳು. ಆ ವಿಧವೆಯ ಭಾವಚಿತ್ರವೇಕೆ?" ಎಂದಳು.

"ಹಾಗಾದರೆ, ಅವನ — ಆ ವ್ಯಭಿಚಾರಿಯ — ಭಾವಚಿತ್ರವೇಕೆ? ಅದನ್ನೂ ಒಗೆದು ಬಿಡು" ಎಂದರು ಕ್ರೋಧದಿಂದ.

"ಅವರು ಈ ಭಾವಚಿತ್ರವನ್ನು ತೆಗೆಯುವಾಗ ವ್ಯಭಿಚಾರಿಯಾಗಿರಲಿಲ್ಲಪ್ಪ" ಎಂದಳು

"ಹಾಗಾದರೆ, ನೀನು? ಆ ಭಾವಚಿತ್ರವನ್ನು ತೆಗೆಯುವಾಗ, ........?" ಎಂದು ಕೇಳಿದರು.

ಲಲಿತೆ ಪ್ರತಿಯಾಗಿ ಏನನ್ನೂ ನುಡಿಯಲಿಲ್ಲ ಗಣೇಶರಾಯರು, 'ಅವಳೇನೋ, ಅವಳ ಭಾವನೆಯೇನೋ? ತನಗೇಕೆ ಬೇಕು, ಸುಮ್ಮನೆ ಇಲ್ಲದ್ದೊಂದು' ಎಂದು ಭಾವಿಸಿ ಸುಮ್ಮನಾದರು.

ಗಣೇಶರಾಯರು ಮಂಗಳೂರಿಗೆ ಬಂದು ಒಂದು ತಿಂಗಳ ಮೇಲೆಯೇ ಆಗಿಹೋಯಿತು. ಅಷ್ಟರೊಳಗಾಗಿಯೇ ಲಲಿತೆಯ ಚಿಂತೆಗಿಂತಲೂ ಹೆಚ್ಚಾಗಿ ಅವರಿಗೆ ತಮ್ಮ ಮನೆಯ ಚಿಂತೆಯು ಪ್ರಾರಂಭವಾಯಿತು. ಯಾವಾಗ ನೋಡಿದರೂ, ಅವರಿಗೆ ತಮ್ಮ ಮನೆ ವಿನಾಶವಾದಂತೆ ಕನಸು ಬೀಳುತ್ತಿತ್ತು. ಕಳ್ಳರು ತಮ್ಮ ಮನೆಗೆ ಕನ್ನ ಕೊರೆದು ಇದ್ದುದನ್ನೆಲ್ಲಾ ದೋಚಿಕೊಂಡು ಹೋದರು. ಸಿಡಿಲೆರಗಿ ತಮ್ಮ ಮನೆ ನೆಲಸಮವಾಯಿತು---ಮುಂತಾಗಿ ಲಲಿತೆಯೂ ತನಗಾಗಿ ಉಳಿದವರು ಕಷ್ಟಪಡುವುದು ಬೇಡ ಎಂಬಾಲೋಚನೆ ಯಿಂದ ರಾಯರಿಗೆ ಹೋಗಲು ಒಪ್ಪಿಗೆ ಕೊಟ್ಟಳು. ಅವರು ಪ್ರಯಾಣದ ಸಿದ್ಧತೆಯಲ್ಲಿ ತೊಡಗಿದರು.

ರಾಜಾರಾಮನಿಗೆ ಮಹಾವಿಪತ್ತು ಪ್ರಾರಂಭವಾಗಿತ್ತು. ಅವನಿಗೆ ಬಿಕೆ ಬೇಡುವ ಪ್ರಸಂಗ ಬಂದಿತ್ತು. ಕಾನೂನು ಪ್ರಕಾರ, ವೇಶ್ಯಾಸಕ್ತನಾದ ಅವನಿಗ್ಗೆ ಒಂದು ದಮ್ಮಡಿ ಪೈ ಕೂಡಾ ಸಿಕ್ಕಲಿಕ್ಕೆ ಸಾಧ್ಯವಿಲ್ಲ. ಹೀರೆಯಂತೂ ಅವನ ಆಸ್ತಿಯನ್ನೇ ಪೂರಾ ನಂಬಿದ್ದಳು. ದಿನಂಪ್ರತಿಯೂ ತನ್ನ ಒಂದೊಂದು ಮಾತಿನಲ್ಲಿ ಅದರ ವಿಲೇವಾರಿ ಏನೆಂಬುದನ್ನು ಅವ್ಯಕ್ತವಾಗಿಯಾದರೂ ಸೂಚಿಸುತ್ತಿದ್ದಳು. ಆದರೆ ಕಾನೂನನ್ನು ಚೆನ್ನಾಗಿ ಬಲ್ಲ ಗಣೇಶರಾಯರು —ಮೊದಲೇ ಅವರು ಮುನ್ಸೀಫರಾಗಿದ್ದವರು—ವಕೀಲರಿಗೆ, ಕೊನೆಗೆ ಜಜ್ ಸಾಹೇಬರಿಗೆ ಲಂಚದ ರುಚಿದೋರಿಸಿಯಾದರೂ, ತನಗೆ ಕಂಟ, ಕೋಲು ಕೊಡುವರೆಂಬುದನ್ನು ಅವನು ಚೆನ್ನಾಗಿ ಊಹಿಸಿದ್ದನು. ಆದರೂ, ವೇಶ್ಯೆಯ ಕಾಟವನ್ನು ತಡೆಯಲಾಗಲಿಲ್ಲ ಖುಷಿಯಂತೆ ಸುಮ್ಮನೆ ಕುಳಿತರೆ, ಅತ್ತ ತನ್ನ ಮನೆಯೂ ಅಲ್ಲ, ಇತ್ತ ವೇಶ್ಯೆಯ ಮನೆಯೂ ಅಲ್ಲ ಎಂಬಂತಾದೀತೆಂದು ಬೆದರಿದನು. ಕೊನೆಗೆ, ಹೇಗಿದ್ದರೂ ನೋಡೋಣ, ಈಗ ಅವರು ತನ್ನನ್ನು ಹೇಗೆ ಕಾಣುತ್ತಾರೆ ಎಂದು ಪರಿಶೀಲಿಸೋಣ ಎಂದಾಲೋಚಿಸಿದನು

ರಾಜಾರಾಮನು ಹೋದಾಗ ಗಣೇಶರಾಯರು ಪ್ರಯಾಣದ ಸನ್ನಾಹ ದಲ್ಲೇ ಇದ್ದರು. ಟ್ರಂಕು, ಬೇಗುಗಳನ್ನು ಭದ್ರವಾಗಿ ಕಟ್ಟಿ, ಪಾರ್ಸೆಲಿ ಗೋಸ್ಕರ ತಮ್ಮ ಹೆಸರಿನ ಚೀಟಿ ಅಂಟಿಸುತ್ತಿದ್ದರು. ಅವರಾಗಿಯೇ ಇವನನ್ನು

ನೋಡಿದರು. ನೋಡಿದ ಲಲಿತೆ ಫಕ್ಕನೆ ಎದ್ದು ಒಳಕೋಣೆಗೆ ಹೋದಳು. ದಾಮೋದರನು ಹುಚ್ಚು ನಗುವನ್ನು ನಕ್ಕು, ಮೆಲ್ಲನೆ 'ಸೂಳೆಯ ಗಂಡ!' ಎನ್ನುತ್ತಾ ಹೊರಗೆ ನಡೆದನು. ಪಡಸಾಲೆಯಲ್ಲಿ ರಾಜಾರಾಮ, ಗಣೇಶ ರಾಯರು ಇಬ್ಬರೇ ಉಳಿದರು. ಸಾಮಾನು ಕಟ್ಟುತ್ತಾ, ಕಟ್ಟುತ್ತಾ, ರಾಯ ರೊಮ್ಮೆ ತಲೆಯೆತ್ತಿ ಈಚೆ ನೋಡಿದರು.

"ಮಾವಯ್ಯಾ! ಏನು, ಹೊರಡುವ ವಿಲೇವಾರಿಯಲ್ಲಿದ್ದೀರೆಂದು ಕಾಣುತ್ತದೆ." ಎಂದನು.

"ಮಾವಯ್ಯ! ಮಾವಯ್ಯ! ಯಾರಯ್ಯಾ, ಯಾರಯ್ಯ ಸೂಳೆಯ ಮಿಂಡನಿಗೆ?" ಎಂದರು ಗಣೇಶರಾಯರು ಮನೆಯೇ ಮುರಿದು ಬೀಳು ವಷ್ಟು ಗಟ್ಟಿಯಾಗಿ.

ರಾಜಾರಾಮ ಸಿಟ್ಟಾಗಲಿಲ್ಲ. ತಾನೊಂದು ಕಾರ್ಯಸಾಧನೆಗೆ ಬಂದಾಗ ಹೀಗೆಲ್ಲಾ ಕೋಪಗೊಂಡರೆ ಕೆಲಸ ಕೆಟ್ಟೀತೆಂದು ಬಗೆದನು.

"ಅದೇಕೆ, ಮಾವಯ್ಯಾ! ಅಷ್ಟೊಂದು ಕೋಪ?" ಎಂದನು ಸಪ್ರಯತ್ನದಿಂದ ಮುಖದಲ್ಲಿ ಸ್ವಲ್ಪ ನಗುವನ್ನು ತಾರದೆ ಇರಲಿಲ್ಲ.

"ನಾನು ನಿನ್ನ ಮಾವಯ್ಯನಲ್ಲ!" ಎಂದರು ಇವರು.

"ಹೋ! ಹೋ! ನೀವು ಅಲ್ಲಗಳೆದರೂ, ನಮ್ಮ ಸಂಬಂಧವನ್ನು ತಿಳಿ ದವರು ಒಪ್ಪಬೇಕಲ್ಲ?"

"ಹೂಂ! ಹೂಂ! ಈಗ ಸಮ್ಮಂಧದ ಮಾತು ಬಂತು. ಅಲ್ಲವೇ? ಆ ಗಂಡನಿದ್ದ ಮುಂಡೆಯ ಮನೆಗೆ ಹೋಗುವಾಗ ಇದೆಲ್ಲಿ ಹೋಗಿತ್ತು?" ಎಂದರು.

"ಅಯ್ಯಯ್ಯೋ! ನೀವೆಲ್ಲಾ ಏನೇನೋ ತಪ್ಪು ತಿಳಿದುಕೊಂಡು ಬಿಟ್ಟಿದ್ದೀರಲ್ಲಾ?"

"ಘಟಿಂಗ! ಸಾಕು ಮಾಡು."

"ಹಿರಿಯರು ಬೈದರೆ, ಸುಮ್ಮನಿದ್ದು ಕೇಳುವುದು ಕಿರಿಯರ ಧರ್ಮ! ಇರಲಿ; ನಾನೀಗ ಯಾಕೆ ಬಂದುದೆಂದು ನಿಮಗೆ ಗೊತ್ತಾಯಿತೇ?"

"ಪಾಪ ಗೊತ್ತಾಗದೆ ಇರುತ್ತದೆಯೇ?"

"ಮತ್ತೆ ಸುಮ್ಮನೇಕಿದ್ದೀರಿ? ಎಲ್ಲಿ ಹೋದಳು ಲಲಿತೆ! ಒಂದು ಕಾಫಿ ಮಾಡಿ ಕೊಡಲಿಕ್ಕೂ ಏನು ಸಂಕಟ?"

" ಪಾಪಿಗಳಿಗೆ ಕಾಫಿ ಮಾಡಿಕೊಡುವಷ್ಟು ಉದಾರಬುದ್ಧಿ ನಮ್ಮಲ್ಲಿಲ್ಲ. ಬಂದಹಾಗೆಯೇ ಹಿಂದೆ ಹೋಗಬಹುದು. "

" ಏನು! ನಿಮ್ಮ ಮನೆಯೇ ಎಂಬುವಷ್ಟು 'ಫ್ರೀ'ಯಾಗಿ ಮಾತ ನಾಡುತ್ತೀರಲ್ಲಾ? ಬಹುಶಃ ಮುದಿಮರುಳು ಜಾಸ್ತಿಯಾಯಿತೆಂದು ಕಾಣುತ್ತದೆ. "

" ನಾಲಗೆ ಕೊಯ್ಯುತ್ತೇನೆ! " ಎಂದು ಗರ್ಜಿಸಿದರು.

" ಓಹೋಹೋಹೋ! ಅಲ್ಲವೇ? " ಎಂದು ಅಣಕಿಸಿ, " ಲಲಿತಾ, ಈ ಸೇಫಿನ ಬೀಗದ ಕೈ ಇಲ್ಲಿ ತಾ! " ಎಂದು ಒದರಿದನು.

" ಚಂಡಾಲ! ನಿನ್ನ ಹೊಲಸು ನಾಲಗೆಯಿಂದ ಅವಳ ಹೆಸರನ್ನು ಕರೆಯಬೇಡ! "

" ಏನಂದಿರಿ? " ಕೆಂಗಣ್ಣಾಗಿ ಕೇಳಿದನು.

" ಅದೇ! ಲಲಿತೆಗೆ, ಕೇಳುವವರಿಲ್ಲ, ದಿಕ್ಕಿಲ್ಲ! ಎಲ್ಲಾ ಸರಳವಾಗಿ ಲುಟಾಯಿಸಿಕೊಂಡು ಹೋಗಬಹುದೆಂದು ಮಾಡಿದಿ, ಅಲ್ಲವೇ? ಹೂಂ! ಹೂಂ! "

" ಓಹೋ! ನನ್ನ ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ನಿಮ್ಮೊಬ್ಬರ ಲೈಸನ್ಸ್ ಬೇಕು ಅಲ್ಲವೇ? ಅದಕ್ಕೆ ಈ ಅಡ್ಡಿ! "

" ಇನ್ನೊಂದು ಜನ್ಮ ಪಡೆದುಕೊಂಡು ಬಾ, ಆಸ್ತಿಯ ಹಕ್ಕನ್ನು ಕೇಳಲು................ "

ರಾಜಾರಾಮನು ಒಂದು ಹೆಜ್ಜೆ ಮುಂದಿಟ್ಟನು. ಗಣೇಶರಾಯರು. ತಮ್ಮ ಬಲವಾದ ಕೈಯಿಂದ, ಅವನ ಎದೆಯನ್ನು ಹಿಡಿದು ಹಿಂದೂಡಿಬಿಟ್ಟರು.

ರಾಜಾರಾಮನು ಇದು ಬಗೆಹರಿಯುವ ಬಾಬಲ್ಲವೆಂದುಕೊಂಡು, " ಹೂಂ! ಇನ್ನೊಂದು ಜನ್ಮ! ಅಲ್ಲವೇ? ಇರಲಿ, ನೋಡುತ್ತೇನೆ! ಕೋರ್ಟಿನಿಂದ ನೋಟೀಸ್ ಫೀ ಬಂದಾಗ ಎಲ್ಲವೂ ಗೊತ್ತಾದೀತು! " ಎಂದು ಹೊರಟುಹೋದನು.

ಗಣೇಶರಾಯರು ಈವ್ಯವಹಾರದಲ್ಲಿ ಕೈಹಾಕಬೇಕಾಯಿತು. ಪಾರ್ಸೆಲ್ಲು ಒಂದು ತಿಂಗಳ ತನಕ ಬಾಕಿಯಾಯಿತು. ಆದರೂ ಇದಕ್ಕಿಂತ ಮುಖ್ಯವಾದುದರಿಂದ ಅದು ಅದರಲ್ಲೇ ಕೈಹಾಕಿದರು.

ರಾಜಾರಾಮನಿಗೆ ತನ್ನ ಕೇಸ್ ಗುಣವಾದೀತೆಂದು ನಂಬಿಗೆಯೇನೂ ಇರಲಿಲ್ಲ. ಅವರೂ ತನ್ನ ದೆಸೆಚಕ್ರ ಚೆನ್ನಾಗಿದ್ದರೆ, ಯಾಕೆ ಜಯವಾಗ ಬಾರದು? ಪ್ರಯತ್ನ ಮಾಡದೆ ಇರಬಾರದು; ಎಂದು ವಕೀಲರನ್ನು ಹುಡುಕಿಕೊಂಡು ಹೊರಟನು.

ಮಾಳಿಗೆಯೊಂದರ ಗೋಡೆಯಲ್ಲಿ ವಕೀಲರ ಚಿಕ್ಕ ಬೋರ್ಡು ತೂಗಾ ಡುತ್ತಿದ್ದುದನ್ನು ಕಂಡು ಮೇಲೇರಿದನು. ಎಂ. ಎ. ಎಲ್. ಎಲ್. ಬಿ. ಬಾರ್-ಎಟ್ ಲಾ, ಎಂಬ ದೊಡ್ಡ ಬಿರುದನ್ನು ನೋಡಿಯೇ ಮೇಲೇರಿದನು. ಇವರು—ದೊಡ್ಡ ಬಿರುದುಗಳ ಗೃಹಸ್ಥರು - ಬುದ್ಧಿವಂತರೆಂದು ಅವನ ಭರವಸೆ. ಬುದ್ಧಿವಂತಿಕೆಗಳು ಡಿಗ್ರಿಯ ಮೇಲೆ ಹೊಂದಿಕೊಂಡಿಲ್ಲ' ಎಂದು ಇನ್ನೂ ಗೊತ್ತಾಗಿಲ್ಲ. ಸಾಮಾನ್ಯವಾಗಿ ದೊಡ್ಡ ಡಿಗ್ರಿಯ ಸಾಹೇಬರು ಗಳ ಫೀಸು ಧಾರಾಳ; ಆದರೆ, ಕೇಸ್‌ಗುಣ ನೂರರಲ್ಲಿ ತೊಂಭತ್ತೊಂಭತ್ತು ಪಾಲು ನಾಶ ಎಂದು ಇನ್ನು ಅನುಭವವಾಗಬೇಕಷ್ಟೇ.

ಸುಲಭವಾಗಿ ಒಳಗೆ ಹೋಗಲು ಅಪ್ಪಣೆ ದೊರೆಯಿತು. ಒಳಗೆ ವಕೀಲರು ಆರಾಮುಖುರ್ಚಿಯಲ್ಲಿ ಕಾಲು ಮೇಲೆಮಾಡಿ ಚುಟ್ಟಾ ಸೇದು ತ್ತಿದ್ದರು. ಲಾ ಬುಕ್ಕು, ಲಂಬರುಗಳು ಎಲ್ಲಿಯೂ ಕಾಣಿಸಲಿಲ್ಲ. ರಾಜಾ ರಾಮನೇ ಮೊದಲು. ' ನಮಸ್ಕಾರ ' ಎಂದನು.

ವಕೀಲರು ಚುಟ್ಟಾ ಸೇದುವದನ್ನು ನಿಲ್ಲಿಸಿ, ಕನ್ನಡ ತಿಳಿಯದವರಂತೆ, " Yes, Yes, Good Morning. Sit down " ಎಂದು ಖುರ್ಚಿ ಯನ್ನು ತೋರಿಸಿದರು. ರಾಜಾರಾಮನು ಧೂಳನ್ನೊರಸಿ, ಅದರ ಮೇಲೆ ಕುಳಿತನು.

ಎಡ್ವೋಕೇಟರು ಪುನಃ ಹೇಳತೊಡಗಿದರು; " ಏನು, ನೀವೂ ಈ ಬಾರಿ ಇಲೆಕ್ಷನ್ನಿಗೆ ನಿಲ್ಲುವ ಆಲೋಚನೆಯೋ ? ಆಗಬಹುದು; ಚಿಂತಿಲ್ಲ. ನಾನು ರೆಕ್‌ಮೆಂಡ್ ಮಾಡುತ್ತೇನೆ. ಆದರೆ, ನೀವು ಎಲ್ಲರ ಹಾಗೆ ಮಾಡ ಬಾರದು. ಸರಿಯಾಗಿ ಕೆಲಸಮಾಡಬೇಕು. ಅಧಿಕಾರ ಸಿಕ್ಕಿತೆಂದು, 'ಶಠಂ' ಎಂದು ಇರಬಾರದು............" ಎಂದು ಇನ್ನೂ ಏನೇನೋ ಹೇಳುತ್ತಿರು ವಷ್ಟರಲ್ಲಿ, ಇವನಿಗೊಂದೂ ಅರ್ಥವಾಗಲೇ ಇಲ್ಲ.

ಇವನು ಬೇರೆಯೇ ಹೇಳುವಷ್ಟರಲ್ಲಿ, ಅವರು, " ಹಾಂ ! ನೀವೆಲ್ಲಿ ದ್ದೀರಿ ? ನಾನು ವಕಾಲತ್ತು ಬಿಟ್ಟಮೇಲೆ ಹುಟ್ಟಿದ ಎಷ್ಟೋ ಮಂದಿ ಮುದುಕ

ರಾಗಿ ಸತ್ತುಕೂಡಾ ಹೋಗಿಯಾಯಿತು." ಎಂದರು. ಅವರು ಈಗ ಇಲೆಕ್ಷನ್ನಿಗೆ ಸೇರಿ, ಆದಷ್ಟು ದೇಶದಿಂದ ಸುಧಾರಣೆಗಳನ್ನು ಓಡಿಸುವ ಹವ್ಯಾಸದಲ್ಲಿದ್ದರು' ಇವನಿಗದು ಹೇಗೆ ಗೊತ್ತಾಗಬೇಕು ? ಅಲ್ಲಿಂದ ಕಾಲು ಕಿತ್ತಿದ್ದ.

ಇನ್ನೊಂದು ಬಿ. ಎ. ಎಲ್. ಎಲ್. ಬಿ. ಬೋರ್ಡಿನ ಮನೆಗೆ ಹೋದನು. ಇವರು ವಕಾಲತ್ತು ನಡೆಸುತ್ತಾರೋ ಇಲ್ಲವೋ ಎಂದು ಜನರ ಹತ್ತಿರ ವಿಚಾರಿಸಿಕೊಂಡೇ ಹೋದುದರಿಂದ, ತಪ್ಪಿ ಬೀಳಲಿಲ್ಲ. ವಕೀಲರು ಇವನು ಒಂದು ಅಕ್ಷರವೆತ್ತುವ ಮೊದಲೇ ಅಲ್ಲಿಂದೆದ್ದು ಹೋಗಿ ಬಿಟ್ಟರು. ಇವನಿಗೆ ವಿಚಿತ್ರವೆನಿಸಿತು. ಆಗ ಅಲ್ಲೇ ಇದ್ದ ಗುಮಾಸ್ತರು ಹೇಳಿದರು. "ಕಲ್ಲೋ, ಮಿಸ್ಟರ್ ! ನೀವು ಮೊದಲಾಗಿ ಐವತ್ತು ರೂಪಾಯಿ ಕೊಡಡ, ಅವರು ಮಾತನಾಡುವುದೇ ಇಲ್ಲ." ರಾಜಾರಾಮನಿಗೆ ಕಹಿಯಾಯಿತು. ಈ ವಕೀಲರು ತನ್ನನ್ನು ಫಕೀರನನ್ನಾಗಿ ಮಾಡುತ್ತಾರೆ ಎಂದು ಗೊತ್ತಾಯಿತು. ಉಪಾಯವಿಲ್ಲದೆ ಐವತ್ತು ರೂಪಾಯಿಗಳನ್ನು ಕಿಗೆದನು.

"ಏನು ಕೇಸು ?" ವಕೀಲರ ಬಾಯಿಯು ಬೇಗ ತೆರೆಯಿತು.

ರಾಜಾರಾಮನ ಹೇಳಿಕೆಯನ್ನು ಕೇಳಿ, "ಇದು ವಿಚಿತ್ರ ಕೇಸು!" ಎಂದು 'ಶರಾ' ಹೇಳಿ, ವಕೀಲರು, "ತುಂಬ ಕಷ್ಟ, ಆದರೂ ನೋಡೋಣ. ಮೊದಲು ನಮ್ಮ, 'ರುಸುಂ' ನಿರ್ಣಯವಾಗಲಿ" ಎಂದರು.

"ರುಸುಂ ಕೈಲಾದಷ್ಟು ಕೊಡುತ್ತೇನೆ. ಮಹಾಸ್ವಾಮಿಗಳಿಗೆ ಗೊತ್ತಿದೆ ನಾನು ಬಡವ. ಕೇಸ್ ಗುಣವಾದರೆ, ಕೇಳುವುದೇಬೇಡ. ನನ್ನ ಆಸ್ತಿಯ ಮುಕ್ಕಾಲು ಭಾಗವೂ ನಿಮಗೇ !"

'ಆದರೆ,—ಹೋದರೆ, ಎಂಬ ಆ ಪುರಾಣವೆಲ್ಲಾ ಬೇಡ. ನಾನು ಕೋರ್ಟಿನ ಗುದ್ದ ಹತ್ತಬೇಕಾದರೆ ಮೊದಲು, 'ಫೀಸಿ'ನ ಲೆಖ್ಖವಾಗಲಿ."

"ಮಹಾ ಸ್ವಾಮಿಗಳ ಅಂದಾಜು ಎಷ್ಟಿದೆಯೋ ?"

"ಹತ್ತು ಸಾವಿರ!"

"ಅಬ್ಬಾ !" ಎಂದು ಜೀವ ಹಾರಿಹೋದವರಂತೆ ಹೇಳಿದನು.

"ಸ್ವಾಮಿ ! ಮನುಷ್ಯನೇನೋ, ಗರೀಬನಹಾಗೆ ಕಾಣುತ್ತಾನೆ. ಸ್ವಲ್ಪ ತಗ್ಗಿಸಬಹುದು." ಎಂದು ಗುಮಾಸ್ತನು ಹೇಳಿದನು.

"ಹೂಂ ! ಎಂಟು ಸಾವಿರ."

ರಾಜಾರಾಮನು ಮತ್ತೂ ಅನುಮಾನಿಸಿದನು.

"ಐದುಸಾವಿರ ಇಡುವಿಯಾದರೆ ಮಾತನಾಡು; ಇಲ್ಲವಾದರೆ ಬಿಲ್ ಕುಲ್ ಸಾಧ್ಯವಿಲ್ಲ. ಹೋಗಬಹುದು."

ಅಂತೂ ಅದಕ್ಕೆ ಒಪ್ಪಿಕೊಂಡು ಬಂದುದಾಯಿತು. ಕೋರ್ಟಿನಲ್ಲಿ ಇವರ ಕೇಸನ್ನು ದಾಖಲು ಮಾಡಿದರೆ, ಅದು, 'adjourn' ಎಂದು ನಾಲ್ಕಾರು ತಿಂಗಳತನಕ ಬಾಕಿಯಾಯಿತು. ಈ ಅವಧಿಯಲ್ಲಿ ವಕೀಲರು ರಾಜಾರಾಮ ನನ್ನು ನಿಶ್ಚಿಂತನನ್ನಾಗಿ ಸುಮ್ಮನೆ ಕುಳಿತುಕೊಳ್ಳಲು ಬಿಡಲಿಲ್ಲ. 'ರಾಜಾರಾಮ! ಇವತ್ತು ಇಪ್ಪತ್ತೈದು ಕಿತ್ತೀಳೆ ತಾ! ಐವತ್ತು ಲಿಂಬೇಕಾಯಿ ಬರಲಿ! ಒಂದು ಗೊನೆ ಬಾಳೆಹಣ್ಣು ತಾ ನೋಡೋಣ! ನಮ್ಮ ಬೇಬಿಗೊಂದು ಗೊಂಬೆ ತಂದುಕೊಡು! ನನ್ನ ಬೀಬಿಗೂ ಒಂದು ಲೋಲಾಕು ಇರಲಿ!' ಇದೇ ರೀತಿ ಯಾಗಿ ಅವನನ್ನು ನಿಂತಲ್ಲಿ ನಿಲ್ಲಬಿಡದೆ, ಆಚೀಚೆ ಓಡಾಡಿಸಿದ್ದಲ್ಲದೆ, ಅವನ ರಕ್ತವನ್ನೂ ಸಂಪೂರ್ಣವಾಗಿ ಹಿಂಡಿ, ಹೀರಿಬಿಟ್ಟರು.

ಗಣೇಶರಾಯರೂ ಸುಮ್ಮನೆ ಕುಳಿತಿರಲಿಲ್ಲ. ತಮಗೆ ಕಾನೂನು ಚೆನ್ನಾಗಿ ಗೊತ್ತಿದ್ದರೂ, ಸಹಾಯಕ್ಕಿರಲಿ ಎಂದು ತಮ್ಮ ಮಿತ್ರರಾದ ಬೇರೊಬ್ಬ, ವಕೀಲರನ್ನು ಹಿಡಿದರು. ಅವರು ಮಿತ್ರರಾದ ಗಣೇಶರಾಯರಿಂದ 'ರುಸುಂ' ವಸೂಲು ಮಾಡುವ ಹಾಗಿಲ್ಲ, ವ್ಯವಹರಿಸಲು ಒಲ್ಲೆ ಎನ್ನುವ ಹಾಗೂ ಇಲ್ಲ. ಒಟ್ಟಾರೆ ಪೇಚಿನಲ್ಲಿ ಬಿದ್ದು ಒಪ್ಪಿದರು.

ನಾಲ್ಕು ತಿಂಗಳಮೇಲೆ ಒಂದು ದಿನ ಇವರ 'ಕೇಸ'ನ್ನು ವಿಚಾರಣೆ ಗಿಟ್ಟರು. ಆ ದಿನ ಬಿ. ಎ. ಎಲ್. ಎಲ್. ಬಿ. ರಾಮಚಂದ್ರಯ್ಯನನ್ನು ಹುಡು ಕಿದರೆ, ಇಡೀ ಊರಿನಲ್ಲೇ ಸಿಕ್ಕಲಿಲ್ಲ. ಅವರ ಮಗಳಿಗೆ ಸಾಯುವ ಸಂಕಟ, ಎಂದು ಮುಂಬಯಿಗೆ ಹಿಂದಿನ ದಿನವೇ ಹಡಗು ಹತ್ತಿದ್ದರಂತೆ. ಯಾರನ್ನು ದೂರುವುದು? ಒಟ್ಟಾರೆ ತನ್ನ ಗ್ರಹಚಾರ ಕೆಟ್ಟದು ಎಂದುಕೊಂಡನು. ಅವನು ಕೋರ್ಟಿಗೆ ಹೋಗುತ್ತಿದ್ದರೆ, ಆಸ್ತಿಯ ಲ್ಲಿ ಸ್ವಲ್ಪವಾದರೂ ಸಿಕ್ಕುವ ಸಂಭವವಿತ್ತು, ಆದರೆ, ಎಲ್ಲರೂ ನೋಡಿ ತನ್ನನ್ನು ನಕ್ಕಾರು, ಅವಮಾನ ವಾದೀತು ಎಂದು ಹೋಗಲಿಲ್ಲ. ಹೇಗೂ ವಕೀಲರಿಗೆ ತೆತ್ತ ಹಣ ನೀರಿನಲ್ಲಿ ಸುರಿದಂತಾಯಿತು. ಇನ್ನು ಅದು ಸಿಕ್ಕುವುದುಂಟೇ? ತಾನು ಪಡೆಯುವು ದುಂಟೇ? ಎಂದು ಹೋಗಲಿಲ್ಲ.

ರಾಜಾರಾಮನ ಗೈರುಹಾಜರಿಯಲ್ಲಿ ಕೇಸು ಲಲಿತೆಗೇ ಗುಣವಾಯಿತು.

ದಿಗ್ವಿಜಯ ಮಾಡಿದವರಷ್ಟು ಸಂತೋಷದಿಂದ ಗಣೇಶರಾಯರು ಮನೆಗೆ ಮರುಳಿದರು.

೯

ಗಣೇಶರಾಯರು ಹಳ್ಳಿಗೆ ಬಂದ ಮೇಲೆ ಎರಡು ತಿಂಗಳು ಸಂದು ಹೋದುದನ್ನು ಕಂಡರು. ಅಷ್ಟರಲ್ಲೇ ಚಳಿಗಾಲ ಆರಂಭವಾಯಿತು ಮರ ಗಳಲ್ಲಿ ಹೆಸರಿಗೂ ಒಂದು ಎಲೆ ಉಳಿಯಲಿಲ್ಲ. ರಾತ್ರಿಯೆಲ್ಲಾ ಸದ್ದಿಲ್ಲದ ಹಿಮ ಮಳೆಯು ಕರೆಯುತ್ತಿತ್ತು. ಬೆಳಗ್ಗೆ ಎದ್ದರೆ, ಮೆಲ್ಲನೆ ಮೂಡಿ ಬರುವ ಸೂರ್ಯನ ಬೆಳಕಿನಲ್ಲಿ, ಪ್ರತಿಯೊಂದು ಹುಲ್ಲಿನ ಎಳೆಯೂ ಬಣ್ಣಬಣ್ಣದ ಸಾವಿರಾರು ಮುತ್ತುಗಳಿಂದ ಶೋಭಿಸುತ್ತಿತ್ತು. ಸಮುದ್ರದ ಅಬ್ಬರ ತುಸು ಕಡಮೆಯಾಗುತ್ತಾ ಬರುತ್ತಿತ್ತು. ಚೆನ್ನಾಗಿ ದೃಗ್ಗೋಚರಿಸುತ್ತಿದ್ದ ಕುದುರೆ ಮೊಗಶೃಂಗವು ಹಿಮದ ಮುಸುಕಿನಲ್ಲಿ ಅಸ್ಪಷ್ಟವಾಗಿತ್ತು. ಸೂರ್ಯನೂ ಸರಿ ಯಾಗಿ ಗೋಚರಿಸನು. ಜಗತ್ತೇ ಜಡವಾಗಿ ಬಿದ್ದುಕೊಂಡಿದೆ.

ಇದೇ ಸಮಯದಲ್ಲಿ ಗಣೇಶರಾಯರು, 'ಉರಿ, ಉರಿ, ಉರಿ' ಎಂದು ಸಂಕಟದಿಂದ ಹೊರಳಲು ಪ್ರಾರಂಭಿಸಿದ್ದರು. ಚಳಿಗಾಲ; ಆದರೆ, ಗಣೇಶ ರಾಯರಿಗೆ, ಅದು ಬೇಸಗೆಗಿಂತಲೂ ಕಠಿಣವಾಗಿತ್ತು. ಮಂಗಳೂರಿನಿಂದ ಹಳ್ಳಿಗೆ ಬಂದೊಡನೆಯೇ, ಸಾಧಾರಣ ಒಂದು ವರ್ಷದ ಹಿಂದೆಯೇ ಪ್ರಾರಂಭ ವಾಗಿದ್ದ ಸೊಂಟನೋವು, ಬೆನ್ನುನೋವು ಸ್ವಲ್ಪ ವಿಪರೀತವಾಯಿತು. ಮೊದಲೆ ಮನೆಯಲ್ಲಿ ಹೆಂಗಸರಿಲ್ಲ. ಒಳಗೆ ಅಡುಗೆ ಕೆಲಸ ದಾಮೋದರನಿಂದಾಗಬೇಕು; ಹೊರಗೆ ಹಿತ್ತಲ ಕೆಲಸವೂ ಅವನ ಪಾಲು. ಇವೆರಡನ್ನೂ ಮಾಡುವುದರಲ್ಲೇ ಅವನಿಗೆ ಸಾಕು-ಬೇಕಾಗಿ ಹೋಗುತ್ತಿತ್ತು. ಇಚ್ಛಿಸಿದರೂ, ಅವನು ಗಣೇಶ ರಾಯರನ್ನು ಉಪಚರಿಸುವಂತಿರಲಿಲ್ಲ. ತಮ್ಮೆಲ್ಲಾ ಕಾರ್ಯಕಲಾಪಗಳನ್ನು ಗಣೇಶರಾಯರೇ ಮಾಡಿಕೊಳ್ಳುವಂಥ ಸ್ಥಿತಿಯಿತ್ತು. ಅವರ ಸಹಾಯ ಕ್ಕಿದ್ದುದು ಊರುಗೋಲು ಮಾತ್ರ.

ಒಂದು ದಿನ ಬೆಳಿಗ್ಗೆ ಏಕೋ ಹೊರಗೆ ಹೋದಾಗ ಊರುಗೋಲು ಜಾರಿ, ಅವರು ಕೆಳಗೆ ಉರುಳಿದರು. ಸಮೀಪದಲ್ಲಿ ಯಾರೂ ಇರಲಿಲ್ಲ. ಬಿದ್ದ ರಭಸಕ್ಕೆ ಅವರಿಗೆ ಮೂರ್ಛೆಯೂ ತಪ್ಪಿತು.

ಹೊಲದ ಹೊರೆಯಲ್ಲೇ ಅವರು ಉರುಳಿದ್ದರು. ಆ ದಾರಿಯಾಗಿ, ಅವರ ಮುಖ, ಮೈಗಳನ್ನು ಸ್ಪರ್ಶಿಸಿಯೇ, ಹೊಲದ ಹೆಚ್ಚಾದ ನೀರು ಸಾಗಿ

ಚರಂಡಿಯನ್ನು ಸೇರುತ್ತಿತ್ತು. ಮೊದಲೇ ಚಳಿಗಾಲದ ನೀರು; ತನ್ನ ಪ್ರಭಾವವನ್ನು ತೋರಿಸಿಯೇ ಬಿಟ್ಟಿತು. ಸುತ್ತಣ ಹವೆಯೂ ಆರೋಗ್ಯಕ್ಕೆ ಬಾಧಕವೇ ಆಗಿತ್ತು.

ತನ್ನ ಕೆಲಸಗಳಲ್ಲೇ ಇದ್ದ ದಾಮೋದರರಾಯರ ಗೋಜವೆಯನ್ನೇ ಮರೆತು ಬಿಟ್ಟನು. ಮಧ್ಯಾಹ್ನ ಊಟದ ಹೊತ್ತಿಗೆ, ರಾಯರು ಕಾಣದಿದ್ದರೂ ಎಲ್ಲೋ ಹೊರಗೆಹೋಗಿರಬಹುದೆಂದು ಭಾವಿಸಿ, ಬಟ್ಟಲನ್ನು ತಂದು ಅವರ ಕೋಣೆಯಲ್ಲಿಟ್ಟು, ಪುನಃ ತನ್ನ ಊಳಿಗಗಳಲ್ಲಿ ಮಗ್ನನಾದನು. ಅನ್ನವನ್ನು ಬೆಕ್ಕು ತಿಂದುಹೋಯಿತು. ಸಂಜೆ ಸೂರ್ಯ ಮುಳುಗುವ ಹೊತ್ತಿಗೆ ಸರಿಯಾಗಿ ಒಕ್ಕಲಿಗನೊಬ್ಬನು ತಂದನು, ಸಿಡಿಲ ಹೊಡೆತದಂಥ ವಾರ್ತೆ!

ನಾಲ್ಕಾರು ಜನರು ಹೋಗಿ ರಾಯರನ್ನು ಮನೆಗೆ ಸಾಗಿಸಿಕೊಂಡು ಬಂದರು. ಮೂರು ದಿನಗಳ ವರೆಗೆ ಅವರಿಗೆ ಪ್ರಜ್ಞೆಯಿರಲಿಲ್ಲ. ಅನೇಕರು ಬಂದು ನೋಡಿಕೊಂಡು ಹೋದರು. ಎಲ್ಲರೂ ದಾಮೋದರನ ಸ್ಥಿತಿಗಾಗಿ ಮರುಗಿದರು. ರಾಯರಿಗಾಗಿ ಯಾರೂ ದುಃಖಿಸಲಿಲ್ಲ. ‘ ಹೇಗೂ ಮುದುಕ! ಇವತ್ತಲ್ಲದಿದ್ದರೆ, ನಾಳೆಯಾದರೂ ಸಾಯುವವನೇ ಎಂದು ಅವರೆಲ್ಲರ ಆಲೋಚನೆಯಾಗಿತ್ತು.

ಮೂರು ದಿನಗಳ ವರೆಗೆ ಹೆಣದಂತೆ ಬಿದ್ದುಕೊಂಡಿದ್ದ ರಾಯರನ್ನು ನೋಡಿ ದಾಮೋದರನು ಬೆದರಿ, ಡಾಕ್ಟರರನ್ನು ಕರೆಯಿಸುವ ಆಲೋಚನೆ ಮಾಡಿದನು. ಆದರೆ, ಆ ಹಳ್ಳಿಯಲ್ಲೆಲ್ಲಿದ್ದಾರೆ, ಇಂಗ್ಲೀಷ್ ಡಾಕ್ಟರರು? ಮಂಗಳೂರಿಗೇ ಬರಬೇಕಾಯಿತು. ಇದನ್ನು ಕಂಡು ಹಳ್ಳಿಯ ಕೆಲವು ಅಣಿಲೆಕಾಯಿ ಪಂಡಿತರು, ತಮ್ಮನ್ನು ಕರೆಯಲಿಲ್ಲವಲ್ಲಾ ಎಂದು, “ ಆ ಇಂಗ್ಲೀಷ್ ಡಾಕ್ಟರ್ ಬಂದು ಇವನ ಅಪ್ಪ ಬಚಾವಾಗುವುದುಂಟೇ? ಯಮ ಯಾರಿಗೆ ಹೆದರುತ್ತಾನೆ?” ಎಂದು ನಂಜು ಕಾರಿದರು.

ಮಂಗಳೂರಿಗೆ ಬಂದ ದಾಮೋದರ ಲಲಿತೆಗೂ ಸುದ್ದಿಯನ್ನು ಮುಟ್ಟಿಸಿದ. ಅವಳೂ ಪುತ್ರನನ್ನು ಕಟ್ಟಿಕೊಂಡು ತಂದೆಯ ಮನೆಗೆ ಬಂದಳು. ಇಂಗ್ಲೀಷ್ ಡಾಕ್ಟರರು ಬಂದರೂ, ರಾಯರ ಕಣ್ಣುಗಳು ತೆರೆಯಲಿಲ್ಲ. ಒಂದೇ ಒಂದು ನುಡಿ ಸೂಸಲಿಲ್ಲ. ಕೊನೆಗೆ, ಹಳ್ಳಿಯ ಔಷಧವನ್ನೇ ಆಶ್ರಯಿಸಿದರು. ಒಂದು ಗಂಡುಕೋಳಿಯನ್ನು ತಂದು ಅದರ ಕೊರಳು ಕೊಯ್ದು, ರಕ್ತವನ್ನು

ರಾಯರಿಗೆ ಕುಡಿಸಿದರು. ರಾಯರ ಕಣ್ಣುಗಳು ತೆರೆದವು. ಅವರು ಉಚ್ಚರಿಸಿದ ಮೊದಲ ನುಡಿ: "ಲಲಿತಾ!"

"ನಾನು ಇಲ್ಲೇ ಇದ್ದೇನಪ್ಪಾ!"

ಮುಂದೆ ಡಾಕ್ಟರರು ತಮ್ಮ ಉದ್ಯೋಗವನ್ನಾರಂಭಿಸಿದರು. ಮಿಕ್ಸ್ಚರ್, ಮಾತ್ರೆ, ಕಷಾಯಗಳನ್ನು ಅಲ್ಲಿಂದಲ್ಲಿಂದಲೇ ಒದಗಿಸಿ, ತಾವು, ಚೆಕ್, ಸಮೇತವಾಗಿ ಹೊರಟುಹೋದರು. ಹೋಗುವಾಗ, "ಏನಾದರೂ ಹೆಚ್ಚುಕಡಮೆಯಾದರೆ ಹೇಳಿ ಕಳುಹಿಸಿ" ಎಂದು ಒಂದು ಮಾತನ್ನೂ ಸೇರಿಸಿದರು.

ಆದರೆ, ಮುಂದೆ ಡಾಕ್ಟರರನ್ನು ಕರೆಯುವ ಅಗತ್ಯ ಬೀಳಲಿಲ್ಲ. ಗಣೇಶ ರಾಯರೇ, "ಆ ಡಾಕ್ಟರನ ಹೆಣ ಇನ್ನು ಮುಂದೆ ಬರುವುದು ಬೇಡ!" ಎಂದು ಉನ್ಮಾದದಿಂದ ಹೇಳಿದರು. ಹಳ್ಳಿಯ ಔಷಧಿಯೂ ಬೇಡ, ಕಾಫಿ ಊಹೂಂ, ತಿಂಡಿಯನ್ನು ಮೊದಲೇ ಬಿಟ್ಟಾಗಿದೆ, ಅನ್ನದ ಹೆಸರು ಕೇಳಿದರೆ ಚಂಡಾಲಕೋಪ,—ರಾಯರ ಸ್ಥಿತಿ ಚಿಂತಾಜನಕವಾಯಿತು.

ಇದು ರಾಯರ ಕೊನೆಯ ಸಂದರ್ಶನ ಎಂದು ಊರೂರೇ ಅವರನ್ನು ನೋಡಿಕೊಂಡು ಹೋಗಲು ಬಂದರು. ಆ ಹಳ್ಳಿಯಲ್ಲಿದ್ದ ಮುದುಕ, ಮಕ್ಕಳು, ಈಗ ತಾನೇ ಹುಟ್ಟಿದ್ದ ಕೂಸು ಎಂದು ತಾರತಮ್ಯವಿಲ್ಲದೆ ಎಲ್ಲರೂ ಬಂದರು. ಮಾತ್ರವಲ್ಲ, ಮಂಗಳೂರಿನಲ್ಲಿದ್ದ ರಾಯರ ಮಿತ್ರವರ್ಗ ಸಂದೋಹವೂ ಬಾರದಿರಲಿಲ್ಲ. ಆಚೀಚೆ ಬಂದು ಹೋಗುವ ಜನರ ಕಾಲಹತಿಯಿಂದಲೇ, ಆ ಮರಳಿನ ದಾರಿ ಪೇಟೆಯ ಮಣ್ಣಿನ ದಾರಿಯಷ್ಟು ಗಟ್ಟಿಯಾಯಿತು. ಬಂದವರಲ್ಲಿ ಎಷ್ಟೋ ಜನರು ರಾಯರ ಮನೆಯಲ್ಲಿ ಎರಡು—ಮೂರು ದಿನ ನಿಲ್ಲಲಿಕ್ಕೂ ನಿಂತರು. ತಾವು ತಂದಿದ್ದ ಕಿತ್ತಳೆ, ಖರ್ಜೂರ ಚೀಲಗಳನ್ನು ರಾಯರಿಗೆಂದು ಕೊಟ್ಟರು. ಆದರೆ ಇವುಗಳ ಸಂಹಾರ ಮಾಡುತ್ತಿದ್ದವನು ಭುಜಂಗನೊಬ್ಬನೇ! ರಾಯರು ಯಾವುದನ್ನೂ ಮುಟ್ಟುತ್ತಿರಲಿಲ್ಲ. ಅವರು ಬಂದ ಬಂದವರೊಡನೆಲ್ಲಾ "ನಾನು ಇನ್ನು ಬದುಕಬಹುದೇ?" ಎಂದು ಪ್ರಶ್ನಿಸುತ್ತಿದ್ದರು. ಎಲ್ಲರೂ "ಓಹೋ! ಬದುಕದೇನು!" ಎನ್ನುತ್ತಿದ್ದರೂ ಮನಸ್ಸಿನಲ್ಲಿ ಮಾತ್ರ, "ಹಾಳು ಮುದುಕ! ಹತ್ತು ವರ್ಷಗಳ ಕೆಳಗೇ ಬೂದಿಯಾಗಬೇಕಾಗಿತ್ತು. ಇನ್ನೂ ಬದುಕುವ ಆಸೆ!" ಎಂದುಕೊಳ್ಳದಿರುತ್ತಿರಲಿಲ್ಲ.

ಲಲಿತೆ ಬಂದು ಮನೆಯಲ್ಲಿ ನಿಂತುದರಿಂದ, ರಾಯರಿಗೆ ತನ್ನ ಉಪಚಾರಕ್ಕೆ ಒಂದು ಜನ ಸಿಕ್ಕಿದ ಹಾಗಾಯಿತು. ಅವಳೂ ಬೇಸರವಿಲ್ಲದೆ ತಂದೆಯನ್ನು ಉಪಚರಿಸುತ್ತಿದ್ದಳು. ಅಲ್ಲದೆ, ಅಣ್ಣನನ್ನೂ ಪಾಕ ಶಾಲೆಯಿಂದ ಬಿಡುಗಡೆ ಮಾಡಿದಳು. ಅವನು ಹೊರಗಿನ ಕೆಲಸಗಳಲ್ಲೇ ಹೆಚ್ಚಾಗಿ ಆಸಕ್ತಿ ವಹಿಸತೊಡಗಿದನು. ತಾಯಿಗೆ ಕೆಲಸಗಳಲ್ಲಿ ತೊಂದರೆ ಕೊಡುತ್ತಿದ್ದ ಭುಜಂಗನನ್ನು ರಾಯರು ಆಡಿಸುತ್ತಿದ್ದರು.

ಲಲಿತೆ ಬಂದಮೇಲೆ, ರಾಯರು ನರಳುವುದೂ ದಿನದಿಂದ ದಿನಕ್ಕೆ ಕಡಮೆಯಾಯಿತು. ಅವರಿಗೇನೋ ಮನಶ್ಶಾಂತಿ ಲಭಿಸಿದಂತಾಗಿ ಸಂತಸದಿಂದಿದ್ದರು. ದುಡಿದುಬಂದ ದಾಮೋದರನಿಗೆ ಊಟವೆಂದರೆ ಅಮೃತವೆನಿಸುತ್ತಿತ್ತು. ಗಣೇಶರಾಯರಿಗೂ ಮಗಳ ಕೈಯ ಅಡುಗೆಯೆಂದರೆ ಹಾಗೆಯೇ!

ಇದ್ದ ಮಾತ್ರೆ, ಕಷಾಯಗಳ ಸೀಸೆಗಳು ಖಾಲಿಯಾದವು. ಲಲಿತೆ ಪುನಃ ತರುವ ಅಗತ್ಯವನ್ನು ಅಣ್ಣನೊಡನೆ ಸೂಚಿಸಿದಾಗ ರಾಯರೆಂದರು:

"ಇನ್ನೇಕೆ? ಗುಣವಾಗಿದ್ದೇನಲ್ಲಾ!"

"ಹೌದು; ಸ್ವಲ್ಪ ಗುಣವಾಯಿತೆಂದು ಔಷಧಿಯನ್ನೇ ಬಿಟ್ಟುಬಿಟ್ಟರೆ, ಪುನಃ ಹೆಚ್ಚಾದರೆ, ಯಾರಿಗೆ ಕಷ್ಟ?" ಎಂದನು ದಾಮೋದರ.

"ನೀವು ತಂದರೂ, ನಾನು ಕುಡಿಯಬೇಕಲ್ಲ!" ಎಂದು ರಾಯರು ಔಷಧಿಯ ಅನಗತ್ಯವನ್ನು ಸಮರ್ಥಿಸಿದರು.

ಕೆಲವು ದಿನಗಳು ಸುಖವಾಗಿ ಕಳೆದುಹೋದವು. ರಾಯರು ಸಾಯಂಕಾಲ ಬೇಸರವಾದರೆ, ಊರುಗೋಲಿನ ಸಹಾಯದಿಂದ ಅಂಗಳಕ್ಕೆ ಕಾಲಿಟ್ಟು ಹೊಲದಕಡೆಗೆ ಸಾಗುವರು. ಲಲಿತೆಯೂ ಭುಜಂಗನೊಂದಿಗೆ ಅವರನ್ನು ಹಿಂಬಾಲಿಸುವಳು. ಅಲ್ಲಿ ಕಾಣುತ್ತಿದ್ದುದು ಶಾಂತಿಯ ಪರಂಧಾಮ; ತಿಳಿನೀರಿನ ಮೇಲೆ ಎದ್ದು ಕಾಣುವ ಹಚ್ಚಹಸುರಾದ ನಸುಬಾಗಿಕೊಂಡಿರುವ ಭತ್ತದ ಸಸಿಗಳು; ನಾಲ್ದೆಸೆಯಲ್ಲೂ ಅವುಗಳ ಮನಮೋಹಕವಾದ ನೋಟ. ಅಲ್ಲಲ್ಲಿ ಹುಣಿಗಳ ಮೇಲೆ, ಗಾಳಿಗೆ 'ಗರಗರ' ಶಬ್ದದಿಂದ ಪತ್ರಗಳನ್ನಲುಗಿಸುತ್ತಾ, ನಲಿಯುತ್ತಿರುವ ತಾಳೆ ಮರಗಳು; ಅವುಗಳಮೇಲೆ ಹೆಸರಿಲ್ಲದ ಹಕ್ಕಿಗಳ ಮಧುರಕಂಠದಿಂದ ಹೊರಡುವ ಗಾನ; ಮುಂದೆ ಎಷ್ಟೋ ದೂರದಲ್ಲಿ ಹೇಮಂತಋತುವಿನ ಪ್ರಭಾವದಿಂದ ಬೋಳಾದ ಕಂದು ಬಣ್ಣದ ಶೈಲ

ಶ್ರೇಣಿ; ಅವುಗಳೆದೆಯ ಮೇಲಿಂದ ಆಕಾಶಪಥವನ್ನೇರಿ ಹಾರಿ ಹೋಗುತ್ತಿರುವ ಖಗ ಸಂಕುಲ; ಸೂರ್ಯನು ಉತ್ಕ್ರಮಿಸುವ ತನಕವೂ ಇದೇ ಬಗೆಯ ತರತರದ ಸೌಂದರ್ಯಮಯ ದೃಶ್ಯಾವಳಿ; ಇರುಳ ಕಾವಳದ ತೆರೆಯಲ್ಲಿ, ನೋಟಕರ ಕಣ್ಣುಗಳಿಗೆ ಆ ಸೊಬಗು ಅಗೋಚರವಾದರೂ ತಾನೆಂದಿಗೂ ಮರೆಯಾಗುವುದಿಲ್ಲ ಅಥವಾ ಕುಂದುವುದಿಲ್ಲ.

ತಂದೆಯು ಮನೆಗೆ ಬಂದ ಮೇಲೆ ಲಲಿತೆ ತನ್ನ ಸ್ಥಿತಿಯನ್ನಾಗಲೀ, ಮಂಗಳೂರಿನ ಮನೆಯನ್ನಾಗಲೀ ಸಂಪೂರ್ಣವಾಗಿ ಮರೆತುಬಿಟ್ಟಳು. ತಂದೆ ತಾನಾಗಿಯೇ, "ಇನ್ನು ನೀನು ಹೋಗು" ಎನ್ನದೆ ತಾನು ಹೋಗುವಂತಿಲ್ಲ ಎಂದಿದ್ದುಬಿಟ್ಟಳು. ತಂದೆಗಾದರೂ ಹಾಗೆನ್ನಲು ಬಾಯಿ ಬರುತ್ತಿರಲಿಲ್ಲ. ಇದೇ ಸಮಯಕ್ಕೇ ಭುಜಂಗನು ತನ್ನ ಚಟುವಟಿಕೆಗಳನ್ನಾರಂಭಿಸಿದ್ದನು. ಮನೆಯವರೆಲ್ಲರಿಗೂ ಅದೇ ಸೊಬಗಿನ ಸುಗ್ಗಿಯಾಗಿ ಪರಿಣಮಿಸಿತ್ತು. ಮಗನ ಆಟ-ಪಾಠಗಳನ್ನು ನೋಡುತ್ತಾ ಲಲಿತೆಯು ಹೊತ್ತೆಲ್ಲಾ ಕಳೆದುಹೋಗುತ್ತಿತ್ತು. ಗಣೇಶರಾಯರೇ ತಮಗೆ ಅಸಂಭವವೆನಿಸಿದರೂ, ನಿರ್ವಾಹವಿಲ್ಲದೆ ಕುಳಿತಲ್ಲಿಂದಲೇ ಎಲ್ಲಾ ವಿಷಯಗಳಲ್ಲೂ ತಲೆಹಾಕುತ್ತಿದ್ದರು. ಆದರೂ, ಹೆಚ್ಚು ಕಾಲ ಇದು ನಡೆಯುವಂತಿರಲಿಲ್ಲ. ಗಣೇಶರಾಯರಿಗಾದರೂ ಇದರ ಚಿಂತೆಯಿಲ್ಲದಿರಲಿಲ್ಲ. ಲಲಿತೆಯ ಭವಿತವ್ಯತೆಯನ್ನು ನೆನೆದು, ಅವರ ಮನಸ್ಸು ಇದ್ದಕ್ಕಿದ್ದ ಹಾಗೇ ಖೇದಗೊಳ್ಳುವುದು. ತಾನಂತೂ ಹೆಚ್ಚು ಕಾಲ ಬದುಕುವಂತಿಲ್ಲ. ಲಲಿತೆಯನ್ನು ನೋಡಿಕೊಳ್ಳುವವರು ಯಾರು? ದಾಮೋದರನಿಂದ ಏನೂ ಸಾಗುವಂತಿಲ್ಲವೆಂದು ಅವರಿಗೆ ಗೊತ್ತಾಗಿ ಹೋಗಿತ್ತು. ಭುಜಂಗ ದೊಡ್ಡವನಾದ ಮೇಲಾದರೆ ವ್ಯಥೆಯಿಲ್ಲ. ಆದರೆ, ಅದಕ್ಕಿನ್ನೂ ಹತ್ತಿಪ್ಪತ್ತು ವರ್ಷಗಳಿವೆ. ಅಷ್ಟರ ವರೆಗಿನ ವಿಲೇವಾರಿ ಏನು? ಈ ಆಲೋಚನಾ ತರಂಗಗಳ ನಡುವೆ, ಅದು ಕೂಡಾ ಭುಜಂಗನು ಬದುಕಿ ಉಳಿದರೆ, ಎಂಬ ಸಂಶಯದ ಪೆರ್ದೆರೆಯೊಂದು ಆಗಾಗ ಮೇಲೇಳದಿರುತ್ತಿರಲಿಲ್ಲ.

ದಿನದಿಂದ ದಿನಕ್ಕೂ, ರಾಯರ ಚಿಂತೆ ಅಧಿಕವಾಗುತ್ತಾ ಹೋಯಿತು. ಮೊದಲೇ ಅವರಿಗೆ ಕಳೆದ ಆರೋಗ್ಯ ಲಭಿಸಿರಲಿಲ್ಲ. ಅದರೊಡನೆ ಈ ಚಿಂತೆಯ ಹೊರೆಯಿಂದಾಗಿ ಅದು ಮತ್ತಷ್ಟು ಕುಸಿಯಿತು. ರಾಯರು ಒಳಗಿಂದೊಳಗೇ ಬಡವಾಗುತ್ತಾ ಬಂದರು.

ಒಂದು ಸಾಯಂಕಾಲ ಎಂದಿನಂತೆ ಇಬ್ಬರೂ ಹೊಲದ ಕಡೆಗೆ ಹೋಗಿ

ದ್ದರು. ಮಂಜು ಮುಸುಕಿದ ಆಕಾಶದಲ್ಲಿ ಸೂರ್ಯಬಿಂಬವು ಅಸ್ಪಷ್ಟವಾಗಿ ಗೋಚರಿಸುತ್ತಿತ್ತು. ಸುತ್ತಲೆಲ್ಲಾ ಎಂದಿಲ್ಲದ ಜಡತನ ಬಂದು ಸೇರಿಕೊಂಡಿದೆ. ಲಲಿತೆಯೂ, ಗಣೇಶರಾಯರೂ ಆಶ್ಚರ್ಯಚಿತ್ತರಾಗಿ, ಸುತ್ತಣ ವಾತಾವರಣ ವನ್ನು ನೋಡುತ್ತಿರುವಾಗಲೇ ಹಕ್ಕಿಯು ಕರ್ಕಶಸ್ವರವೊಂದು ಕಿವಿದೆರೆಯನ್ನಿ ಕ್ಕಡಿಸಿ ಹೋಯಿತು. ಲಲಿತೆ, ಗಣೇಶರಾಯರ ದೃಷ್ಟಿ, ಕರ್ಣಗಳೆರಡೂ ಆ ದೆಸೆಗೆ ತಿರುಗಿದವು. ಅಲ್ಲೇ ಸಮೀಪದಲ್ಲೇ ಆಕಾಶಮಾರ್ಗದ ತನಕ ಏರಿ ಹೋದಂತೆ, ಉನ್ನತವಾದ ಒಂದು ಪನ್ನೇರಳೆ ಮರ. ಆಯುಸ್ಸು ಕೂಡಾ ಅದಕ್ಕೆ ಬಹಳವಾಗಿತ್ತು. ಅದರ ಬೇರುಗಳು ಎರಡು ಮೈಲಿ ದೂರದಲ್ಲೂ ಕಾಣಿಸಿಕೊಂಡಿದ್ದವಂತೆ. ಶಾಖೋಪಶಾಖೆಗಳೂ ಹಲವಾರು ಸೇರಿಕೊಂಡು, ಅದೊಂದು ಮರವೇ ದೊಡ್ಡ ತೋಪಿನ ಹಾಗಾಗಿದ್ದಿತು. ಹಣ್ಣುಗಳು ಕೂಡಾ, ಎಲೆಗೊಂದರಂತೆ, ತಲೆದೋರಿ, ಕೆಳಗೆ ಬಿದ್ದು ಕೊಳೆತು ಹೋಗುತ್ತಿದ್ದವು. ಇಷ್ಟಿದ್ದರೂ, ಅದರ ಹಣ್ಣುಗಳನ್ನು ಯಾರೂ ತಿನ್ನುತ್ತಿರಲಿಲ್ಲ; ತಿನ್ನುವ ಹಾಗೂ ಇರಲಿಲ್ಲ. ಅವುಗಳೆಲ್ಲಾ ಕಹಿಗಿಂತ ಕಹಿ, ಎಂದು ಬಹು ಪುರಾತನ ವಾದ ಜನಪ್ರತೀತಿ. ಈ ಹೇಳಿಕೆಯನ್ನೇ ಎಲ್ಲರೂ ನಂಬಿದವರಲ್ಲದೆ, ಅದನ್ನು ತಿಂದು ಪರೀಕ್ಷಿಸಿದವರೊಬ್ಬರೂ ಇಲ್ಲ. ಪರೀಕ್ಷಿಸಬೇಕಾಗಿಯೂ ಇರಲಿಲ್ಲ. ಯಾವುದೋ ಒಂದ ಹಕ್ಕಿ ಒಂದು ದಿನ ಅದರ ಹಣ್ಣಿಗೆ ಬಾಯಿ ಹಾಕಿದ್ದೇ ತಡ, 'ಧಡಂ' ಎಂದು ಕೆಳಗೆ ಉರುಳಿ, ಪ್ರಾಣ ಬಿಟ್ಟಿದ್ದಿತು. ಇದು, ಆ ಹಣ್ಣು ಕಹಿ ಮಾತ್ರವಲ್ಲ, ವಿಷ ಎಂಬುದನ್ನು ಜನರಿಗೆ ಸಾಕಷ್ಟು ಸಿದ್ಧಾಂತ ಮಾಡಿ ಕೊಟ್ಟಿದ್ದಿತು. ಆದರೂ, ಹಣ್ಣುಗಳು ವರ್ಷದ ಋತುತ್ರಯಗಳಲ್ಲೂ, ಯಾರಿಗೂ ಬೇಡವಾಗಿ, ತಲೆದೋರುತ್ತಿದ್ದವು.

ಫಲಗಳು ಬೇಡವಾದರೂ, ಮರದ ಆಶ್ರಯವನ್ನು ಯಾರೂ ಬೇಡ ವೆಂದು ದೂರಿ ಬಿಟ್ಟವರಲ್ಲ. ಅದರ ಕೊಂಬೆಗಳಿಗೆ ಹಗ್ಗವನ್ನು ನೇತು ಹಾಕಿ, ಬಾಲಕ-ಬಾಲಿಕೆಯರು ಉಯ್ಯಾಲೆಯಾಡುತ್ತಿದ್ದರು. ದನ ಕಾಯುವ ಗೋವಳ ಹುಡುಗರು ಬಿಸಿಲೇರಿ ಹೆಚ್ಚಾಗಲು, ಅದರ ಕೊಂಬೆಗಳನ್ನೇರಿ ಕುಳಿತು, ತಮ್ಮ ಮುರಲಿಗಳನ್ನು ಬಾರಿಸುತ್ತಿದ್ದರು. ಮಾತ್ರವಲ್ಲ, ಅದರ ಮಡಿಲಲ್ಲಿ ಸಾವಿರಾರು ಹಕ್ಕಿಗಳು ತಮ್ಮ ಗೂಡುಗಳನ್ನು ನಿರ್ಮಿಸಿಕೊಂಡಿದ್ದವು.

ಅದೇ ಮರದಲ್ಲಿ ಹಲವು ದಿನಗಳ ಹಿಂದೆಯೇ ರಾಯರು ನಾಲ್ಕು ಹಕ್ಕಿ ಗಳನ್ನು ನೋಡಿದ್ದರು. ಒಂದು ಇನ್ನೂ ಬಹಳ ಚಿಕ್ಕದು; ಮರಿಹಕ್ಕಿ.

ಮತ್ತೊಂದು ಹೆಣ್ಣುಹಕ್ಕಿ. ಗಂಡುಹಕ್ಕಿಯು ಅದರ ಜೊತೆಗಾರನಾಗಿರಬೇಕು. ವೃದ್ಧಹಕ್ಕಿಯು ಹೆಣ್ಣುಹಕ್ಕಿಯ ಜನನಕ್ಕೆ ಕಾರಣಕರ್ತೃ. ಆ ಮರದ ಮೇಲಣ ಗೂಡಿನಲ್ಲಿ ಅವುಗಳ ಸುಖಸಂಸಾರವೇ ಸಂಸಾರ! ಎಷ್ಟೋ ಬಾರಿ ಇದನ್ನು ನೋಡಿದ ಗಣೇಶರಾಯರು, ಲಲಿತೆಯ ಸಂಸಾರಕ್ಕೆ ಹೋಲಿಸಿ ನೋಡಿದ್ದರು.

ಒಂದು ದಿನ ಎಂದಿನಂತೆ ಸಂಜೆ ಇವರು ಹೋದಾಗ, ಎಂದಿನಂತೆ ಆ ಗೂಡಿನಲ್ಲಿ ಸಂತೋಷದ ಸಂಭ್ರಮವಿಲ್ಲ; ಅಪರಿಮಿತವಾದ ಕೋಲಾಹಲ! ಗಂಡುಹಕ್ಕಿ, ತನ್ನ ಮಡದಿಯನ್ನು ತೊರೆದು ಬೇರೆ ಹೆಣ್ಣುಹಕ್ಕಿಯೊಡನೆ ಹಾರಿಹೋಗಿದ್ದಿತು. ಈ ಘಟನೆ ಸಂಭವಿಸಿದ ಎರಡು ದಿನಗಳೊಳಗಾಗಿಯೇ, ಲಲಿತೆಯ ದಾರುಣ ಸ್ಥಿತಿಯ ವರದಿ, ರಾಯರಿಗೆ ಬಂದು ಸೇರಿತ್ತು. ಆಗ ತಾನು ಈ ಖಗಸಂಸಾರವನ್ನು—ಮಾನವ ಸಂಸಾರ-ಲಲಿತೆಯ ಸಂಸಾರ-ಕ್ಕೆ ಹೋಲಿಸಿ ನೋಡಿದುದರ ಔಚಿತ್ಯವೂ, ವಿಪ್ಲವವೂ ರಾಯರಿಗೆ ಹೊಳೆದು ಹೋಗಿತ್ತು.

ಅಂದಿನಿಂದ ಲಲಿತೆಯ ಗೊಡವೆಯಲ್ಲೇ ತನ್ಮಯರಾಗಿದ್ದ ರಾಯರಿಗೆ ಸಂಪೂರ್ಣವಾಗಿ ಆ ಹಕ್ಕಿಯ ವಿಸ್ಮೃತಿಯಾಗಿತ್ತು. ಇಂದು ಕರ್ಕಶ ಸ್ವರವನ್ನು ಕೇಳಿ, ನೋಡುತ್ತಾರೆ— ಅದೇ ಹಕ್ಕಿ! ಕೊಂಬೆಯಿಂದ ಕೊಂಬೆಗೆ ಜಿಗಿಯುತ್ತಾ ಕೂಗಿದೆ ಅದರ ಕ್ರಂದನ ಪ್ರಲಾಪದ ಕಾರಣ ಗೊತ್ತಾಗಲಿಲ್ಲ. ಸುತ್ತಮುತ್ತ ನೋಡತೊಡಗಿದರು. ಬೆಕ್ಕೊಂದು ಮರದ ಬುಡದಲ್ಲಿದ್ದ ವಸ್ತುವನ್ನು ಮೂಸಿ ದೂರ ಹೋಯಿತು. ರಾಯರು ಅಲ್ಲಿ ನೋಡುತ್ತಾರೆ— ಅದೇ ಆ ವೃದ್ಧ ಹಕ್ಕಿ ಮಡಿದು ಬಿದ್ದಿದೆ. ಆಗ ಆ ಹಕ್ಕಿಯು ಹಲುಬುವುದರ ಕಾರಣ ಗೊತ್ತಾಯಿತು.

ಇದನ್ನು ನೋಡಿ, ರಾಯರಿಗೇನಾಯಿತೋ – 'ಜುಮ್ಮೆಂ'ದು ಕಾವೇರಿ ಮೈಯೆಲ್ಲಾ ಬಿಸಿಯಾಯಿತು. ಕಣ್ಣು ಕತ್ತಲೆ ಬಂದು ಮೂರ್ಛೆದಪ್ಪಿ ಬೀಳುವಂತಾಯಿತು. ಸಮೀಪದಲ್ಲೇ ಇದ್ದ ಲಲಿತೆ ಆಧಾರವಾಗಿ ಹಿಡಿದಳು.

"ಏನಾಯಿತಪ್ಪಾ? ಎಂದು ಕೇಳಿದಳು.

ರಾಯರು ಹೆಚ್ಚೇನೂ ಹೇಳದೆ, "ಮನೆಗೆ ಹೋಗೋಣ" ಎಂದರು.

ಊರುಗೋಲಿನ, ಹಾಗೂ ಲಲಿತೆಯ ನೆರವಿನಿಂದ ಬಹಳ ಪ್ರಯಾಸದಿಂದ ಮನೆಮುಟ್ಟಿದರು. ಹಾಸಿಗೆಯಲ್ಲಿ ಮಲಗಿದುದೇ ಜ್ವರ ಉಗಿಯ ತಾಪಕ್ಕಿಂತಲೂ, ಮೇಲೇರಿತು. ಹಿತ್ತಲಲ್ಲಿದ್ದ ದಾಮೋದರನೂ ವಾರ್ತೆ

ಕೇಳಿ ಕೆಲಸವನ್ನು ಬಿಟ್ಟು ಓಡಿಬಂದನು. ಆಗ ರಾಯರಿಗೆ ಸಂಪೂರ್ಣ ಪ್ರಜ್ಞೆಯಿರಲಿಲ್ಲ. "ಈ ರೋಗಕ್ಕೆ ಮದ್ದಿಲ್ಲ." ಎಂದು ಪದೇ ಪದೇ ಅವರು ಬಡಬಡಿಸುತ್ತಿದ್ದರು.

ಕತ್ತಲಾಗುತ್ತಾ ಬಂದಿತ್ತು. ಆದರೂ, ದಾಮೋದರನು ಮಂಗಳೂರಿಗೆ ಹೋಗಿ ಡಾಕ್ಟರರನ್ನು ಕರೆದುಕೊಂಡು ಬರಲು ನಿಶ್ಚಯಿಸಿದನು. ಇವನು ಹೊಳೆ ದಾಟುವಾಗ ಪೂರ್ಣಚಂದಿರನು ಮೇಲೇರಿ ಬಂದಿದ್ದನು. ಚಳಿಗಾಲದಲ್ಲಿ ಮಂಜು ಮುಸುಕುವ ರಾತ್ರಿಯಾದುದರಿಂದ ಬೀದಿಯಲ್ಲಿ ಜನಸಂಚಾರವು ಕಡಿಮೆಯಾಗಿತ್ತು. ದಾಮೋದರನು ಮೊದಲಾಗಿ ಡಾಕ್ಟರರ ದವಾಖಾನೆಗೇ ಹೋದನು. ಆ ದಿನ ಆದಿತ್ಯವಾರವಾದುದರಿಂದ ಡಾಕ್ಟರರು ಬೆಳಗಿನಿಂದಲೂ ದವಾಖಾನೆಯ ಬಾಗಿಲನ್ನು ತೆರೆದಿರಲಿಲ್ಲ. ಆದಿತ್ಯವಾರ ಡಾಕ್ಟರರೂ ರಜೆ ಮಾಡಿದರೆ ಹೇಗೆ? ಎಂದುಕೊಂಡು ಅವರ ಮನೆಗೇ ಹೋದನು. ಸುಖನಿದ್ರೆಯಲ್ಲಿದ್ದ ಡಾಕ್ಟರರು ಮೊದಮೊದಲು ಹೊರಗೆ ಬರಲು ಅನುಮಾನಿಸಿದರೂ, ಕರೆಯುತ್ತಿರುವವನು ದಾಮೋದರನೆಂದರಿತು, ಧನದ ದೃಷ್ಟಿಯಿಂದ ನೋಡಿ ಹಾಸಿಗೆಯಿಂದೆದ್ದರು.

ಹಾಗೇ ಹೊರಟವರು ನದಿತೀರಕ್ಕೆ ಬಂದು ನೋಡಿದರೆ, ಅಲ್ಲಿ ದೋಣಿಯೆಲ್ಲಿದೆ? ಎಷ್ಟು ರಾವಣನ ಧ್ವನಿಯಿಂದ ಕೂಗಿದರೂ ಉತ್ತರವಿಲ್ಲ. ಹೊಳೆಯ ಆಚೆ ತೀರದಲ್ಲಿ ಅಲ್ಲಲ್ಲಿ ಮನೆಗಳಲ್ಲಿ ಚಿಮಣಿಯ ಮಿಣಿಮಿಣಿ ದೀಪಗಳು ಇವರನ್ನು ನೋಡಿ ನಗುತ್ತಿದ್ದವು. ಕೊನೆಗೆ ಯಾವನೋ ಒಬ್ಬ ಅಂಬಿಗನನ್ನು ಹಿಡಿದು, ರೂಪಾಯಿಯಮೇಲೆ ರೂಪಾಯಿಯ ಆಸೆ ಹುಟ್ಟಿಸಿ ಆ ದಡವನ್ನು ಸೇರಿದರು. ದಾಮೋದರನು ಈಸಿ ಹೋಗಬಲ್ಲನಾದರೂ, ಜೊತೆಯಲ್ಲಿ ಡಾಕ್ಟರರಿದ್ದುದರಿಂದ ಅಂಬಿಗನ ಸ್ನೇಹವನ್ನೇ ಮಾಡಬೇಕಾಯಿತು.

ಅವರು ಮನೆಗೆ ಹೋದಾಗ ಗಣೇಶರಾಯರ ಸ್ಥಿತಿ ಭಯಂಕರವಾಗಿತ್ತು. ಉನ್ಮಾದ ಸಂಪೂರ್ಣ ತಲೆಗಡರಿ ಬಿಟ್ಟಿದ್ದಿತು. ಆ ಜ್ವರದಲ್ಲಿಯೇ ಎದ್ದು ಆಚೀಚೆ ಅಡ್ಡಾಡುತ್ತಾ, ಗೋಡೆಗಳಿಗೆ ಕೈಮುಷ್ಟಿಯಿಂದ ಗುದ್ದುತ್ತಾ ಹುಚ್ಚುಹುಚ್ಚಾಗಿ ಮಾತಾಡತೊಡಗಿದ್ದರು. ಲಲಿತೆ ಹೆದರಿ ದೂರದಲ್ಲಿ ಕಣ್ಣೀರು ಸುರಿಸುತ್ತಾ ನಿಂತಿದ್ದಳು.

ದಾಮೋದರನೂ, ಡಾಕ್ಟರರೂ, ಇಬ್ಬರೂ ಕೂಡಿ ಬಲಾತ್ಕಾರದಿಂದ ರಾಯರನ್ನು ಹಿಡಿದು ಮಲಗಿಸಿದರು. ಅಲ್ಲಿಂದಲೂ ಅವರು ಏಳುವ ಪ್ರಯತ್ನ

ವನ್ನೂ, ಹುಚ್ಚುಹುಚ್ಚಾಗಿ ಮಾತಾಡುವುದನ್ನೂ ಬಿಡಲಿಲ್ಲ. ದಾಮೋದರ– ಡಾಕ್ಟರರ ಗದರಿಕೆಗೆ ಮಾತ್ರ ಸ್ವಲ್ಪ ಸಮಯದ ಮೇಲೆ ಸುಮ್ಮನಾದರು. ಡಾಕ್ಟರರು ಪರೀಕ್ಷಿಸಿದರು. ಗಣೇಶರಾಯರೆಂದಂತೆಯೇ ಆಯಿತು. ಡಾಕ್ಟರರು ಮುಖ ಸೊಟ್ಟಗೆ ಮಾಡುತ್ತಾ, “No remedy, This is a hopeless case“ ಎಂದರು. ದಾಮೋದರನು ಮಾತನಾಡಲಿಲ್ಲ. ಡಾಕ್ಟರರೇ ಏನೋ ಔಷಧಿಕೊಟ್ಟು “ ರುಸುಂ “ ಇಸಿದುಕೊಂಡು ಶಯನಾಸಕ್ತರಾದರು. ಆ ರಾತ್ರಿಯೇ ಅವರು ಹೋಗುವಂತಿರಲಿಲ್ಲ.

ಮರುದಿನ ಮುಂಜಾನೆ ಡಾಕ್ಟರರು ಇನ್ನೂ ಕತ್ತಲಿರುವಾಗಲೇ ಎದ್ದು ಹೊರಟು ಹೋಗಿದ್ದರು. ಲಲಿತೆ ಕಾಫಿಯನ್ನು ತೆಗೆದುಕೊಂಡು ಹೋಗುವಾಗ ರಾಯರು ಇನ್ನೂ ನಿದ್ರಾವಸ್ಥೆಯಲ್ಲಿದ್ದರು.

“ ಅಪ್ಪಾ! ” ಎಂದು ಕರೆದಳು ಲಲಿತೆ.

“ ಯಾರು, ಲಲಿತೆಯೇ ? ” ರಾಯರು ಕಣ್ಣು ತೆರೆದರು.

“ ಈಗ ಸ್ವಲ್ಪ ಸುಖವೆನಿಸುತ್ತಿದೆಯೇ ? ”

“ ಸುಖ, ಮಣ್ಣು! ಸತ್ತಮೇಲೆಯೇ ಎಲ್ಲಾ ಸುಖ! ” ಎಂದು ರಾಯರು ಪುನಃ ಕಣ್ಮುಚ್ಚಿದರು.

“ ಇರಲಿ; ಕಾಫಿ ಕುಡಿಯಿರಿ. ” ಎಂದು ಲಲಿತೆ ಕಾಫಿಯನ್ನು ಬಾಯಿಗೆ ಎರೆಯಲು ಹೋದಳು.

“ ಬೇಡ; ನಾನೇ ಕುಡಿಯುತ್ತೇನೆ. ” ಎಂದು ತಾವೇ ಎದ್ದು ಲೋಡಿಗೆ ಒರಗಿ ಕುಳಿತರು. ಮೆಲ್ಲಮೆಲ್ಲನೆ ಕಾಫಿ ಕುಡಿಯುತ್ತಾ, ಕುಡಿಯುತ್ತಾ, “ ಏಕೋ ಬಾಯಿ ರುಚಿಯೇ ಇಲ್ಲ. ” ಎನ್ನದಿರಲಿಲ್ಲ.

ಬರಿದಾದ ಲೋಟವನ್ನು ತೆಗೆದುಕೊಂಡು ಸ್ವಲ್ಪ ಸಂತಸದಿಂದಲೇ ಒಳಹೋದಳು ಲಲಿತೆ. ತಂದೆಗೆ ಸ್ವಲ್ಪ ಗುಣಮುಖವಾಯಿತೆಂದು ಅವಳಿಗೆ ಹರ್ಷ. ಇನ್ನು ಹೇಗೆಯೇ ಕೆಲದಿನಗಳಲ್ಲಿ ಸಂಪೂರ್ಣ ಆರೋಗ್ಯ ಲಭಿಸೀತೆಂದು ಭರವಸೆ. ಆದರೆ–?

ಅದೇ ಮಧ್ಯಾಹ್ನ, ಲಲಿತೆ ಊಟವನ್ನು ತೆಗೆದುಕೊಂಡು ಹೋದಾಗ ರಾಯರು ಬೆಳಗಿನಂತಿರಲಿಲ್ಲ. ಲಲಿತೆಯನ್ನು ನೋಡಿಯೂ ನೋಡದಂತೆ ಅವರು ಸುಮ್ಮನಿದ್ದರು. ಲಲಿತೆಯೇ, “ ಊಟ ತಂದಿದ್ದೇನೆ! ” ಎಂದಳು.

ರಾಯರು ಸ್ವಲ್ಪಕಾಲ ಮಾತನಾಡಲಿಲ್ಲ. ಮತ್ತೆ ಮೆಲ್ಲನೆ, "ನಿನ್ನ ಊಟ ತೀರಿಸಿಬಿಡು." ಎಂದು ಅಪ್ಪಣೆ ಮಾಡಿದರು. ದಾಮೋದರನ ಆರೋಗಣೆ ಈ ಮೊದಲೇ ಆಗಿತ್ತು.

"ನೀವು?" ಎಂದಳು ಲಲಿತೆ.

"ಸುಮ್ಮನೆ ಹೇಳಿದಂತೆ ಮಾಡು, ಹೋಗು!" ಎಂದು ಗದರಿಸಿದರು.

ಲಲಿತೆ ಮೌನವಾಗಿ ಒಳಗೆ ಹೋದಳು. ಊಟ ಮುಗಿಸಿ ಬಂದಳು. "ಭುಜಂಗನನ್ನು ಕರೆದು ತಾ,!" ಎಂದು ಪುನಃ ಅಪ್ಪಣೆಯಾಯಿತು. ಲಲಿತೆ, 'ಇದೇನೋ ಎಲ್ಲಾ ವಿಪರೀತ!' ಎಂದುಕೊಂಡು ಭುಜಂಗನನ್ನು ಕರೆದುಕೊಂಡು ಬಂದಳು. ರಾಯರು ಭುಜಂಗನನ್ನು ತಮ್ಮ ಹೊಟ್ಟೆಯ ಮೇಲೆ ಕುಳ್ಳಿರಿಸಿಕೊಂಡರು. ಆಗಲೇ ಅವರ ಕೈಗಳು ನಡುಗಲಾರಂಭಿಸಿದ್ದವು. ಕಣ್ಣುಗಳು ಗಿರಗಿರನೆ ತಿರುಗಲಾರಂಭಿಸಿದ್ದವು. "ದಾಮೋ–ದ–ರನನ್ನು ಕರೆದು–ಕೊಂಡು ಬಾ!" ಎಂದು ಅಸ್ಪಷ್ಟವಾಗಿ ಹೇಳಿದರು. ಅಷ್ಟು ಹೇಳುವಷ್ಟು ಶಕ್ತಿ ಕೂಡಾ ಅವರಲ್ಲಿ ಉಳಿದಿರಲಿಲ್ಲ.

ಲಲಿತೆ ಹೋಗಿ ದಾಮೋದರನನ್ನು ಕರೆದಳು. ಅವನು ಕೂಡಾ, "ಏನೇನು?" ಎಂದು ಬಂದನು.

"ಏನು, ಏನು?" ನನ್ನ ಪರಲೋಕಯಾತ್ರೆಯ ಸಮಯದಲ್ಲಿ ನೀನಿರುವುದು ಬೇಡವೇ? ಎಂದು ನಿನ್ನನ್ನು ಕರೆಯಿಸಿದೆ." ಎಂದರು. ಬಳಿಕ ಮೌನಮುಖಿಯಾದರು.

ಲಲಿತೆ-ದಾಮೋದರ, ಕೂಡಿ ಅವರನ್ನು ಹಾಸಿಗೆಯಿಂದಿಳಿಸಿ, ನೆಲದ ಮೇಲೆ ಮಲಗಿಸಿದರು. ಇಬ್ಬರೂ ಪ್ರತ್ಯಪ್ರತ್ಯೇಕವಾಗಿ ತೀರ್ಥವನ್ನು ಬಾಯಿಗೆ ಹೊಯ್ದರು.

ರಾಯರ ಉಸಿರಾಟ ಮೆಲ್ಲಮೆಲ್ಲನೆ ಕಡಿಮೆಯಾಗತೊಡಗಿತು. ಆದರೂ, ಸಂಪೂರ್ಣ ಹೋಗಲೊಲ್ಲದು. ಏನೋ, ಒಂದು ಚಿಂತೆಯೇ ಅದಕ್ಕೆ ಕಾರಣವಾಗಿತ್ತು. ಲಲಿತೆ,–ದಾಮೋದರ, ಇಬ್ಬರಿಗೂ ಅದು ಗೊತ್ತಾಯಿತು. ರಾಯರು ಬಿಕ್ಕುತ್ತಾ ಹೇಳಿದರು:

"ಈ ಜಡಶರೀರವನ್ನು ತ್ಯಜಿಸಿ ಹೋಗಲು ನನಗೆ ಯಾವ ದುಃಖವೂ ಇಲ್ಲ. ಆದರೆ—ಆದರೆ, ಲಲಿತೆಯ ಸ್ಥಿತಿಯನ್ನು ನೆನೆದು, ನೆನೆದೇ, ಇನ್ನೂ ಈ ಸಂಕಟದಿಂದ ನಿವೃತ್ತಿಯಿಲ್ಲ. ಏನು ಮಾಡಲಿ?—ಏನು ಮಾಡಲಿ?"

“ ನನ್ನ ವಿಷಯ ನಿಮಗೆ ಯಾವ ಚಿಂತೆಯೂ ಬೇಡ, ಅಪ್ಪಾ!” ಎಂದಳು ಲಲಿತೆ.

ದಾಮೋದರನು ಹೇಳಿದ: “ ಆ ವಿಷಯ ನೀವೇನೂ ಚಿಂತೆ ಮಾಡುವುದು ಬೇಡ. ಎಲ್ಲದಕ್ಕೂ ನಾನಿದ್ದೇನೆ. ಹೇಗೂ ಮದುವೆಯಿಲ್ಲದೆ ಬೆಳೆದಿದ್ದೇನೆ. ನಾನು ಇನ್ನೂ ಮದುವೆಯಾಗುವುದಿಲ್ಲ. ಲಲಿತೆಯ ಉದ್ಧಾರ, ಏಳಿಗೆಗೇ ನನ್ನ ಆಯುಷ್ಯವೆಲ್ಲಾ ಮೀಸಲು. ಅವಳ ಸುಖವೇ ನನ್ನ ಸುಖ!”

ರಾಯರ ಮುಖದಲ್ಲೆಲ್ಲಾ ಶಾಂತಿಯ ಛಾಯೆ ಪಸರಿಸಿತು. ಇನ್ನೂ ಗಂಟೆ ನಾಲ್ಕಾಗಿದ್ದರೂ, ಹೊರಗೆಲ್ಲಾ ಕತ್ತಲೆಯ ಜವನಿಕೆಯು ಇಳಿದಿತ್ತು. ಅದರೊಡನೆ ಮಂಜುಸೋರೆ, ಇಳಿದಂತೆ ಭೂಮ್ಯಾಕಾಶಗಳ ನಡುವೆ ನೀಲ, ನೇರಳೆಯ ತೆಳ್ಳಗಿನ ತೆರದೆ. ಗಾಳಿ ಸ್ತಬ್ಧವಾಗಿತ್ತು. ಎಲೆಗಳು ಮರೆತೂ ಅಲುಗುತ್ತಿರಲಿಲ್ಲ. ಜಗತ್ತೇ ಶೂನ್ಯವಾದಷ್ಟು ನೀರವತೆಯ ಸಾಮ್ರಾಜ್ಯ; ಶಾಂತಿಯ ಪರಮಾವಧಿ! ಆ ಭೀಕರ ಹೊತ್ತಿನಲ್ಲಿ, ರಾಯರು ಯಮಾಲಯದ ಭಟರ ದಾರಿಯನ್ನೂ, ಬರವನ್ನೂ ಹಾರಯಿಸುತ್ತಿದ್ದಾರೆ. ಗಾಳಿಯೊಮ್ಮೆ ಬಲವಾಗಿ, ‘ಫೂ!’ ಎಂದು ಬೀಡಿ ಹೋಯಿತು ರಾಯರ ಶ್ವಾಸವೂ ಕೊನೆಯ ಬಾರಿಗೆ, ‘ಉಸ್!’ ಎಂದು ಹಾರಿಹೋಯಿತು. ಆ ಗಾಳಿಯ ಬಲದಿಂದ ಲಲಿತೆಯ ಕಣ್ಮುಗಿಲುಗಳು ವಿದೀರ್ಣವಾಗಿ ಕಣ್ಣೀರ ಮಳೆ ಜಿನುಗತೊಡಗಿತು.

ಲಲಿತೆಯ ಕ್ರಂದನವನ್ನಾಲಿಸಿ ನೆರೆಹೊರೆಯವರು ಬಂದರು. ಅವರಿಗೆ ಕಂಡುದು,—ಮನೆಯೊಳಗೆ ಬಿದ್ದ ರಾಯರ ಪ್ರೇತ ಶರೀರ!

ಬಂದವರು ರಾಯರ ದಹನಸಂಸ್ಕಾರದ ಸಿದ್ಧತೆಯಲ್ಲಿ ತೊಡಗಿದರು. ಭುಜಂಗನು ಮೊದಲಿನಂತೆ ಯಾವ ಪರಿವೆಯೂ ಇಲ್ಲದೆ, ರಾಯರ ಶರೀರದ ಮೇಲೆ ಬಿದ್ದು ಆಟವಾಡತೊಡಗಿದ್ದನು.

೧೦

ತಂದೆಯ ನಿರ್ಯಾಣವು ಕಳೆದ ಒಂದೇ ಒಂದು ತಿಂಗಳೊಳಗಾಗಿ ಲಲಿತೆ ಮಂಗಳೂರಿಗೆ ಬಂದಳು. ರಾಜಾರಾಮನು ತನ್ನ ಕೈತಪ್ಪಿ ಹೋದಾಗಲೂ ಅವಳು ಇಷ್ಟು ದುಃಖಿಸಿರಲಿಲ್ಲ. ತಂದೆಯ ಮರಣವೆಂದರೆ ಮಾತ್ರ ಅವಳಿಗೆ ಮರಣಯಾತನೆಯುಂತಾಗಿತ್ತು. ಈ ಒಂದು ತಿಂಗಳೊಳಗಾಗಿಯೇ ಅವಳು ಅತ್ತು, ಅತ್ತು, ಸೊರಗಿ ಕಡ್ಡಿಯಂತಾಗಿದ್ದಳು. ನೋಡಿದವರೆಲ್ಲಾ, “ ಇದೇನು, ಹೀಗೆ?” ಎಂದು ಪ್ರಶ್ನೆ ಮಾಡದಿರುತ್ತಿರಲಿಲ್ಲ.

ಮನೆಯಲ್ಲಿ ಎಲ್ಲಿ ನೋಡಿದರೂ, ಲಲಿತೆಗೆ ರಾಯರ ರೂಪು ಗೋಚರಿಸುವುದು. ಗೋಡೆಗಳ ಕತ್ತಲು ಸಂದುಗಳಲ್ಲಿ, ಅವರು ನಿಂತು ತನ್ನನ್ನು 'ಬಾ!' ಎಂದು ಕರೆದಂತೆ ಭಾಸವಾಗುವುದು. ಅಟ್ಟದಲ್ಲಿ ಸದ್ದಾದರೆ, ಅವರು ನಡೆಯುತ್ತಿದ್ದಾರೆ, ಎಂದೆನಿಸುವುದು. ಎಷ್ಟೋ ಬಾರಿ, 'ಲಲಿತೆ!' ಎಂದು ಹಿಂದಿನಿಂದ ಕರೆದಂತಾಗಿ, ಅದು ರಾಯರೇ ಎಂಬ ಭ್ರಮೆಯಿಂದ ಹಿಂದೆ ನೋಡುವಳು. ಆದರೆ, ಯಾರಿದ್ದಾರೆ, ಅಲ್ಲಿ? ಹೀಗೆಯೇ ಎಷ್ಟೋ ದಿನಗಳು ಕಳೆದವು. ಲಲಿತೆ ಬೇಸರದಿಂದಲೇ ಇದ್ದಳು. ಭುಜಂಗನ ತೊದಲು ಮಾತುಗಳೂ ಅವಳನ್ನು ಸಂತೋಷಪಡಿಸಲಿಲ್ಲ. ದಾಮೋದರನು ನಾಲ್ಕಾರು ಬಾರಿ ಮಂಗಳೂರಿಗೆ ಬಂದು ತಂಗಿಯ ಆವಶ್ಯ, ಅನುಪತ್ತಿಗಳನ್ನು ವಿಚಾರಿಸಿಕೊಂಡು ಹೋದನು. ಎಡೆ, ಎಡೆಯಲ್ಲಿ ಪತ್ರಗಳನ್ನು ಹಾಕಿದನು. ಅದಕ್ಕಿಂತ ಹೆಚ್ಚಿಗೆ ಅವನಿಂದಾಗುವಂತಿರಲಿಲ್ಲ; ಸಾಧ್ಯವೂ ಇರಲಿಲ್ಲ. ಅವನ ಮನೆಯ ಕೆಲಸವೇ ಅವನಿಗೆ ಸಾಕಷ್ಟಿತ್ತು. ಲಲಿತೆಯೂ ನಿರಾಸಕ್ತಳಾಗಿದ್ದುಬಿಟ್ಟಳು. ಅವಳಿಗೆ ಬದುಕ್ಕುವುದೇ ಬೇಡ, ಎಂದೆನಿಸತೊಡಗಿತು. ಹೆಚ್ಚು ಹೆಚ್ಚು ಆ ಕುರಿತು ಆಲೋಚಿಸಿದಂತೆ, ಆ ನಿರ್ಧಾರವೇ ಧೃಡವಾಯಿತು. ಜೊತೆಯಲ್ಲಿ, ತಾನು ಆತ್ಮಹತ್ಯ ಮಾಡಿಕೊಂಡರೆ, ಭುಜಂಗನ ಗತಿಯೇನು? ಎಂಬ ಆಲೋಚನೆಯ ತೆರೆಯೇಳುತ್ತಿತ್ತು. ಆದರೆ, ಮರುಕ್ಷಣವೇ, ಏನಾದರೂ ಆಗುತ್ತದೆ. ಹುಟ್ಟಿದಾಗಲೇ ತಾನು ಸತ್ತಿದ್ದರೆ........? ಎಂಬ ವಿಚಾರದ ಮಗುದೊಂದು ತೆರೆ ಬಂದು ಅದನ್ನು ಉರುಳಿಸಿ ಬಿಡುತ್ತಿತ್ತು.

ಲಲಿತೆಯ ನಿರ್ಧಾರ ಇನ್ನಷ್ಟು ಧೃಡವಾಗುತ್ತಿತ್ತು. ಕೊನೆಗೆ, ಆತ್ಮಹತ್ಯವೇ ಸರಿಯಾದ ದಾರಿಯೆಂದು ನಿಷ್ಕರ್ಷೆಯಾಯಿತು. ಆದರೆ, ಅದರ ಮೊದಲು ತನ್ನ ವಿಪುಲವಾದ ಸಂಪತ್ತಿನ ವಿಲೇವಾರಿಯನ್ನು ಮಾಡಿ ಹೋಗಬೇಕೆಂದು ನಿಶ್ಚಯಿಸಿದಳು.

× × × ×

ಸಂಜೆ ನಾಲ್ಕು ಗಂಟೆ; ಕುಡಿದ ಕಾಫಿ ಇನ್ನೂ ಕರಗಿಲ್ಲ. ಜೋಡುಮಠದ ಗಲ್ಲಿಯಲ್ಲಿ ಹೀರೆಯ ಮನೆಯ ಮುಂಬಾಗಿಲು ಸ್ವಲ್ಪ ಓರೆಯಾಗಿತ್ತು. ಅದರ ಮಧ್ಯೆ ಸಂಜೆಯ ಬಿಸಿಲು ತೂರಿಹೋಗಿತ್ತು. ಒಳಗೆ ಇಬ್ಬರು ಇಸ್ಪೀಟಾಡುತ್ತಿದ್ದಾರೆ. ನಾಣ್ಯಗಳ ಝಣಝಣತ್ಕಾರವು ಕೇಳುತ್ತಿದೆ. ಇಬ್ಬರ

ಬಾಯಲ್ಲೂ ಡಬ್ಬಾ, ಡಬ್ಬಾ, ಸಿಗರೇಟುಗಳು ಬೂದಿಯಾಗಿ ಹೋಗಿವೆ. ಆಗಾಗ ಆಟದ ಭರದಲ್ಲಿ ಎತ್ತುವ ಉದ್ಗಾರಗಳೂ ಕೇಳಿಬರುತ್ತಿವೆ.

ರಾಜಾರಾಮನು ಹೀರೆಯ ಮನೆಯಲ್ಲಿ ಮೊಕ್ಕಾಂ ಮಾಡಿದಂದಿನಿಂದ, ದಿನವಿಡೀ ಅವನೂ, ರಾಮಗೋಪಾಲನೂ ಇಸ್ಪೀಟಾಡುವುದು ರೂಢಿಯಾಗಿತ್ತು. ದಿನಂಪ್ರತಿಯೂ, ರಾಜಾರಾಮನು ಹತ್ತಿಪ್ಪತ್ತು ರೂಪಾಯಿಗಳನ್ನು ಕಳೆದುಕೊಳ್ಳದಿರುತ್ತಿರಲಿಲ್ಲ.

ಇಬ್ಬರೂ ಆಟದಲ್ಲೇ ಸಂಪೂರ್ಣ ಮಗ್ನರಾಗಿರುವಾಗಲೇ, ಬಾಗಿಲು ಪೂರ್ಣವಾಗಿ ತೆರೆಯಿತು. "ಶುಭವರ್ತಮಾನ! ಶುಭವರ್ತಮಾನ!" ಎಂದು ಹೇಳುತ್ತಾ ಹೀರೆ ಒಳಗೆ ಬಂದಳು.

ಇಸ್ಪೀಟಿನ ಎಲೆಯನ್ನು ಇಳಿಸಲು ಎತ್ತಿದವನು, ಅದನ್ನು ಹಾಗೆಯೇ ಹಿಡಿದುಕೊಂಡು, ರಾಜಾರಾಮನು, "ಏನು, ರಾಣಿ?" ಎಂದು ಕೇಳಿದನು.

ಈಗ ಹೀರಾ, ರಾಣಿಯಾಗಿದ್ದಳು. ರಾಜಾರಾಮನು, ರಾಜನಾಗಿದ್ದನು. ಬಹಳ ಚೆನ್ನಾದ ಹೆಸರುಗಳು!

ಹೀರಾ, ಸ್ವಲ್ಪ ದರ್ಪದಿಂದಲೇ, "ಏನಂದರೆ? ಶುಭವರ್ತಮಾನ!" ಎಂದಳು.

"ಹಾಗಂದರೆ?"

"ಶುಭವರ್ತಮಾನ!"

"ಅವಳನ್ನೇನು ಕೇಳುತ್ತಿಯೋ, ಬಿಂಕದ ಮುದ್ದೆಯನ್ನು? ಅವಳ ಶುಭವರ್ತಮಾನ ಅವಳಿಗೇ ಇರಲಿ, ನಾವು ನಮ್ಮ ಆಟ ಮುಂದರಿಸೋಣ." ಎಂದನು ರಾಮಗೋಪಾಲ.

"ಸ್ವಲ್ಪ ನಿಲ್ಲು, ಅದೇನು? ಹೇಳು ರಾಣೀ!"

"ಹೇಳಿದ್ದಲ್ಲವೇ?"

"ಹ್ಞೋ!" ನಗುತ್ತಾ ರಾಜಾರಾಮನು ಹೇಳಿದನು. "ತಿಳಿಯಿತು, ತಿಳಿಯಿತು. ನನಗಿಂತ ಕುಬೇರನೊಬ್ಬನು ಸಿಕ್ಕಿದ್ದಾನೆ, ಅಲ್ಲವೇ? ಇನ್ನು ನನ್ನನ್ನು ಬಿಡುವ ಆಲೋಚನೆ!"

"ಥಿಕ್ ಇದೆಂಥ; ಮಾತು?"

"ಮತ್ತೆ! ವರ್ತಮಾನವನ್ನು ಹೇಳಬಾರದೇ?"

"ಹೇಳದೆ, ಎಲ್ಲಾದರೂ ಉಂಟೇ? ನೀವೇ ಊಹಿಸುತ್ತಿರೋ ಎಂದು ಸುಮ್ಮನಿದ್ದೆ."

“ನಾನೂ ಊಹಿಸಿದೆ!”

“ಹೂಂ?”

“ಅದು ತಪ್ಪಾಯಿತಷ್ಟೆ?”

“ಶುದ್ಧ ತಪ್ಪು!

“ಹಾಗಾದರೆ, ಇನ್ನು ಹೇಳಬಹುದು.”

“ನೀವು ಸುಮ್ಮನೆ ವಕೀಲರಿಗೆ ಹಣ ಸಾವಿರಗಟ್ಟಲೆ ಸುರಿದು, ಬಾಲ ತುಂಡಾದ ನರಿಯಹಾಗೆ ಸುಮ್ಮನೆ ಬಂದಿರಿ. ನಾನು ನೋಡಿ, ಕಾಸೂ ಖರ್ಚಿಲ್ಲದೆ, ಅರ್ಧ ಲಕ್ಷಕ್ಕೆ ಒಡತಿಯಾಗುತ್ತೇನೆ.”

“ಹ್ಞೆಯ್!” ಎಂದು ರಾಜಾರಾಮನೂ, ರಾಮಗೋಪಾಲನೂ ಇಬ್ಬರೂ ಕೇಳಿದರು. ಇಸ್ಪೀಟಾಟ ಅಷ್ಟರಲ್ಲೇ ನಿಂತುಹೋಯಿತು.

“ಅದು ಹೇಗೆ?” ಎಂದು ಪುನಃ ರಾಜಾರಾಮನ ಸವಾಲು.

“ನಿನ್ನಿಂದ ವ್ಯವಹರಿಸಲಿಕ್ಕೆ ಆದೀತೋ?” ಎಂದು ರಾಮಗೋಪಾಲ ಕೇಳಿದನು.

“ನಾನು ಹೇಳಿದ್ದಲ್ಲವೇ, ಕಾಸೂ ಖರ್ಚಿಲ್ಲವೆಂದು? ವ್ಯವಹರಣೆಯೂ ಇಲ್ಲ, ಕೋರ್ಟೂ ಇಲ್ಲ!”

“ಮತ್ತೆ ರಾತ್ರಿ ಮನೆಗೆ ಕನ್ನಕೊರೆದು ಕಳ್ಳತನ ಮಾಡುವುದೆಂದೇ?”

“ಛೇ! ಸಂಪೂರ್ಣಕೇಳಿಕೊಂಡು ಮಾತನಾಡಿಯಪ್ಪ. ಈಗ, ನಿಮ್ಮ ಲಲಿತೆಯಿಲ್ಲವೇ!”

“... ........”

“ಏನು, ಮಾತಿಲ್ಲ?”

“ಮಾತನಾಡಬಾರದು, ಎನ್ನುವವಳೂ ನೀನು, ಈಗ ‘ಏನು, ಮಾತಿಲ್ಲ’ ಎಂದು ಕೇಳುವವಳೂ ನೀನೇ!”

“ಆಗಲಿ; ಲಲಿತೆಗೆ ಸಾಯುವ ಆಲೋಚನೆಯಿದೆಯಂತೆ!”

“ಅದರಿಂದ ನಮಗೇನು ಲಾಭ? ಬಾ, ರಾಜಾರಾಮ! ಅವಳು ಏನು ಹೇಳುತ್ತಾಳೋ, ಅವಳಿಗೇ ಗೊತ್ತು! ನಾವು ಇಸ್ಪೀಟಾಡೋಣ!” ಎಂದು ರಾಮಗೋಪಾಲನು ರಾಜಾರಾಮನನ್ನು ಕರೆದನು.

“ನೀನು ಸುಮ್ಮನಿರು” ಎಂದು ಹೀರಾ, ಅವನನ್ನು ತಡೆದು,

"ಸಾಯುವ ಮೊದಲು ತನ್ನ ಸಂಪತ್ತನ್ನು ಯಾವುದಾದರೂ ಫಂಡಿಗೆ ಕೊಡುವ ಆಲೋಚನೆಯಲ್ಲಿದ್ದಾಳಂತೆ."

"ಆದರೆ, ನಾವು ಯಾವ ಫಂಡಿನ ಗಂಡಂದಿರು? ನನಗೇಕೋ ಇದ ರಲ್ಲಿ, ಆಸೆಯೇ ಕಾಣಿಸುವುದಿಲ್ಲ" ಎಂದನು ರಾಜಾರಾಮು.

"ನಿಮಗೇಕೋ ಕೋತಿಗಿದ್ದಷ್ಟು ಸಹಾ ಬುದ್ಧಿಯಿಲ್ಲ. ಪರಿಸ್ಥಿತಿಗೆ ತಕ್ಕಹಾಗೆ ಉಪಾಯ ಯೋಚಿಸಬೇಕು."

"ಎಂಥ ಉಪಾಯ?"

ಹೀರಾ, ಏನನ್ನೋ ಗುಟ್ಟಾಗಿ ರಾಜಾರಾಮುನ ಕಿವಿಯಲ್ಲಿ ಹೇಳಿದಳು. ಕೇಳಿ, ರಾಜಾರಾಮು ಹಿಗ್ಗಿ ನೂರ್ಮಡಿಯಾದನು. "ಹಾಗಾದರೆ, ಇದೇ ಉಪಾಯ" ಎಂದು 'ಶರಾ' ಹೇಳಿದನು.

× × × ×

ತನ್ನ ಸಂಪತ್ತನ್ನೆಲ್ಲಾ ಯಾವುದಾದರೂ ಫಂಡಿಗೆ ಕೊಡುತ್ತೇನೆ, ಎಂದು ಹೇಳಿದ್ದಳು ಲಲಿತೆ. ಆದರೆ, ಜನರ ಹುಚ್ಚುತನವನ್ನು ನೋಡಿ, 'ತನಗೇಕೆ, ಈ ಬುದ್ಧಿ ಹುಟ್ಟಿತು?' ಎಂದು ತೋರಿತು. ಇಲೆಕ್ಷನಿನ ಹಾಗೂ ಇದಕ್ಕೂ, ಫಂಡು–ಫಂಡಿನೊಳಗೆ ಪೈಪೋಟಿ, ಇದರಿಂದಲೇ ಫಂಡ್ ಕಮಿಟಿಯ ಮಾನ್ಯ (?) ಮೆಂಬರುಗಳು ವಂತಿಗೆಯಿಂದ ದೊರೆತ ಸಂಪತ್ತನ್ನೆಲ್ಲಾ, ತಮ್ಮ ಸ್ವಕಾರ್ಯಗಳಿಗಾಗಿಯೇ ಉಪಯೋಗಿಸುವವರು, ಎಂಬುದನ್ನು ಊಹಿಸಿ ಕೊಳ್ಳಬಹುದಾಗಿತ್ತು. ಲಲಿತೆಗೆ ಇದರಿಂದುಂಟಾದ ತಲೆಸಿಡಿತ ಅಷ್ಟಿಷ್ಟಲ್ಲ.

ಮೊದಲಾಗಿ ಬ್ರಾಹ್ಮಣೋದ್ಧಾರ ಸಮಿತಿಯ ಮಾನ್ಯ (?) ಪ್ರೆಸಿಡೆಂಟರೇ ಬಿಜಯಂಗೈದರು. ಈ ಸಮಿತಿ ಸ್ಥಾಪಿತವಾಗಿ ಮೂವತ್ತು ವರ್ಷಗಳಾದವು. ಇದು ಸ್ಥಾಪಿತವಾದುದರ ಉದ್ದೇಶವೋ ಬಹಳ ದೊಡ್ಡದು (!) ಬ್ರಾಹ್ಮಣ್ಯ ವನ್ನು ಕೇಳುವವರಿಲ್ಲವಾಗಿದೆ. ದಿನದಿಂದ ದಿನಕ್ಕೆ ಅಧೋಗತಿಗಿಳಿಯುತ್ತದೆ. ಪಾತಾಳಕ್ಕಿಳಿದ ಬ್ರಾಹ್ಮಣ್ಯವನ್ನು ಮೇಲೆ ಸ್ವರ್ಗಕ್ಕೆತ್ತುವುದೇ ಇವರ ಮುಖ್ಯ ಧ್ಯೇಯ! ಇದನ್ನು ಇವರು ಎಷ್ಟರ ಮಟ್ಟಿಗೆ ಸಾಧಿಸಿದ್ದಾರೆಂಬುದು ಬೇರೆಯೇ ವಿಷಯ. ಅದಕ್ಕೆ ಅನುಕೂಲತೆಯೆಲ್ಲಿದೆ? ದುಡ್ಡೊಂದು ಬೇಕಲ್ಲ! ಬ್ರಾಹ್ಮ ಣ್ಯಕ್ಕೆ ಅಧೋಗತಿ ಪ್ರಾಪ್ತವಾದ ಹಾಗೆ. ಬ್ರಾಹ್ಮಣರಿಗೆ ದುಡ್ಡಿನಲ್ಲೂ ಅಧೋ ಗತಿಯೇ! ಅಡಕೆ ತೋಟ, ಕಾಫಿ ತೋಟದ ಸಾಹುಕಾರರಲ್ಲೇನೋ ಇರ

ಬಹುದು, ಬೇಕಾದಷ್ಟು. ಆದರೆ, ಅದೆಲ್ಲಾ ಅವರ ' ಕೀಪ್ಸಿ'ನ ' ಸೇಫು ! ' ಪ್ರೌಢಶಿಕ್ಷಣಕ್ಕೆ ಹೋದ ಅವರ ಮಗಂದಿರು, ಕೃಷ್ಣಭವನದಲ್ಲೋ, ಸಿನೆಮಾ ಥಿಯೇಟರಿನಲ್ಲೋ ಹಿಂದಕ್ಕೆ ತೆಗೆಯಲಾರದಂತೆ, 'ಪರ್ಮನೆಂಟ್ ಡೆಪೊಸಿಟ್' ಆಗಿ ಇಡುತ್ತಾರೆ. ಅಲ್ಲವಾದರೆ ಇದು ನ್ಯಾಯವೇ ? ಮದುವೆ, ಮುಂಜಿಗಳಾದರೆ, ಜರಿಕಚ್ಚೆಯವರಿಗೆ ಒಂದು ಚಕ್ರ ದಕ್ಷಿಣೆ ಕೊಟ್ಟರೆ, ಬಹಿರ್ವಾಸದವರಿಗೆ, ಆ ಚಕ್ರದಲ್ಲಿ ಮೂರಾಣೆಗೆ ಚಕ್ರ ಕೊಡುತ್ತಾರೆ. ಇವರಿಗೆ ದುಡ್ಡಿದ್ದವರನ್ನೇ ಉದ್ಧಾರ ಮಾಡುವ ಬುದ್ಧಿಯಲ್ಲದೆ, ಬಡವರ ಸಂಕಷ್ಟಗಳು ಗೊತ್ತೇ ಇಲ್ಲವಲ್ಲ ! ದುಡ್ಡಿನಲ್ಲಿ ಹೀಗೆ ಕಂಗಾಲಾದ ರಮಾನಂದಾಚಾರ್ಯರು, (ಮಾನ್ಯ ಪ್ರೆಸಿಡೆಂಟರು) ಅನಾಯಾಸವಾಗಿ ಅರ್ಧ ಲಕ್ಷಕ್ಕೆ ಹತ್ತಿರದ ಸಂಪತ್ತು ವಶವಾಗುವಾಗ ಸುಮ್ಮನೆ ಕುಳಿತುಕೊಳ್ಳಲು ಅವರಿಗೇನು ತಲೆಗೆ ಹುಳ ಹತ್ತಿತೇ? ಅವರು ಲಲಿತಮ್ಮನನ್ನು ಭೇಟಿಯಾಗುವ ಆಲೋಚನೆ ಮಾಡಿದರು.

ಆದರೆ, ಹಿಂದಿನ ರಾತ್ರಿಯೇ ಅವರಿಗೆ ಹಾಳಾದ ಜ್ವರವೊಂದು ಬಂತಯ್ಯ ! ಅದರ ಕಾವನ್ನು ಅನುಭವಿಸಿದ ಅವರಿಗೆ, ಹಣ ಬರುವಾಗ, ತಾನು ಹೆಣವಾಗುತ್ತೇನೋ ಎಂಬ ಆಲೋಚನೆಯೂ ಆಗದಿರಲಿಲ್ಲ. ಆದರೆ, ಇಷ್ಟೊಂದು ಅಲ್ಪ ಕಾರಣಗಳಿಗಾಗಿ ಹಣವನ್ನು ಸುಮ್ಮನೆ ಬಿಡುವ ಜನರಲ್ಲ ಅವರು ! ತಾವು ಹೆಣವಾದರೂ, ತಮ್ಮ ಕುಟುಂಬದ ವಿನಿಯೋಗಕ್ಕಾದೀತು, ಇನ್ಶ್ಯೂರ್ ಮಾಡಿ ಬಿಡೋಣ ಎಂಬ ಸದಾಲೋಚನೆಯಿಂದ (?) ತಮ್ಮ ಪರ್ಸನಲ್ ಸೆಕ್ರೆಟರಿ ಮಹಾಶಯರನ್ನೇ ಖುದ್ದು ಕಳುಹಿಸಿದರು. ಇವರು ದಯಾನಂದಾಚಾರ್ಯರು ! ಹೆಸರಿಗೆ ತಕ್ಕವರು ಎಂದು ಹೇಳಿದರೆ ಸಾಕು.

ಟಕ್, ಟಕ್ ಬಾಗಿಲು ಸದ್ದಾಗಿ, ಲಲಿತೆ, ಬಾಗಿಲು ತೆರೆದಳು. ಹೊರಗೆ, ಹಾವುಗೆ ಮೆಟ್ಟಿಕೊಂಡ ಆಚಾರ್ಯರೇ ! ಕಂಕುಳಲ್ಲಿ ಕಾಗದಪತ್ರದ ಕಟ್ಟು !

" ನಮಸ್ಕಾರ ! " ಎಂದಳು ಲಲಿತೆ.

" ನಮೋನ್ನಮ ! " ಆಚಾರ್ಯರು ಉತ್ತರಗೊಟ್ಟರು. ಲಲಿತೆ, ತನಗೆ ನಮಸ್ಕರಿಸಲಿಲ್ಲವೆಂದು ಸ್ವಲ್ಪ ಬೇಸರವಾಯಿತು. ಹಿರಿಯರೆಂಬ ಗೌರವವಾದರೂ ಬೇಡವೇ ?

" ಕುಳಿತುಕೊಳ್ಳಿ. " ಎಂದು ಲಲಿತೆ ಆಸನವನ್ನು ತೋರಿಸಿದಳು.

" ರಾಮ ! ರಾಮ ! ಶಾಂತಂ, ಪಾಪಂ ! ಶಾಂತಂ, ಪಾಪಂ ! ಖುರ್ಚಿಯನ್ನೇರುವುದೋ ? ಮಣೆ ! ಮಣೆ ! "

ಲಲಿತೆ ನಕ್ಕು, ಮಣೆಯನ್ನಿರಿಸಿದಳು. ಆಚಾರ್ಯರು, ಸ್ವಲ್ಪವೂ ವಿಲಂಬಿಸದೆ, ಆಸನಾರೋಹಣ ಮಾಡಿದರು.

"ಕಾಫಿ,ಕಷಾಯ, ಚಹಾ!............!"

"ಒಂದು ಊಹೂಂ! ಎಳನೀರು, ಹಾಲು............!"

ಹಾಲೇ ಬಂದಿತು. ಆಚಾರ್ಯರು ಬೆಕ್ಕಿನಂತೆ ಕಣ್ಮುಚ್ಚಿಕೊಂಡು ಕಚ್ಚಿಯೇ ಕುಡಿದರು.

"ತಮ್ಮ ಪವಿತ್ರ ಪಾದಂಗಳು ಏಕೆ ಇತ್ತ ಕಡೆ ಬರೋಣಾಯ್ತು?"

ಕೇಳಿದ್ದೇ ಸರಿ, ಆಚಾರ್ಯರ ಬಾಯಿಯು ಬೇಗ ತೆರೆದಂತಾಯಿತು. ಅವರ ಪ್ರತಿಯೊಂದು ಮಾತಿನಲ್ಲೂ ಅವರ ಸಂಸ್ಕೃತ ಪಾಂಡಿತ್ಯವು ಹೊರ ಸೂಸುತ್ತಿತ್ತು. ಆ ಪಾಂಡಿತ್ಯ ಪ್ರದರ್ಶನದ ನಡುವೆ ಕಂಕುಳ ಕಾಗದದ ಕಟ್ಟನ್ನು ತೆರೆದು, ಅದರಲ್ಲಿ ಲಿಖಿತವಾದ ಬ್ರಾಹ್ಮಣ್ಯೋದ್ಧರದ ಯೋಜನೆಯನ್ನು ತೋರಿಸಿಯೂ ಆಯಿತು.

ಅವರು ಇನ್ನೂ ಗುರಿ ಮುಟ್ಟಿರಲಿಲ್ಲ. ಅಷ್ಟರಲ್ಲಿ, 'ರೊಟ್ಟಿ, ರೊಟ್ಟಿ,' ಎಂದು ಕೂಗುತ್ತಾ ಚಿಕ್ಕ ಹುಡುಗನೊಬ್ಬ ಒಳಗೆ ಬಂದು ಬಿಟ್ಟ. ಆಚಾರ್ಯರು ತಮ್ಮ ಮೂಗಿನ ಎರಡೂ ಸೊಳ್ಳೆಗಳನ್ನು ಒತ್ತಿಹಿಡಿದು, ತಮ್ಮ ದಯಾ ಹೆಸರಿನ ಮಹಿಮೆಯನ್ನು ಪ್ರದರ್ಶಿಸಿದರು. "ಅಯ್ಯೋ! ಅವನ ಮೈಯ ದುರ್ಗಂಧವೇ! ಚಿಂದಿ ಬಟ್ಟೆಯೇ! ರೂಪವೇ! ಅವನು ಇನ್ನು ಸ್ನಾನಮಾಡುವುದು ಯಾವಾಗ ಸಾಯುವಾಗಲೋ?" ಎಂದೆಲ್ಲಾ ಅಂದಿತು ಅವರ ಮನಸ್ಸು. ಉಸಿರುಗಟ್ಟಿ ಸಾಯುವಂತಾಯಿತು. ಆದರೆ, ಅವರನ್ನು ಕೊಲ್ಲುವ ಇಚ್ಛೆ ಲಲಿತೆಗಿರಲಿಲ್ಲ. ಅವಳೆಸೆದ ಒಂದು ರೂಪಾಯಿಯನ್ನು ಹೆಕ್ಕಿ, ಹಿಗ್ಗಿ, ಹುಡುಗ ಹೋಗಿಬಿಟ್ಟಿದ್ದನು.

ಆಚಾರ್ಯರು, ಉಸಿರಾಡಿಸುತ್ತಾ, "ಏನೊಂದು ಡರ್ಟೀ ಮಂಗಳೂರಪ್ಪ! ಸರಕಾರದವರಿಗೇನು ಮಂಡೆಮಾರಿ? ಫೀಡಿಂಗ್ ಹೌಸ್ ತೆರೆಯಲಿ, ಓರ್ಫನ್ ಫಂಡ್ ಹೊರಡಿಸಲಿ," ಎಂದು ತಮಗೂ ಇಂಗ್ಲಿಷ್ ಗೊತ್ತಿದೆ ಎಂಬುದನ್ನು ತೋರಿಸಿದರು.

"ಇರಲಮ್ಮ, ನಾನು ಹೇಳಿದ ವಿಚಾರ?"

"ಎಲ್ಲಾ ನಾಲ್ಕು ದಿನದ ಮೇಲೆ ನೋಡೋಣ ಆಚಾರ್ಯರೇ!"

"ಭೇಷ್!"

'ಶುಕ್ಲಾಂಬರಧರಂ' ಎನ್ನುತ್ತಾ ಆಚಾರ್ಯರ ಸವಾರಿ ಹೊರಟು ಹೋಯಿತು.

ಮಂಗಳೂರಿನಲ್ಲೇ ಇನ್ನೊಂದು ಸಂಘವೂ ತತ್ಕಾಲಕ್ಕೆ ತಲೆಯೆತ್ತಿಕೊಂಡಿತ್ತು. ಭಾಷೋದ್ಧಾರ ಸಂಘ ! ಮಂಗಳೂರು ಕನ್ನಡದ ಊರಾದರೂ, ಇದು ಬರೀ ಕನ್ನಡ ಭಾಷೋದ್ಧಾರಕ್ಕಾಗಿ ಹುಟ್ಟಿದ ಸಂಘವಲ್ಲ. ಮಂಗಳೂರಿನಲ್ಲಿರುವುದು ಕನ್ನಡಿಗರು ಮಾತ್ರವೇ ಅಲ್ಲ; ಇತರ ಭಾಷೆಯನ್ನಾಡುವವರೂ ಇದ್ದಾರೆ. ಅವರನ್ನು ಬಿಟ್ಟು ಬರೀ ಕನ್ನಡವನ್ನು ಉದ್ಧರಿಸುವುದೆಂದರೆ ಹುಚ್ಚುತನವಲ್ಲವೇ ? ಆದುದರಿಂದಲೇ ಈ ಸಂಘದವರು ಕನ್ನಡ, ಇಂಗ್ಲಿಷ್, ತಮಿಳು, ತೆಲಗು, ಹಿಂದಿ, ಮಲಯಾಳ, ಕೊಂಕಣಿ ಮುಂತಾದ ಭಾಷೆಗಳನ್ನು ಒಟ್ಟುಸೇರಿಸಿ, ವಿಶೇಷ ಅಡುಗೆಗಳಲ್ಲಿ ಮಾಡುವ ಅವ್ವಿಲಿನಂಥ, ಕಲಸು ಮೇಲೋಗರದಂಥ ಒಂದು ಭಾಷೆಯನ್ನು ಉತ್ಪಾದಿಸಿ, ಅದರ ಉದ್ಧಾರವನ್ನು ಕೈಗೊಳ್ಳುವುದರಲ್ಲಿ ಮಗ್ನರಾಗಿದ್ದರು. ಆದರೆ, ಇವರು ಪರಸ್ಪರ ಮಾತಾಡಿಕೊಳ್ಳುವಾಗ ಅರ್ಥವಾಗದ ತೊಂದರೆಯಿದ್ದೇ ಇತ್ತು. ಇಂಗ್ಲೀಷರು, "ಇಂಗ್ಲೀಷು ಕಲಿಯಿರಯ್ಯ! ಇದೆಂಥದು, ಕಂ-ಕಂ? ಮಕಾಲೆ ಸಾಹೇಬರು ಸತ್ತು ಇಷ್ಟು ವರ್ಷವಾದರೂ, ನಿಮಗೆ ಬುದ್ಧಿ ಬರಲಿಲ್ಲವಲ್ಲ!" ಎನ್ನುತ್ತಿದ್ದರೆ, ಹಿಂದೀ-ಪ್ರವೀಣರು ತಮ್ಮ ಹಂದಿಗೆ ಸಮಾನವಾದ ಬಾಯಿಯನ್ನು ತೆರೆದು, "ನಿಮ್ಮ ಕಾಟ್-ಗಿಟ್ ಎಲ್ಲಾ ಇಲ್ಲಿ ನಡೆಯೋಹಂಗಿಲ್ಲ, ನೀವೇ ಇನ್ನು ಪೆಟ್ಟಿಗೆ ಕಟ್ಟಬೇಕು ಇಂಗ್ಲಾಂಡಿಗೆ! ಇಲ್ಲವಾದರೆ, ನಾವು ನಿಮ್ಮನ್ನು ಅರಬೀ ಕಡಲಿಗೆಸೆಯುತ್ತೇವೋ ಇಲ್ಲವೋ ನೋಡಿ," ಎಂದು ಅಬ್ಬರಿಸುತ್ತಿದ್ದರು. ಕನ್ನಡಿಗರಿಗೆ, ಇವರಿಬ್ಬರಲ್ಲಿ ಯಾರು ಮಾತಾಡಿದರೂ, 'ಎನ್ನಡ ಇದು?' ಎಂದು ಕೇಳುವಂತಾಗುತ್ತಿತ್ತು. ಅದರಲ್ಲಿಯೂ ಒಬ್ಬ ಹಿಂದೀ ಪಂಡಿತರು,ಒಬ್ಬ ಕನ್ನಡ ಪಂಡಿತರನ್ನುದ್ದೇಶಿಸಿ, "ಕಾಮ ಕರೋ ;" ಎಂದಾಗ, ಆ ಬ್ರಹ್ಮಚಾರಿಗಳಿಗೆ ಮೊದಲ ಶಬ್ದವನ್ನು ಕೇಳಿ, ಪಾಪ! ಮನಸ್ಸಿನಲ್ಲಿ ಏನೇನೋ ಆಯಿತಂತೆ.

ಇದಕ್ಕಿಂತ ಮೊದಲ ವಿಚಾರವನ್ನು ಮರೆತು ಬಿಟ್ಟೆ. ಈ ಸಂಘಕ್ಕಿಂತಲೂ ಮೊದಲಾಗಿ ಬೇರೆ ಸಂಘಗಳು ದೌಡುಗಟ್ಟಿಕೊಂಡು ಲಲಿತೆಯ ಮನೆಗೆ ಬಂದಿದ್ದವು. ಗೌಡ ಸಾರಸ್ವತರು ಬಂದು, ತಾವು 'ಬ್ರಾಹ್ಮಣರು' ಎಂದಾಗ, ಲಲಿತೆ, ರಮಾನಂದಾಚಾರ್ಯರ ಹೆಸರನ್ನೆತ್ತಿದರೆ, 'ಅವರು

ಪುಳಿಕೊದ್ದೆಲ್ ಬ್ರಾಹ್ಮಣರು' ಎಂದು ಬಿರುದಾಯಿತು. ರಮಾನಂದಾಚಾರ್ಯರು ಸುಮ್ಮನೆ ಕೂತಾರೆಯೇ? ಅವರು, ಕೊಂಕಣಿಗಳಿಗೆ, 'ನೀವು ಕಸಳೆ–ಮೊಸಳೆ ಬ್ರಾಹ್ಮಣರು' ಎಂದು ನಂಜು ಕಾರಿದರು. ಸರಿ, ಸುರುವಾಯಿತು ಅಲ್ಲಿಯೇ ಪೈಪೋಟಿ! ಒಬ್ಬ ಮಹನೀಯರು, 'ಸಿನಿಮಾ ಥೇಟರು' ಕಟ್ಟಿಸುವ ಆಸೆಯಿಂದ ಬಂದು, "ಸೀವೀಗ ಒಂದು ಮೂವತ್ತು ಸಾವಿರ ಸಾಲವೆಂದು ಕೊಟ್ಟರಿ, ವಾಯಿದೆ ಮುಗಿಯುವುದರೊಳಗೆ, ಫಾಯಿದೆ ಸಮೇತ ಎಂದರೆ, ಬಡ್ಡಿ ಚಕ್ರದ ಸಲೆಯಲ್ಲಿ ಕೂಡಿಸಿ, ನಾನು ತಂದುಕೊಟ್ಟರಾಯಿತಲ್ಲ" ಎಂದು ರಂಗು ಮಾಡಿದರು. ಆದರೆ, ಲಲಿತೆಯ ಗುರಿ ಬೇರೆಯಾಗಿದ್ದುದರಿಂದ ನಿರಾಶೆಯಿಂದ ಹಿಂದಿರುಗಬೇಕಾಯಿತು.

ಬ್ರಾಹ್ಮಣರ ಬೆನ್ನಟ್ಟಿಕೊಂಡೇ ಹೊಲೆಯರು ಬಂದರು. ಅವರು 'ಗಾಂಧೀಕಿ ಜೈ.' 'ಜ್ವಾರಲಾಲ್‌ಕಿ ಜೈ'ಗೆ ಬೀದಿಗಳು ಒಡೆದು ಹೋದವಂತೆ. ಅವರು ಲಲಿತೆಯ ಮನೆಯ ಮುಂದೆ 'ಹಾಲ್ಟ್' ಅಂದಾಗ, ಲಲಿತೆ ಹೊರಗೆ ಜಗಲಿಯಲ್ಲೇ ಕುಳಿತಿದ್ದಳು. ತನ್ನ ಸಂಗಡವನ್ನು ದಾರಿಯಲ್ಲೇ ಬಿಟ್ಟು, 'ಲೀಡರ'ನೊಬ್ಬನೇ ಮುಂದೆ ಬಂದನು.

"ಅಮ್ಮಾ, ಮೇಲೆ ಬರಬಹುದಲ್ಲವೇ?" ಎಂದು ಅಂಗಳದಲ್ಲೇ ನಿಂತು ಕೇಳಿದನು.

ಲಲಿತೆಗೆ ಅರ್ಥವಾಗಲಿಲ್ಲ: "ಅದೇನಪ್ಪಾ" ಎಂದು ಕೇಳಿದಳು.

"ನಾವು ಹೊಲೆಯರು!"

"ಒಹೋ! ಹಾಗೋ?"

"ಬರಬಹುದೇ?"

"ಅಡ್ಡಿ ಶಿವಾಯಿ!"

ಲೀಡರ್ ಕೃಷ್ಣಪ್ಪನು ಜಗಲಿಯನ್ನೇರಿದನು. ಲಲಿತೆ, ಖುರ್ಚಿಯನ್ನೇ ಅವನಿಗಿತ್ತಳು.

"ತಮ್ಮ ಹೆಸರು?" ಎಂದು ಕೇಳಿದಳು.

"ಕೃಷ್ಣಪ್ಪ!"

"ಮತ್ತೇನು ವಿಶೇಷ?"

"ಏನೂ ಇಲ್ಲ; ತಮ್ಮ ಸಂಪತ್ತನ್ನು ಜನೋದ್ಧಾರಕ್ಕಾಗಿ ಕೊಡುತ್ತೀರೆಂದು ಹೇಳಿದ್ದೀರಂತೆ."

"ಹೂಂ; ಹೇಳಿದ್ದು ಹೌದು.

"ನೋಡಿ; ನಮ್ಮದು ಬಹಳ ಕೀಳು ಜಾತಿ; ವಿದ್ಯಾಬುದ್ಧಿ, ಎಲ್ಲದರಲ್ಲೂ ಬಹಳ ಕೀಳು. ಉಳಿದವರೆದುರಿಗೆ ನಮಗೆ ಸ್ಥಳವೇ ಇಲ್ಲ. ನಮ್ಮವರ ಉದ್ಧಾರಕ್ಕಾಗಿಯೇ ನಾವು ಟೊಂಕ ಕಟ್ಟಿದ್ದೇವೆ."

"ಇದೇನೂ ಸರಿಯಾಗಿ ಕಾಣಿಸುವುದಿಲ್ಲ ನನಗೆ. ಎಲ್ಲಿ ನೋಡಿದರೂ ಈಗ, ಡಾಕ್ಟ್ರಿಗೋ, ಎಂಜಿನಿಯರಿಂಗಿಗೋ, ಕಾಲೇಜಿಗೊ ಎಲ್ಲಾ ನಿಮ್ಮ ಜಾತಿಯವರೇ ಹೋಗುತ್ತಿದ್ದಾರೆ. ಉಳಿದವರನ್ನು ಕಡೆಗಣಿಸಿ, ನಿಮಗೇ ಮೊದಲು 'ಸೀಟು' ಕೊಡುತ್ತಾ ಇದ್ದಾರೆ."

"ನಿಮ್ಮ ಮಾತು ಒಂದು ರೀತಿಯಲ್ಲಿ ನಿಜ, ಅಮ್ಮಾ! ಕೆಲವರು ಕಲಿತು ಹೋಗುತ್ತಾರೇನೋ ನಿಜ. ಒಂದು S. S. L. C. ಯಾದರೆ ತನ್ನಷ್ಟಕ್ಕೇನೇ ಧೈರ್ಯಬರುತ್ತದೆ ಆದರೆ, ಹೆಚ್ಚಿನವರಿಗೆ ಶಾಲೆಗೆ ಹೋಗುವ ಧೈರ್ಯವೇ ಇಲ್ಲ. ಒಂದು ವೇಳೆ ಹೋಗುವ ಮನಸ್ಸಿದ್ದರೂ, ಆರ್ಥಿಕ ದೃಷ್ಟಿಯಿಂದ ನೋಡಿ ಹಿಂಜರಿಯುತ್ತಾರೆ. ಊಟಕ್ಕೇ ಇಲ್ಲದವರು, ಇನ್ನು ಬಟ್ಟೆ, ಸ್ಲೇಟು, ಪುಸ್ತಕಕ್ಕೆಲ್ಲಾ ಎಲ್ಲಿಂದ ತಂದಾರು? ನಮ್ಮದೇನೋ ಹಿರಿಯಾಸೆಯಿದೆ. ಒಂದು ಸಂಘವನ್ನು ಹೇಗೂ ಕಷ್ಟದಿಂದ ಸ್ಥಾಪಿಸಿದ್ದೇವೆ, ಇನ್ನೊಂದು ಫಂಡ್ ತೆರೆದು, ನಮ್ಮವರನ್ನು ವಿದ್ಯಾವಂತರನ್ನಾಗಿ ಮಾಡಬೇಕೆಂದು ಅವಶ್ಯವಿದ್ದಲ್ಲಿ ಧನಸಹಾಯ ಮಾಡಬೇಕೆಂದು ನಮ್ಮ ಉದ್ದೇಶ! ನಿಮ್ಮಂಥವರ ಬೆಂಬಲವಿದ್ದರೆ, ಅದು ನೆರವೇರುವುದಕ್ಕೆ ಏನೂ ಕಷ್ಟವಾಗಲಾರದು."

ಲಲಿತೆಯ ಮನಸ್ಸಿಗೆ ಈ ಮಾತು ಸ್ವಲ್ಪ ಹಿಡಿಯಿತು. ಆದರೂ, ಸ್ವಲ್ಪ ಹೊತ್ತು ಸುಮ್ಮನಿದ್ದು. "ಯಾವುದಕ್ಕೂ ನೋಡೋಣ" ಎಂದಳು.

"ಹಾಗಾದರೆ, ನಾನು ಬರುತ್ತೇನೆ." ಎಂದು ಕೃಷ್ಣಪ್ಪನು ಹೊರಟು ಹೋದನು.

ಈ ಸುದ್ದಿ ಹೇಗೋ ರಮಾನಂದಾಚಾರ್ಯರಿಗೆ ಗೊತ್ತಾಯಿತು. ಜ್ವರ ನೀಗಿ, ಕೆಲವು ದಿನಗಳಾಗಿದ್ದರೂ, ಇನ್ನೂ ಅವರಲ್ಲಿ ಸಾಕಷ್ಟು ಶಕ್ತಿ ಬಂದಿರಲಿಲ್ಲ. ಆದರೂ, ತಾವೇ ಖುದ್ದು ಮೋಟಾರ್‌ಕಾರಿನಲ್ಲಿ ಚಿತ್ತೈಸಿದರು.

"ಏನಮ್ಮ, ಆ ಹೊಲೆಯರಿಗೆ ಹಣಕೊಟ್ಟು, ನೀವೂ ಚಂಡಾಲರಾಗುತ್ತೀರೋ?" ಎಂಬುದೇ ಅವರ ಕಠೋರ ಮಾತು.

" ಏಕಾಗಬಾರದು ? "

" ನೋಡಿ; ಹೀಗೆ ಮಾಡಬೇಡಿ, ಒಳ್ಳೆಯದಕ್ಕೂ ಮಾಡಬೇಡಿ. ಏನು ಕುಷಾಲೇ ? ಪ್ರಳಯವಾದೀತು; ಇಡೀ ಮಂಗಳೂರಲ್ಲೇ ರಕ್ತದಹೊಳೆ ಹರಿದೀತು. ಛ್ಛೆ ! "

" ನಾನು ಯಾರಿಗೂ ಕೊಡುವುದಿಲ್ಲ ಆಚಾರ್ಯರೇ ! "

" ಹ್ಹೆ ! ಹ್ಹೆ ! ಹ್ಹೆ ! ನಾನು ಹೇಳಿದ್ದು ಕೇಳಿ ಹೆದರಿಬಿಟ್ಟಿರಾ ? ಇಲ್ಲ, ಇಲ್ಲ, ಎಲ್ಲಾ ನಮಗೇ ಕೊಟ್ಟುಬಿಡಿ. ಏನೂ ಆಗಲಾರದು. "

" ಅದಕ್ಕಲ್ಲ, ನಾನು ಇತ್ತೀಚೆಗೆ ಯಾರಿಗೂ ಕೊಡುವುದಿಲ್ಲ ಎಂದು ತೀರ್ಮಾನಿಸಿದ್ದೇನೆ ! " ಎಂದು ಬೇಕೆಂದೇ ಸುಳ್ಳೇ ಹೇಳಿದಳು.

" ಹಾಗಾದರೆ, ಹೂಂ, ಹೂಂ, ನಮ್ಮನ್ನು ಪರೀಕ್ಷಿಸಲಿಕ್ಕೆ ಇಷ್ಟೆಲ್ಲಾ ನಾಟಕ ಮಾಡಿದಯೋ ? "

" ನಿಜಕ್ಕೂ ಹೌದು; ಇದರಿಂದಾಗಿಯೇ ನನಗೆ ಗೊತ್ತಾಯಿತು, ನಿಮಗೆ ಕೊಟ್ಟರೆ, ಅದೆಷ್ಟು ಸದ್ವಿನಿಯೋಗವಾದೀತೆಂದು............'

ಆಚಾರ್ಯರಿಗಾದ ಅವಮಾನ, ಅವರ ಧ್ವನಿಯಲ್ಲಿ ಚಿಮ್ಮತೊಡಗಿತು. " ಛ್ಛೆ ! ಥೂತ್, ಥೂ ! ಬಾಯಿಮುಚ್ಚು ! ನೀನು ಹೆಂಗಸಾದುದಕ್ಕಾಯಿತು. ಇಲ್ಲವಾದರೆ ತಫರಾಕು ಕೊಟ್ಟು............"

ಆಚಾರ್ಯರಿಗೆ ಕೋಪದಿಂದ ಮುಂದೆ ಮಾತನಾಡುವುದಾಗಲಿಲ್ಲ. ಲಲಿತೆ, ಇನ್ನೂ ತನ್ನ ಹೇಳಿಕೆಯನ್ನು ಮುಂದುವರಿಸಿದಳು- ಆಚಾರ್ಯರಿಗೆ, ಅದನ್ನು ಕೇಳುವಷ್ಟು ತಾಳ್ಮೆಯುಳಿದಿರಲಿಲ್ಲ. ಅವರು ಆಗಲೇ ಅಲ್ಲಿಂದ ಹೊರಟುಬಿಟ್ಟಿದ್ದರು. ಕೋಪದಿಂದಾಗಿ, ಆ ಒಂದು ದಿನವಿಡೀ ಮೌನವ್ರತ ಧಾರಣೆಮಾಡಿದರು.

" ಹೂಂ, ಒಂದು ಮಲಾಮತ್ತು ಹೇಗೂ ಹೋಯಿತು. ಇನ್ನುಳಿದುದನ್ನು ನೋಡಬೇಕು. ಜಾತಿ–ಪಂಗಡ ಎಂಬ ಭೇದವಿಲ್ಲದೆ ಯಾವುದು ತನಗೆ ಸರಿಯಾಗಿ ಕಾಣುತ್ತದೋ, ಅದಕ್ಕೇ ಎಲ್ಲವನ್ನೂ ಕೊಡಬೇಕು. " ಎಂದು ನಿಷ್ಕರ್ಷಿಸಿದಳು ಲಲಿತೆ.

## ೧೧

ಸಮಯ ಹೀಗೆಯೇ ಕಳೆದುಹೋಯಿತು. ಭುಜಂಗನೀಗ ತಾಯಿಯ ಮಡಿಲನ್ನು ಬಿಟ್ಟು, ಶಾಲೆಯ ಮಡಿಲನ್ನು ಸೇರಿದ್ದನು. ಸ್ವಾಭಾವಿಕವಾಗಿ, ಮೊದಲು ಒಂದೆರಡುದಿನ ಥಂಡಿ ಹಿಡಿದುದರಿಂದ ಅವನನ್ನು ಶಾಲೆಗೆ ಕಳು ಹಿಸುವುದು ತುಂಬಾ ಪ್ರಯಾಸವಾಯಿತು. ಪೆಪ್ಪರಮೆಂಟ್, ಬಿಸ್ಕೀಟುಗಳಿಂದ ಪ್ರೇರಿಸಬೇಕಾಯಿತು. ಮತ್ತೆ ಕೆಲವು ದಿನಗಳಮೇಲೆ ಶಾಲೆಯ ವಾತಾ ವರಣಕ್ಕೆ ಮನಸೋತು, ಗಂಜಿಯೂಟ ತೀರಿಸಿಕೊಂಡು, ಚೀಲವೇರಿಸಿ ಕೊಂಡು, ಇನ್ನೂ ಒಂದು ಗಂಟೆಯ ಮೊದಲೇ ಅವನು ಶಾಲೆಯ ಕಡೆ ಗೋಡುತ್ತಿದ್ದನು. ಶಾಲೆಯಲ್ಲಿ ಸಹಜವಾಗಿಯೇ ಅವನ ಟೀಚರ್‌ರ ಮೃದು ಮಾತು, ತಿಂಡಿಗಳ ಪ್ರೇರಕ ಶಕ್ತಿಯಿತ್ತು.

ಭುಜಂಗನು ಶಾಲೆಗೆ ತೆರಳಿದನಂತರ, ಲಲಿತೆಗೆ ಹೊತ್ತುಗಳೆಯುವುದು ಬಹಳ ಕಷ್ಟವಾಯಿತು. ಭುಜಂಗನು ಹೋದ ಒಂದು ಗಂಟೆಯೊಳಗಾಗಿಯೇ ಅವಳ ಕೆಲಸ, ಕಾರ್ಯಕಲಾಪಗಳೆಲ್ಲಾ ಮುಗಿಯುವುವು. ಅಲ್ಲಿಂದ ಜಗಲಿಯಲ್ಲಿ ಕುಳಿತು ನುಸಿ ಓಡಿಸುವ ಕೆಲಸ; ಅವಳ ನೆರೆಮನೆಯ ಹೆಂಗಸ ರೆಲ್ಲಾ ನಾಲ್ಕಾರು ಮಕ್ಕಳ ಜನನಿಯರಾಗಿದ್ದುದರಿಂದ, ಅವರಿಗೆಲ್ಲಾ ರಾತ್ರಿ ಮಲಗುವ ತನಕ ಉಸಿರಾಡಿಸಲು ಕೂಡಾ ಅವಕಾಶವಿರಲಿಲ್ಲ. ಅಂತಿರಲು, ಅವರೆಲ್ಲಾ ಇವಳೊಡನೆ ಹೇಗೆ ಪಟ್ಟಾಂಗಕ್ಕೆ ಬಂದಾರು? ಒಂದು ವೇಳೆ ಬಂದರೂ, ಅವರ ಮಾತುಕಥೆಯೆಲ್ಲಾ ಏನು? 'ಫೇಶನ್' ಮಹಿಳೆಯರ ಟೀಕೆ; ಗಂಡಸರ ಅಣಕ; 'ಅ' ಧರ್ಮ ಮಠದ ಹಾಗೂ, ಅದರ ಸ್ವಾಮಿ ಪಾದಂಗಳ 'ತಾರೀಫು'; ಸೀತಾರಾಮಾಯಣ ಇತ್ಯಾದಿ. ಇಂಥ ವಿಷಯ ಗಳನ್ನು ಕೇಳುವುದರಲ್ಲೆಲ್ಲಾ ಲಲಿತೆಗೆ ಆಸಕ್ತಿಯಿರಲಿಲ್ಲ; ಉಲ್ಲಾಸವಿರಲಿಲ್ಲ. ಭುಜಂಗ ಬರುವವರೆಗೂ, ಆಕಾಶವನ್ನು ನೋಡುತ್ತಲೇ ಅವಳು ಸಮಯ ಕಳೆಯುವಳು.

ಭುಜಂಗ ಬರುವಾಗ ಸಾಧಾರಣವಾಗಿ ಗಡಿಯಾರದ ಮುಳ್ಳುಗಳು ಒಂದು-ಹನ್ನೆರಡರ ಮೇಲೆ ಮೂವತ್ತು ಡಿಗ್ರಿಯಲ್ಲಿ ನಿಲ್ಲುತ್ತಿದ್ದವು. ಅವನು ಬರುವುದೇ 'ರಾಯಲ್ ಮೆಯಿಲ್ ಸ್ಪೀಡಿ'ನಲ್ಲಿ. ಬಂದುದೇ, ಊಟ ಮಾಡಲಿಕ್ಕಾಯಿತು, ಹೋಗಲಿಕ್ಕಾಯಿತು. ತಾಯಿಯ ಬಳಿ ಕುಳಿತು,

ಅವಳನ್ನು ಸಂತೋಷ ಪಡಿಸಲು, ಅವನಿಗೆಲ್ಲಿದೆ ಅವಕಾಶ? ಲಲಿತೆ, ಅವನು ಹೋದಮೇಲೆ, ತಾನೊಬ್ಬಂಟಿಗಳಾಗಿ ಊಟ ತೀರಿಸಿ ಬಂದು ಪವಡಿಸ ಬೇಕು. ನಿದ್ರೆಯೊಂದು ಈ ಸಮಯದಲ್ಲಿ ಬಹಳ ಉಪಕಾರಮಾಡುತ್ತಿತ್ತು. ಸಾಧಾರಣ ಒಂದೂವರೆ ಗಂಟೆಗೆ ಮಲಗಿದಳೆಂದರೆ, ಅದರ ಇಮ್ಮಡಿಯಷ್ಟು ಹೊತ್ತಾಗುವತನಕ, ಗಾಢವಾದ ನಿದ್ರೆ!

ಮೂರು ಗಂಟೆಗೆ ಎದ್ದು ಒಲೆಹಚ್ಚಿದಳೆಂದರೆ, ಒಬ್ಬೊಬ್ಬರಾಗಿ ಫಂಡಿನ 'ಭಂಡ'ರು ಕಾಣಿಸಿಕೊಂಡು ತಮ್ಮ ಕಾಟಗಳನ್ನು ಪ್ರಾರಂಭಿಸುವರು; ಅವರ ಚಮತ್ಕಾರವೇನು? ತಮಗೊದಗಿರುವ 'ತಕಲೀಫು'ಗಳ ವರ್ಣನೆಯೇನು? 'ತಾರೀಫೇ'ನು? ಲಲಿತೆ, ಒಬ್ಬೊಬ್ಬರನ್ನಾಗಿಯೇ,'ನೋಡೋಣ,ನೋಡೋಣ' ಎಂದು ಹಿಂದೆ ಕಳುಹಿಸುವಾಗಲೇ, ಗಡಿಯಾರದಲ್ಲಿ ಐದು ಬಡಿದು, ಭುಜಂಗನು ಕುಣಿಯುತ್ತಾ, ಕುಣಿಯುತ್ತಾ ಮನೆಗೆ ಬರುವನು. ಇಬ್ಬರಿಗೂ ಕಾಫಿ-ಪಾರ್ಟಿಯಾಗುವುದು. ಈಗಾದರೆ, ಲಲಿತೆಗೆ ಮಿತಿಮೀರಿದ ಸಂತಸ! ಆದರೆ, ಸೂರ್ಯನಿಗೆ ಅವಳಮೇಲೆ ಕರುಣೆಯಿರುವುದಿಲ್ಲ; ಕತ್ತಲು ಹೆಚ್ಚಾಗಿ ಭುಜಂಗನಿಗೆ ತೂಕಡಿಕೆ ಪ್ರಾರಂಭವಾಗುವುದು. ತಾಯಿಯ ಜೋಗುಳ ವಿಲ್ಲದೆ, ಇನ್ನೂ ರಾತ್ರಿಯ ಭೋಜನ ಮುಗಿಯುವುದಕ್ಕೆ ಮುಂಚೆಯೇ, ತೆಂಗಿನಮರದ ಸೋಗೆಗಳ ಕುಣಿತಕ್ಕೂ, ಗಾಳಿಯ ಶೀಟಕ್ಕೂ, ಮೈಮರೆತು ನಿದ್ರಿಸಿಬಿಡುವನು. ಆದರೆ, ಲಲಿತೆಗೆ ಹತ್ತುಗಂಟೆಯಾಗದೆ, ನಿದ್ರೆ ಬರುತ್ತಿರಲಿಲ್ಲ. ನಿದ್ರೆ ಬರುವತನಕವೂ ಹಾಸಿಗೆಯಲ್ಲಿ ಹೊರಳಿಕೊಂಡು, ಯೋಚನೆಯಿಂದಲೇ, ಅವಳು ಸಮಯ ಕಳೆಯುತ್ತಿದ್ದಳು. ಇದಿಷ್ಟು ಅವಳ ಸಾಮಾನ್ಯ ದಿನಚರಿಯಾಯಿತು.

ಒಂದೊಂದು ದಿನ ಸಾಯಂಕಾಲ ಕಾಫಿ-ತಿಂಡಿಯಾದಮೇಲೆ, ಭುಜಂಗನು, 'ಹಿಮಾಲಯಕೆ ಹೋಗುವ' ಎಂದು ಹಟ ಮಾಡುವುದಿತ್ತು. ಆಗ, ಲಲಿತೆ ಅವನನ್ನು ಕರೆದುಕೊಂಡು ಕದ್ರಿಗಿರಿಯನ್ನೇರಬೇಕಾಗುತ್ತಿತ್ತು. ಆಗ, ಭುಜಂಗನ ಉತ್ಸಾಹವೇ ಉತ್ಸಾಹ! ಓಡುತ್ತಿರುವ ಅವನ ಬೆಂಬತ್ತಲು ಲಲಿತೆಗೆ ಬಹಳ ಪ್ರಯಾಸವಾಗುತ್ತಿತ್ತು. ಲಲಿತೆಯಂತೆ, ಮೆಲ್ಲನೆ ಹೋಗುತ್ತಾ, ಸುತ್ತಣ ಬಯಲ ಸೌಂದರ್ಯವನ್ನು ನಿರುಕಿಸುವಷ್ಟು ಅವನಿಗೆ ತಾಳ್ಮೆಯಿರಲಿಲ್ಲ. ಅವನ ಓಟ ನಿಲ್ಲಬೇಕೆಂದರೆ, ಕದ್ರಿಗಿರಿಯ ತಳಕ್ಕೆ ಬರಬೇಕು. ಆ ಕಲ್ಲು ದಾರಿಯನ್ನು ಏರುವಾಗ ಮಾತ್ರ, ಇನ್ನೂ ಚಿಕ್ಕವ

ನಾದುದರಿಂದ ಅವನ ತೀವ್ರತೆಗೆ, ಕಡಿವಾಣ ಹಾಕಿದಂತಾಗುತ್ತಿತ್ತು. ಲಲಿತೆಯೇ, ಆಗ, ಅವನನ್ನು ಎತ್ತಿಕೊಂಡು ಮೇಲೇರಬೇಕಾಗುತ್ತಿತ್ತು. ಎಷ್ಟು ಬೇಗನೆ ಏರಿದರೂ, ತಾಯಿಯನ್ನು, 'ಬೇಗ, ಬೇಗ' ಎಂದು ಅವಸರ ಪಡಿಸಿದಷ್ಟೂ ಸಾಲದು ಭುಜಂಗನಿಗೆ.

ಮೇಲೇರಿ, ಸಮಪಟ್ಟಾದ ಜಾಗದಲ್ಲಿ ಏದುತ್ತಾ ನಿಲ್ಲುವಳು. ಭುಜಂಗನು ತಾನಾಗಿಯೇ ತಾಯಿಯ ಸೊಂಟದಿಂದ ಕೆಳಕ್ಕೆ ಜಾರುವನು. ಸಾಲ್ದೆಸೆಯಲ್ಲೂ ಆಳವಾದ ಕಂದರ; ಒಂದೆಡೆಯಲ್ಲಿ ಬಹು ದೂರಗಳವರೆಗೂ, ಬಯಲುಗಳ ಮೇಳ; ಆಳೆತ್ತರಕ್ಕೆ ಬೆಳೆದ ಹುಲ್ಲುಗಳು ಸಮೃದ್ಧಿಯಾಗಿ ಕಣ್ಣಿಗೆ ಸೊಗಸನ್ನುಂಟು ಮಾಡುತ್ತಿದ್ದವು. ಅಲ್ಲಲ್ಲಿ, ನಡುನಡುವೆ, ಮೇಯುತ್ತಿರುವ ಕಾಲ್ನಡೆಗಳು ಹಸುರು ತಿವಾಸಿಯಮೇಲೆ, ಕರಿಚುಕ್ಕಿಗಳಂತೆ ಕಾಣಬರುವ ಸೊಬಗೇ ಬೇರೆ! ಬಹುದೂರದವರೆಗೂ, ಇದೇ ಪ್ರಕಾರ ಏಕರೀತಿಯಾದ ನೋಟ! ಅಲ್ಲಲ್ಲಿ, ಕಾಳ್ಗಿಚ್ಚು ದಹಿಸಿ, ಕಕ್ರಗಾದ ಭಾಗವೂ ಈ ಸೊಗಸಿನಲ್ಲೊಂದು ಸೊಗಸು! ಮತ್ತೊಂದು ದಿಕ್ಕಿನಲ್ಲಿ ಬಾಳೆಗಳ ಗುಂಪು! ಪಕ್ವವಾಗಿ ನೇತಾಡಿಕೊಂಡಿರುವ ಬಾಳೆಗೊನೆಗಳನ್ನು ನೋಡಿ, ಭುಜಂಗನ ಬಾಯಿಯಲ್ಲಿ ನೀರೂರುವುದು, ಅಲ್ಲೇ ಹರಿಯುವ ಝರಿಯನ್ನು ನೋಡಿ ನಕ್ಕಾಗ, ಅದರ ನಿರ್ಮಲೋದಕದಂತೆ, ಅವನ ತಿಳಿನಗುವೂ ಇಡೀ ಗಿರಿಯನ್ನಾವರಿಸುವುದು. ಅಲ್ಲಿಂದ ದೃಷ್ಟಿ ನೆಟ್ಟಗೆ ಹರಿದರೆ, ಸಮುದ್ರದ ಏಳು–ಬೀಳುವ ತೆರೆಗಳು ಹತ್ತಿರದಲ್ಲಿದ್ದಂತೆ ಕಾಣುವುವು. ಅದನ್ನು ನೋಡಿ, 'ಅಬ್ಬಾ! ನಮ್ಮ ಸಮುದ್ರರಾಜನು ಇಷ್ಟೂ ಮೇಲೆ ಬಂದುಬಿಟ್ಟನೇ' ಎಂದು ಭುಜಂಗನಿಗೆ ಆಶ್ಚರ್ಯ ಸಮುದ್ರವನ್ನು ನೋಡಿ, ಸಾಕಾದರೆ, ಆಕಾಶವು ತನ್ನ ಸೊಗಸನ್ನು ಪ್ರದರ್ಶಿಸಲು ಕಾದಿರುವುದು. ನೀಲಾಕಾಶದಲ್ಲಿ ಬೆಳ್ಳಿಯಂತೆ ಶೋಭಿಸುವ ಮೋಡಗಳ ಗುಂಪು, ಮಂದಗಮನೆಯರ ರೀತಿಯಿಂದ, ಮೆಲ್ಲಮೆಲ್ಲನೆ ಸಾಗಿಹೋಗುವ ಬೆಡಗು; ತೆಂಗಿನ ಮರಗಳ ಸೋಗೆಗಳ ಬುಡದಿಂದ ಅದು ಸಾಗುವಾಗ, ಮುಗಿಲಶ್ರೀಯ ಸಾನ್ನಿಧ್ಯದಿಂದ, ತನು ಪುಲಕಿತವಾಗಿ, ಹರ್ಷದಿಂದ, ಕಿಳಕಿಳನೆ ನಕ್ಕು, ಕುಣಿದು, ಕೆಳಕ್ಕೆ ಬಗ್ಗಿ, ಮುದ್ದಿಸಿ ಬೀಳ್ಕೊಡುವ ನೋಟ; ಭುಜಂಗನ ಮನೋಭೂಮಿಯಲ್ಲಿ ಆನಂದದ ಹೊನಲನ್ನೇ ಹರಿಯಿಸುತ್ತಿತ್ತು. ತದೇಕ ಚಿತ್ತನಾಗಿ, ಅವನು ಬಾಂದೇವಿಯ ಸೌಂದರ್ಯವನ್ನು ನಿರುಕಿಸುತ್ತಿರುವಾಗಲೇ, ವೃಕ್ಷಸಂದೋಹವು, ಕಲಕಲ ರವದಿಂದ ಕುಣಿದು, 'ನಮ್ಮನ್ನು

ನೋಡು' ಎನ್ನುವಂತೆ, ಅವನ ಧ್ಯಾನವನ್ನು ಭಂಗಮಾಡುತ್ತಿದ್ದವು. ಭುಜಂಗನು ಆ ಮರಗಳ ಬಿನ್ನಹವನ್ನು ಮನ್ನಿಸಿ, ಅವುಗಳೆಡೆಗೆ ನೋಡುವನು. ಮರದಿಂದ, ಮರಕ್ಕೆ ಜಿಗಿಯುತ್ತಾ ಹಲವು ರೀತಿಯ ಸ್ವರಗಳನ್ನು ಹೊರಡಿಸುವ ಹಲವಾರು ಹಕ್ಕಿಗಳು ಅವನ ಕಣ್ಮುಂದೆ! ಭುಜಂಗನ ಹೃದಯದಲ್ಲಿ ಆನಂದದ ಬುಗ್ಗೆ ಚಿಮ್ಮಿ, ಚಿಗಿಯುವುದು!

ಅಲ್ಲಿಂದ, ಅವನ ದೃಷ್ಟಿ ಬಹು ದೂರಕ್ಕೆ ಹರಿಯುವುದು. ಮರ, ಮನೆ, ಬಯಲು, ಗುಡ್ಡ, ಬೆಟ್ಟಗಳನ್ನು ಹಾದು ದೂರದಲ್ಲಿ, ಅಂತರಿಕ್ಷಕ್ಕೆ ಸಮಾನನಾಗಿ, ಗಂಭೀರವಾಗಿ ಮುಖವೆತ್ತಿ, ನಸುನೀಲ ಲೇಪನದಿಂದ ಶೋಭಿಸುವ ಕರಿಗಿರಿಯು ಕಾಣುವುದು.

"ಅದೇನಮ್ಮಾ, ಅದೇ ಹಿಮಾಲಯವೋ?"

"ಅಲ್ಲ, ಮಗೂ! ಅದಕ್ಕೆ ಕುದುರೆಮುಖ ಶಿಖರವೆನ್ನುತ್ತಾರೆ."

"ಹೋ! ಅದೇ ಕುದುರೆಯೋ? ಅಮ್ಮಾ! ನಾವು ಅಲ್ಲಿಗೆ ಹೋಗೋಣ. ನನಗೆ ಆ ಕುದುರೆಯಮೇಲೆ ಕುಳಿತು ಸವಾರಿ ಮಾಡಬೇಕು. ಅದರ ಬಾಲವನ್ನು ಹಿಡಿದು ಆಡಬೇಕು." ಎನ್ನುತ್ತಿದ್ದ.

"ನೋಡೋಣ; ನನಗೂ, ನಿನಗೂ ಆ ಪುಣ್ಯವಿದ್ದರೆ!"

ಅಲ್ಲಿಂದ ಆ ಶಿಖರವು ಬಹು ಮನೋಹರವಾಗಿ ಕಾಣುತ್ತಿತ್ತು. ಕುದುರೆಯು ಸ್ರವಿಸಿದ ಲಾಲಾಜಲದಂತೆ, ಆ ಗಿರಿಶಿಖರದಿಂದ ಮಾಲೆ, ಮಾಲೆಯಾಗಿ ಉರುಳಿಹೋದ ಮೋಡಗಳು ಗಾಳಿಗೆ, ಅದರ ಪುಚ್ಛದಂತೆ ನಲಿಯುತ್ತಿರುವ ಮರಗಿಡಗಳು! ಭುಜಂಗನಿಗೆ ಆ ಸೊಗಸನ್ನು ನೋಡಿದಷ್ಟೂ ಸಾಲದು. ಲಲಿತೆಯೇ ಬಲ್ಮೆಯಿಂದ, ಅವನನ್ನು ಮುಂದಕ್ಕೊಯ್ಯಬೇಕಾಗುತ್ತಿತ್ತು. ಆದರೆ, ಭುಜಂಗನು ಸುಮ್ಮನೆ ಹೋಗುವವನಲ್ಲ. ಕುದುರೆ ಮುಖದ ಚಿತ್ರವನ್ನು, ಸಂಪೂರ್ಣವಾಗಿ, ಚೆನ್ನಾಗಿ, ಬಣ್ಣಿಸಿ ಅವನಿಗೆ ಹೇಳಬೇಕು.

ಅಲ್ಲಿಂದ ಅವರು ಮೇಲೇರಲಿರುವುದು ಕಲ್ಲಿನ ಕಾಲ್ದಾರಿ; ಭುಜಂಗನ ಕಾಲಿಗೆ ಪಾದರಕ್ಷೆಗಳಿಲ್ಲದಿದ್ದುದರಿಂದ ಸಹಜವಾಗಿಯೇ ನಡೆಯಲು ಕಷ್ಟವಾಗುತ್ತಿತ್ತು. ಲಲಿತೆಯೇ ಅವನನ್ನೆತ್ತಿಕೊಂಡು ಮುಂದೆರಳಬೇಕಾಗುತ್ತಿತ್ತು. ಅವರ ಹಾದಿಯ ಇಕ್ಕೆಲಗಳಲ್ಲೂ ಹರಡಿಕೊಂಡ, ಶಿಲಾಪಾದ, ವಿಗ್ರಹಗಳನ್ನು ತೋರಿಸಿ ಲಲಿತೆ, "ನೋಡಿದೆಯಾ, ಭುಜ?" ಎಂದು ಕೇಳುತ್ತಿದ್ದಳು.

"ಏನಮ್ಮ ಅದು?"

" ಅದುವೇ ? ಅದು ಪರಶುರಾಮನ ಪಾದ ! "

" ಪರಶುರಾಮನೆಂದರೆ ಯಾರು ? "

ಅಲ್ಲಿಂದ ಲಲಿತೆ, ಪರಶುರಾಮನ ಕತೆಗೆ ತೊಡಗಬೇಕು. ಜಮದಗ್ನಿ–ಇವನ ಸಿಟ್ಟು, ರೇಣುಕೆಯ ಪಾತಿವ್ರತ್ಯ (?) ' ಕಾರ್ತವೀರ್ಯನ ಮೋಸ–ಎಲ್ಲವೂ ಅದರೊಂದಿಗೆ ಬರಬೇಕು, "ಭುಜ! ಇಲ್ಲಿಂದಲೇ ನಿಂತು, ಪರಶುರಾಮನು ಭೋರಿಡುತ್ತಿದ್ದ ಕಡಲಕಡೆಗೆ ಕೊಡಲಿಯನ್ನು ಬಿಸಾಡಿದನಂತೆ. ಆಗ ಅಷ್ಟು ದೂರಕ್ಕೆ ಸಮುದ್ರ ಹಿಂಜರಿಯಿತಂತೆ. " ಎಂದು, ಆ ಕೊಡಲಿ ಯೆಸೆಯುವಾಗ ನಿಂತ ಸ್ಥಳವನ್ನು ತೋರಿಸಬೇಕು. ಹೀಗೆ, ಕದ್ರಿಗಿರಿಯ ವಿಹಾರವು, ಭುಜಂಗನಿಗೆ ಒಂದು ಶೈಕ್ಷಣಿಕ ಪ್ರವಾಸವೂ ಆಗುತ್ತಿತ್ತು.

ಅಷ್ಟರಲ್ಲೇ ಜೋಗಿಯರಸನ ಮನೆ ಬರುವುದು. ಅಲ್ಲೇ ಇದ್ದ ದೊಡ್ಡ ನಾಯಿಯೊಂದು ಇವರನ್ನು ಕಂಡು ಬಗುಳುವುದು. ಆದರೆ, ನಾಯಿಯನ್ನು ಬಲವಾದ ಸರಪಣಿಯಿಂದ ಕಟ್ಟಿಹಾಕಿದ್ದುದರಿಂದ ಇಬ್ಬರೂ ಅಂಜದೆ, ಒಳಗೈದುವರು. ಅಲ್ಲಿಯೂ ಕೈಕಾಲು ಮುರಿದ, ವಿಗ್ರಹಗಳನ್ನು ಗತಕಾಲದ ವೈಭವದ ಕುರುಹುಗಳನ್ನು ಕಂಡು ಹಿಂದಿರುಗುವರು.

ಅದರ ಎಡಪಕ್ಕದಲ್ಲೇ, ಐದಾರು ಅಡಿ ಎತ್ತರದ ಒಂದು ಚಿಕ್ಕ ಗೋಡೆಯನ್ನು ಹತ್ತಿ ಇಳಿದರೆ, ಒಂದು ವಿಶಾಲವಾದ ಮೈದಾನು. ಎಲ್ಲೆಲ್ಲೂ ಎಳಹಸುರಿನ ಶಯ್ಯೆ; ಅಲ್ಲಿಂದ ನಗರದ ಒಂದು ಭಾಗವೂ ದೃಗ್ಗೋಚರಿಸುತ್ತಿತ್ತು. ಬೀದಿಯ ಜನಸಂಚಾರವೂ, ವಾಹನಗಳ ಬಿರುಸಾದ ಓಟವೂ ಸ್ಪಷ್ಟವಾಗಿ ಕಾಣುವುದು. ಲಲಿತೆಯೂ, ಭುಜಂಗನು ಮುಂದರಿದು ಸಾಗುವರು. ಅವರ ಹಾದಿಯಲ್ಲೇ ಭಾವಿಯೊಂದು ಅವರನ್ನು ನಿಲ್ಲಿಸಿಬಿಡುವುದು.

"ಭುಜಂಗ! ಇದೇ ಸೀತಾಭಾವಿ. ಸೀತೆ, ಕೊನೆಗಾಲದಲ್ಲಿ ಇದೇ ಭಾವಿಯೊಳಗೆ ಇಳಿದು, ಭೂಮಿಯನ್ನು ಸೇರಿದಳಂತೆ!' ಎಂದು ಲಲಿತೆ ಭುಜಂಗನಿಗೆ ಹೇಳುವಳು.

ಭುಜಂಗನು ಮೆಲ್ಲನೆ ಬಗ್ಗಿ ಭಾವಿಯನ್ನು ನೋಡುವನು. ಅವನಿಗೆ ಕಣ್ಣು ಕತ್ತಲೆ ಬರುವುದು. "ಅಬ್ಬಾ! ಭಾವಿಯು ಆಳವೇ!" ಎನ್ನುವನು ಆಶ್ಚರ್ಯದಿಂದ! ಅಲ್ಲಿಂದ ಪಾಂಡವರ ಗುಹೆಗೆ ಹೋಗುವರು. ಇಲ್ಲಿಯೂ ಭುಜಂಗನಿಗೆ ಲಲಿತೆಯು ಸ್ವಲ್ಪ ವರ್ಣನೆ ಬೇಕಾಗುತ್ತಿತ್ತು. ಪುನಃ ಅದೇ

ಮೈದಾನಿಗೆ ಬರುವರು. ಭ ಜಂಗನು, 'ಅಮ್ಮಾ! ಇಷ್ಟು ಬೇಗನೆ ಮನೆಗೆ ಹೋಗಿ ಏನುಮಾಡುವುದು? ಸ್ವಲ್ಪ ಕುಳಿತುಕೊಳ್ಳೋಣ.'' ಎಂದು ತಾಯಿ ಯನ್ನು ಒತ್ತಾಯಪಡಿಸುವನು. ಲಲಿತೆಯೂ, ''ಒಲ್ಲೆ.'' ಎನ್ನಳು.

ಬಿಸಿಲು ಕಡಮೆಯಾಗುತ್ತಾ ಬಂದಂತೆ, ಮೈದಾನಿಗೆ ಬರುವ ಜನರ ಸಂಖ್ಯೆಯೂ ಹೆಚ್ಚುವುದು. ಕಾಲೇಜಿನ ಕೆಲವು ಹುಡುಗರು ಗಾಳಿಗೆ ಮೈಯೊಡ್ಡಿ ಓದುತ್ತಾ ಕುಳಿತುಕೊಳ್ಳುವರು. ಗುಪ್ತವಾಗಿ ಸಿಗರೇಟು ಸೇದುವ ಮಹ ತ್ಕಾರ್ಯ (?) ಕ್ಕಾಗಿಯೇ ಕೆಲವು ಪೋಲಿಗಳ ತಂಡ ನೆರೆಯುವುದು. ಇನ್ನು ಕೆಲವರು ಮರಗಳ ಸಂದಿನ ಕಣ್ಣುಮುಚ್ಚಾಲೆಯಲ್ಲಿ ಜುಗಾರಾಟಕ್ಕೆ ತೊಡಗುವರು.

ಮೆಲ್ಲಮೆಲ್ಲನೆ ಕೆಲವು ದಂಪತಿಗಳೂ ಬರತೊಡಗುವರು. ಮೈಗೆ ಮೈ ತಾಗಿಸಿ, ಅವರು ನಡೆಯುವ ರೀತಿಯನ್ನು ನೋಡಿಯೇ ಲಲಿತೆಯ ಮನಸ್ಸಿ ನಲ್ಲಿ ಏನೇನೋ ಆಗುವುದು. ಅವರ ಹಿಂದಿನಿಂದಲೇ ಭುಜಂಗನಂಥ ಕೆಲವು 'ಪಾಪ'ಗಳೂ ಓಡೋಡಿ ಬರುವುವು. ಅವುಗಳನ್ನು ನೋಡಿ ಲಲಿತೆಯ ಮನಸ್ಸು ಭುಜಂಗನನ್ನು ನೆನೆಯುವುದು.

ಇನ್ನು ಒಂದು ದಿಕ್ಕಿನಲ್ಲಿ ಹಂದಿಗಳಂತೆ ಮೈಕೊಬ್ಬಿದ ತರುಣಿಯರ ಹಿಂಡು ಕಂಡರೆ, ಅದರ ವಿರುದ್ಧ ದಿಕ್ಕಿನಲ್ಲಿ, ಅವುಗಳ ಬೇಟೆಗೆ ಸಿದ್ಧರಾದ ಬೇಟೆಗಾರರಂತೆ ತರುಣರ ಗುಂಪೂ ಕಾಣುವುದು. ಅವರ ಎಸೆಯುವ ಕಣ್ಣಂ ಚಿನ ಬಾಣಗಳೇನು ? ಅದಕ್ಕೆ ಅವರು ಮರುಳಾಗುವುದೇನು ? ಅಶ್ಲೀಲ, ಹೊಲಸು ಮಾತುಗಳೇನು ? ಆಹಾಹಾಹಾ ! ಲಲಿತೆಗೆ ಇವುಗಳನ್ನೆಲ್ಲಾ ನೋಡಿ ಅಸಹ್ಯವಾಗುವುದು; ಓಕರಿಕೆ ಬರುವುದು. ಒಂದು ಪಾಲು ಅಸಹ್ಯ ತರುಣರ ಮೇಲಾದರೆ, ಇನ್ನೆರಡು ಪಾಲು ಆ ತರುಣಿಯರ ಮೇಲೆ! ಈ 'ಬಾಜಾರಿ'ಯ ರಿಂದಾಗಿಯೇ ಅಲ್ಲವೇ, ಹುಡುಗರು ಯೌವನದೆಸೆಗೆ ಕಾಲಿಟ್ಟ ಕೂಡಲೇ ಹಾಳಾಗುವುದು ? ದುಡ್ಡಿಗೋಸ್ಕರ, ಏನೂ ಮಾಡುವುದೇ? ಈ ಪತಿತೆಯ ರಿಂದಾಗಿ, ಎಷ್ಟು ಪತಿವ್ರತೆಯರ ಬಾಳು ಹಾಳಾಗಿದೆ, ಎಂಬುದು ಇವರಿಗೆ ಗೊತ್ತೇ ಎಂದು ತನ್ನನ್ನೇ ಅನ್ವಯಿಸಿಕೊಂಡು ಕೇಳುತ್ತಿದ್ದಳು.

ಇವಳು ಇದೇ ಆಲೋಚನೆಯಲ್ಲಿ ತನ್ಮಯಳಾಗಿರುವಾಗಲೇ ಇವಳ ಗೆಳತಿಯರ ಗುಂಪೊಂದು ಬಂದು ಇವುಗಳನ್ನು ಸುತ್ತುಗಟ್ಟಿ ಬಿಡುವುದು. ಉಸಿರಾಡಿಸಲೂ ಇಲ್ಲದಂತೆ ಮಾತುಕಥೆಗಳು !

'' ಯಾರು ?–ಲಲಿತಮ್ಮ ! ಹೋ ! ಹೋ, ಹೋ ! ಬಹಳ ಅಪರೂಪ !

ಅಪರೂಪ!" ಎಂದು ಒಬ್ಬಳೆಂದರೆ, ಇನ್ನೊಬ್ಬಳು ಅವಳ ಮಾತು ಮುಗಿಯುವುದಕ್ಕೆ ಮುಂಚೆಯೇ, "ಇಲ್ಲಿಗೆ ಬಂದಿರಾ?" ಎಂದು ಕಣ್ಣಿಲ್ಲದವಳಂತೆ ಕೇಳುವಳು. ಲಲಿತೆ ಯಾವುದಕ್ಕೂ ಸುಮ್ಮನಿದ್ದು ಬಿಡುವಳು.

"ಏನಮ್ಮ! ಮೂಕಿಯಹಾಗೆ ಮಾಡುತ್ತೀರಲ್ಲೇ?"

"ಛೀ! ಛಿ! ಅವರು ಈಗ ಹಾಗೆಲ್ಲಾ ಮಾತನಾಡಲಿಕ್ಕಿಲ್ಲ. ಅವರು ಸದ್ಯ ರಾಜಾರಾಮರಾಯರ ಗಾಢ ಯೋಚನೆಯಲ್ಲಿದ್ದಾರೆ." ಎಂದೊಬ್ಬಳ ಮಾತು. ಜೊತೆಗೆ ನಗು!

ಕೂಡಲೇ ಇನ್ನೊಬ್ಬಳೆಂದಳು: "ನೋಡಿ! ಅದೇ ನಮ್ಮ ಹೆಂಗಸರಿಗೆ ತಲೆಯಿಲ್ಲ. ಇದೆ; ಇದ್ದರೂ ಉಪಯೋಗಿಸಿಕೊಳ್ಳಲಿಕ್ಕಿಲ್ಲ. ಗಂಡಸರಿಗೆಲ್ಲಾ ಹತ್ತು ಸೂಳೆ! ಮೇಲೆ ಇಪ್ಪತ್ತು ಹೆಂಡತಿ! ಆದರೆ ನಮಗೆ?—ಯಾರೂ ಕೇಳುವವರಿಲ್ಲಾಂತಲೋ? ಅದಕ್ಕೇ ನಾನನ್ನುವುದು ಮಿಸ್ ಲಲಿತಾ ಬಾಯಿ! ನೀವು ಅವರನ್ನು ಡ್ಯಾವೊರ್ಸ್ ಮಾಡಿ, ಹೊಸದೊಂದು ರಜಿಸ್ಟರ್ಡ್ ಮೇರೆಜ್ ಆಗಿ, ಸುಖವಾಗಿ ಇದ್ದುಬಿಡಿ, ನೋಡೋಣ. ಈ ತಂಟೆ-ತಕರಾರೇ ಬೇಡ! ಸಮಾರಂಭ ನಮ್ಮ United Women's National Leagueನ Premises ನಲ್ಲೇ ಜರಗಿಬಿಡಲಿ! ಹ್ಞೆ?"

"ಮಿಸ್ ಲಲಿತಮ್ಮಾ! ನೀವೇನೂ ಬೇಜಾರು ಮಾಡಬಾರದು. ನನ್ನಾಣೆಯಿದೆ. ಮಿ! ರಾಯರು ನಿಮ್ಮನ್ನು ಬಿಟ್ಟುಹೋಗಲು, ನಿಮ್ಮಲ್ಲಿಯ ಕೊರತೆಯಾಗಲೀ, ಕುರೂಪವಾಗಲೀ ಕಾರಣವಲ್ಲ. ಒಳ್ಳೆಯವರು ಅಂಥ ಕಾರಣಗಳಿಗಾಗಿ ಬಿಟ್ಟುಬಿಡುವುದೂ ಇಲ್ಲ. ಈಗ ನೋಡಿ, ನಾನು ಇಂಥಾ ಶೂರ್ಪನಖಿ! ನನ್ನ 'ಅವರೋ' ಅಂಥಾ ಸುಂದರ ಮೈರಾವಣ! ಆದರೆ, ಅವರು 'ನನ್ನನ್ನು ಬಿಟ್ಟುಹೋಗುತ್ತಾರೆಂದು ಮಾಡಿದ್ದೀರಾ? ಥೂ! ನನಗೆ ಸ್ನೋ, ಪೌಡರ್ ತಂದುಕೊಡುತ್ತಾರೆ, ಸ್ವಲ್ಪ ಚಂದ ಮಾಡಿಕೊಳ್ಳಲು. ಆಫೀಸ್ ಬಿಟ್ಟಕೂಡಲೇ ಮನೆಗೇ ಬರುತ್ತಾರೆ. ಅಷ್ಟು ಪ್ರೀತಿಯಮ್ಮಾ, ಪ್ರೀತಿ. ನನ್ನ ಮೇಲೆ! ಹಾಗಿರಬೇಕು. ನಮ್ಮ 'ಎಶೋದ' ಇಲ್ಲವೇ? ನೀವೇ ನೋಡಿದ್ದೀರಲ್ಲಾ ಎಂಥಾ ಸುರಸುಂದರಿಯೆಂಬುದನ್ನು. ಅವಳ ಆ ನಾಚಿಕೆಗೆಟ್ಟ ಗಂಡ, ಮೂರೂ ಹೊತ್ತೂ ಇರುವುದೇ, ಥೂ, ಥೂ, ಥೂ, ಆ ಅಮ್ಮಣ್ಣಿಸಾನಿಯ ಮನೆಯಲ್ಲಿ. ಹಾಗಿದೆ ನೋಡಿ. ಅದೆಲ್ಲಾ ಅವರವರ ಹಣೆಬರಹವಮ್ಮ! ಹುಟ್ಟು

ವಾಗಲೇ ಬ್ರಹ್ಮ ಹಣೆಯಲ್ಲಿ ಬರೆಯುತ್ತಾನೆ, ಎನ್ನುತ್ತಾರಲ್ಲಾ, ಹಾಗೆ! ನೀವು ನಮ್ಮ ಪ್ರೆಸಿಡೆಂಟರಂದಂತೆ, ರಜಿಸ್ಟರ್ಡ್ ಮೆರೇಜೇ ಆಗಿ.''

'ಇದೇಕಮ್ಮಾ, ಕಪ್ಪುಸೀರೆ ಸುತ್ತಿಕೊಂಡಿದ್ದೀರಿ! ದುಃಖದ ನಿಶಾನಿಯೇ? ಛೀ! ಛೀ! ಛೀ! ಸರಿಯಲ್ಲ, ಸರಿಯಲ್ಲ. ಚೆನ್ನಾಗಿರಬೇಕು. ಭೂದೇವಿ, ನೋಡಿ, ಒಳಗೆ ಬೆಂಕಿಯಿದ್ದರೂ, ಹೊರಗೆ ಹುಲ್ಲುಗಾವಲಿನಿಂದ ಹಸನ್ಮುಖಿಯಾಗಿದ್ದಾಳೆ. ಹಾಗಿರಬೇಕು!"

ಆದರೂ, ಲಲಿತೆ ಮೂಕಿಯೇ! ಅವಳ ಮೌನವ್ರತಧಾರಣವನ್ನು ಸಹಿಸಲಿಕ್ಕಾಗದೆ, ಕೊನೆಗೆ ಅವರು ಭುಜಂಗನ ಬಳಿಗೆ ತಿರುಗುವರು.

''ಹಲ್ಲೋ. ಮಿ। ಭುಜಾಂಗ! ನಮ್ಮ ಮನೆಗೆ ಬರುತ್ತೀಯೇನಪ್ಪಾ?''

''ನಾನು, ನಿಮ್ಮಮನೆಗೆ ಬಂದರೆ, ನೀವು ನನಗೇನು ಕೊಡುತ್ತೀರಿ?" ಭುಜಂಗ ಕೇಳುವನು.

''ಹುಡುಗಿ ಕೊಡುತ್ತೇನೆ, ಕಣೋ!"

ಭುಜಂಗನಿಗೆ ನಾಚಿಕೆಯಾಯಿತು. ಉಳಿದವರು ಗೊಳ್ಳೆಂದು ನಕ್ಕರು. ಲಲಿತೆಗೂ ಸ್ವಲ್ಪ ನಗು ಬಾರದಿರಲಿಲ್ಲ.

ಹೀಗೆಯೇ ಸಂಜೆಯ ಹೊತ್ತಿನಲ್ಲಿ ಇಡೀ ಮೈದಾನೇ ತಮಾಷೆ, ನಗು, ಗುಲ್ಲು, ಗಲಾಟೆಗಳಿಂದ ತುಂಬಿಹೋಗುತ್ತಿತ್ತು. ಲಲಿತೆಯೊಬ್ಬಳೇ, ಅದರಲ್ಲಿ ಭಾಗವಹಿಸದೆ ಮೌನಿಯಾಗಿ ಪಡುವಣಾಕಾಶವನ್ನು ನೋಡುತ್ತಾ ಕುಳಿತಿರುತ್ತಿದ್ದಳು. ಸೂರ್ಯನು ಮೆಲ್ಲ,ಮೆಲ್ಲನೆ ಇಳಿಯುತ್ತಿದ್ದಾನೆ. ಆಕಾಶವು ಕೆಂಪಾಗಿದೆ; ಹಕ್ಕಿ-ಪಕ್ಷಿಗಳು ಗೂಡು ಸೇರುತ್ತಿದ್ದಾವೆ, ಹೀಗೆಲ್ಲಾ ಅದನ್ನು ವರ್ಣಿಸಲಸಾಧ್ಯ ನೋಡಿಯೇ ಅನುಭವಿಸಬೇಕು.

ಸೂರ್ಯನು ಇಳಿದುಹೋದನು; ಮುಚ್ಚಂಜೆಯ ನಸು ಬೆಳಕೂ ಮೈದೋರಿ ಮಾಯವಾಯಿತು. ಲಲಿತೆಯ ಗೆಳತಿಯರು, ಮನೆಗೆ ಹೋಗಲು ಗಡಿಬಿಡಿಮಾಡತೊಡಗಿದರು. ವಾಯು ಸೇವನೆಗೆಂದು ಬಂದ ಎಷ್ಟೋ ಮಂದಿ ಈ ಮೊದಲೇ ಇಳಿದು ಹೋಗಿದ್ದರು. ಅವರೀಗ ಮನೆಯಲ್ಲಿ ಸಂಧ್ಯಾವಂದನೆ ಮಾಡುತ್ತಿರಬಹುದು; ಕೂಸಿಗೆ ಮೊಲೆಯುಣ್ಣಿಸುತ್ತಿರಬಹುದು. ಮೈದಾನಿನಲ್ಲಿ ಉಳಿದವರು ಕೂಡಾ, ''ಹೋಗೋಣ, ಹೋಗೋಣ. ಅವರು, ಬರುವ ಸಮಯವಾಯಿತು. ಅವರು ಬರುವಾಗ ನಾನಿಲ್ಲದಿದ್ದರೆ ನನ್ನ ಕೆನ್ನೆಗೆ ಹಪ್ಪಳ ಕಾಯಿಸಿಯಾರು.'' ಎಂದು ಒಬ್ಬರನೊಬ್ಬರು ಅವಸರಪಡಿಸಿದರು.

ಆದರ ನಡುವಿನಲ್ಲೇ ಒಬ್ಬಳು "ಲಲಿತಮ್ಮ! ಏಳಿ, ಏಳಿ." ಎಂದಳು. ಲಲಿತೆ ಏಳಲಿಲ್ಲ; ಮಾತಾಡಲೂ ಇಲ್ಲ. ಭುಜಂಗನೇ ಮುಂದಾಳುವಿನಂತೆ, "ನಾವು ಸ್ವಲ್ಪ ತಡೆದು ಬರುತ್ತೇವೆ, ನೀವು ಮುಂದೆ ಹೋಗಿ." ಎಂದು ಆಜ್ಞಾಪಿಸಿದನು.

ಅವರು ಹೋಗಿ ಮನೆಯನ್ನು ಸೇರಿಯೂ ಆಯಿತು.

ಲಲಿತೆ ಆಲೋಚನಾ ಕಡಲಲ್ಲೇ ತೇಲುತ್ತಿದ್ದಳು. ಯಾವಯಾವ ಆಲೋಚನೆಗಳು! ರಾಜಾರಾಮು, ಭುಜಂಗ, ಅವಳ ಗೆಳತಿಯರು, ಎಲ್ಲರೂ ಅವರನಡುವೆ ತೇಲಿಹೋದರು. ಮದುವೆಯೇನು? ಸಮಾಜವು ಮದುವೆಯ ಕಟ್ಟನ್ನೇಕೆ ಹಾಕಿಕೊಂಡಿದೆ? ಮನುಷ್ಯನು ನೀತಿಯ ಎಲ್ಲೆಯನ್ನು ಮೀರಿ ಹೋಗಬಾರದೆಂದಲ್ಲವೇ ? ಆದರೆ, ಇದರಿಂದ ತನಗೇನು ಉಪಕಾರ ಮಾಡಿದಂತಾಯಿತು ? ತನ್ನಂಥವರಿಗೆ ಉಪಕಾರವಾಗಬೇಕೆಂದಿದ್ದರೆ, ಸಮಾಜವು ಈ ಸೂಳೆಯರ ಪಡೆಯನ್ನೇಕೆ ನಿರ್ಮಿಸಿಕೊಂಡಿದೆ? ಈ ಸಾಮಾಜಿಕ ಪಾಪವನ್ನು ತೊಡೆದುಹಾಕಬಾರದೇ? ಎಂದು ಮುಂತಾಗಿ ಆಲೋಚನೆಗಳು !

ಆಲೋಚಿಸುತ್ತಿದ್ದಂತೆಯೇ ಕತ್ತಲು ದಟ್ಟಯಿಸುತ್ತಿತ್ತು. ಸಮುದ್ರರಾಜನ ಗಂಭೀರನಾದವು ಉಳಿದೆಲ್ಲ ನಾದಗಳನ್ನೂ ಅಡಗಿಸಿ, ಮೇಲೆದ್ದು ಅಟ್ಟಹಾಸದಂತೆ ಕೇಳಿಸುತ್ತಿತ್ತು. ತೀರಾ ಸಮೀಪದಲ್ಲಿದ್ದರೂ, ಒಬ್ಬರ ಮುಖ ಒಬ್ಬರಿಗೆ ಕಾಣಿಸದಷ್ಟು ಕತ್ತಲು; ಅಲ್ಲಲ್ಲಿ, ಎಲ್ಲೆಲ್ಲಿ ನಾಯಿಗಳ ಬಗುಳಾಟ; ಯೋಚನೆಯಲ್ಲಿ ತನ್ಮಯಳಾಗಿದ್ದ ಲಲಿತೆಗೆ ಇದಾವುದರ ಪರಿವೆಯೇ ಇಲ್ಲ.

" ಅಮ್ಮಾ; ಹೊತ್ತಾಯಿತು. ಮನೆಗೆ ಹೋಗೋಣ. " ಎಂದು ಭುಜಂಗನೇ ಅವಳ ಆಲೋಚನಾಭಂಗಮಾಡುವನು.

ಲಲಿತೆ ಮೇಲೆದ್ದಳು; ತೆಂಗಿನ ಮರದ ಕುಣಿಯುವ ಸೋಗೆಗಳ ಮರೆಯಿಂದ ಚಂದಿರನು ಎದ್ದು ಬಂದು " ವೇಳೆಯಾಯಿತು, ಲಲಿತೆ! ಮನೆಗೆ ಹೋಗು. " ಎಂದು ಎಚ್ಚರಿಸುತ್ತಿದ್ದ. ಆಕಾಶದಲ್ಲಿ ಮಿನುಗುವ ಅಸಂಖ್ಯ ತಾರೆಗಳ , ಲಲಿತೆ ಭುಜಂಗನನ್ನೆತ್ತಿಕೊಂಡು ಹೊರಟುಹೋಗುವುದನ್ನು ನೋಡಿದವು. ಆಕಾಶಮಾರ್ಗವಾಗಿ ಬೆಳ್ಮೋಹರದ ಗುಂಪೊಂದು ಅವಳನ್ನು ಹಿಂಬಾಲಿಸಿತು.

ಹೀಗೆಯೇ ಲಲಿತೆಯ ಜೀವಮಾನವು ಸಾಗಿ ಹೋಗುತ್ತಿತ್ತು.

## ೧೨

ಮಂಗಳೂರಿನಲ್ಲಿ ಇಂದು ಗದ್ದಲವೇ, ಗದ್ದಲ! 'ಏನು, ಏನು?' ಎಂದು ಎಲ್ಲರೂ ಕೇಳುವವರೇ! ಎಲ್ಲರೂ ಪ್ರಶ್ನೆ ಕೇಳುವವರೇ ಆದರೆ, ಉತ್ತರಿಸುವವರು ಯಾರು? ಅವರವರೇ ಅನೇಕ ಊಹಾ-ಪೋಹೆಗಳನ್ನು ಮಾಡಿಕೊಂಡರು. 'ಕಿಂಗ್ ಜಾರ್ಜರು, ಕೈಲಾಸವಾಸಿಯಾದರೇ?' 'ಗಾಂಧೀಜೀ ಬರುತ್ತಾರಂತೇನು?' 'ಗೌರ್ನರ್ ಸಾಹೇಬರು ಭೇಟಿಯಾಗುತ್ತಾರೇನು?' ಅಲ್ಲದಿದ್ದರೆ ದೇವಿಕಾರಾಣಿಗೆ ಪುತ್ರೋತ್ಸವವಾಯಿತೇನು? ಯಾವುದೂ ಅಲ್ಲ ಎಂದು ಹೇಳಿದರೆ ಅವರಿಗೆ ಆಶ್ಚರ್ಯವಾಗದಿದ್ದೀತೇ? ಆದರೆ, ಇದೆಲ್ಲಾ Womens' Welfare Societyಯ ಶಂಕು ಸ್ಥಾಪನೆಗಾಗಿ ಎಂದು ತಿಳಿದ ಗಂಡಸರು ಮೂಗುಮುರಿದರೆ, ಹೆಂಗಸರು, 'ಇನ್ನು ಗಂಡಸರ ದರ್ಪವನ್ನು ಇಳಿಸಿಬಿಡಬಹುದಪ್ಪಾ! ಯಾವುದೂ ಬೇಡ; ಇಂಗ್ಲಾಂಡಿನಲ್ಲಿಯಂತೆ, ಡ್ಯಾವೋರ್ಸ್ ಪದ್ಧತಿ ಒಂದು ಬರಲಿ ಇಂಡಿಯಾದಲ್ಲಿ, ಗಂಡಸರನ್ನು ಒಂದು ಮಿನಿಟಿನಲ್ಲಿ ಬತ್ತಲೆಯಾಗಿ ನೀರೊಳಗೆ ಮುಳುಗಿಸಬಹುದು." ಎಂದು ಮೂಗಿನ ಸೊಳ್ಳೆಗಳನ್ನು ಹೊರಳಿಸಿದರು.

'ಇದೆಲ್ಲಾ ರಾಜಾರಾಮನ ಕಾರುಭಾರು!' ಎಂದು ಕೆಲವರಿಗೆ ಗೊತ್ತಾಯಿತಂತೆ. ಆದರೆ, ಹೆಚ್ಚಿನವರು ಇದರ ವಿಷಯದಲ್ಲಿ ಸಂಪೂರ್ಣ ಅಜ್ಞಾನಿಗಳು! ಅಷ್ಟು ಗುಪ್ತವಾಗಿತ್ತು ಅದು! ಜೋಡುಮಠದ ಹೀರಾಸಾನಿಯ ಸೆನೇಟಿನಲ್ಲಿ. ಸೊಸ್ಯಾಟಿ ಸ್ಥಾಪಿಸುವ ರೆಸೊಲ್ಯೂಷನ್ ಪಾಸಾದದ್ದೇ. ಅದನ್ನು ಪೂರೈಸುವ ಕಾರ್ಯ ಭರದಿಂದ ನಡೆಯಿತು. ಹೀರೆಯ ಮೆಹನತ್ತಿನಿಂದ ಕೋಯಲಿ ಕರ್ನಾಟಕಿಯೇ 'ಅಧ್ಯಕ್ಷಿಣಿ' ಯಾಗಿ ದೊರೆತಳು. ಇವಳು ಶುದ್ಧ ಕರ್ನಾಟಕಿ! ಕನ್ನಡ ನಾಡಿನಲ್ಲಿ ಹಿಂದಿಯೂ ಕನ್ನಡವೂ ಒಟ್ಟಿಗೆ ಕಲಿತು ಕಲಿಯತಕ್ಕ ಭಾಷೆಯಾಗಬೇಕೆಂದು ಹೋರಾಡಿದ ಸಾಹಸಿಗರಲ್ಲಿ ಅವಳ 'ಪಿತಾಜಿ'ಯೇ ಮೊದಲಿಗರು! ಬೇರೆಯವರಿಗೆ ಹೇಳುವ ಮೊದಲೇ, ಅದನ್ನು ತಾವೇ ಆಚರಿಸಬೇಕೆಂದು ಅವರಿಗೆ ಚೆನ್ನಾಗಿ ಗೊತ್ತಿತ್ತು! ಆದುದರಿಂದಲೇ ಮಗಳಿಗೆ ಹಿಂದೀ-ಕನ್ನಡ ಹೆಸರನ್ನಿಟ್ಟರು. ಅವರು ತಮ್ಮ ಉದ್ದೇಶ ಸಾಧನೆಗಾಗಿ ಬಹಳ ಹೆಣಗಾಡಿದರು. ಅವರೆಲ್ಲಿಯಾದರೂ, ಮತ್ತೆ ನಾಲ್ಕು ವರ್ಷ ಬದುಕಿ ಉಳಿಯುತ್ತಿದ್ದರೆ,

ಹಂದಿಗಳ ಭಾಷೆಯೆಂದರೆ 'ಹಿಂದಿ'ಯೆಂದೇ ಸಾರಿಬಿಡುತ್ತಿದ್ದರು. ಆದರೆ, ಯಮನಿಗೆ ಬುದ್ಧಿಯಿಲ್ಲದೆ ಹೋಯಿತು. ಆದುದರಿಂದ ಅವರ ಉದ್ದೇಶ ಸಿದ್ಧಿಯಾಗದಿದ್ದರ, ಅದಕ್ಕವರನ್ನು ದೂರಿ ಫಲವಿಲ್ಲ. ಇಂದು ಕನ್ನಡದಲ್ಲಿ ಬೆರಕೆಯಾಗಿ ಉಪಯೋಗಿಸಲ್ಪಡುವ ಹಲವಾರು ಹಿಂದಿ ಪದಗಳಿಗೆ ಕಾರಣ ಕರ್ತೃ ನಮ್ಮ ಪತಿತಪಾವನ ರಾಯರೇ! ಇದು according to ಕೋಯಲಿ, ಅವಳ ನಾಮೇತಿಹಾಸ! ಆದರೆ, ಬೇರೆಯವರನ್ನು ಕೇಳಿದರೆ ಗುಟ್ಟು ರಟ್ಟಾಗುತ್ತದೆ. ಅಯ್ಯೋ, ಸ್ವಾಮಿ! ನಿಮ್ಮಾಣೆಗೂ ಅದೆಲ್ಲಾ ಅವಳ ಪಟಾಕಿ! ಅವಳು ಯಾವ ಕೆಲಸಕ್ಕೆ ಕೈಯಿಕ್ಕಿದರೂ, ಅದುಫೇಲ್ fail ಆಗುತ್ತದೆ. ಅದೇ ಅವಳ ಹೆಸರು. ಸರಕಾರಿ ರಿಕಾರ್ಡರನ ತಪ್ಪಿನಿಂದ ಅದು ಕೋಯಲ್ ಎಂದಾಯಿತು. ಮತ್ತೆ ಕೋಗಿಲೆಯ ಹೆಸರಿಟ್ಟುಕೊಳ್ಳಲು ಅವಳಿಗೆ ಭಾಗ್ಯವಿದೆಯೆಂದು ಎಣಿಸಿದಿರಾ? ಅವಳಿಗೆ ಕುಹೂ, ಕುಹು, ಅನ್ನಲೂ ಬಾರದು!"

ಈ ಕಾರ್ಯಕ್ಕೆ ಕೋಯಲಿ ಒಪ್ಪಿದುದು ಮೊದಲ ಮಹಾ ಸಂಗತಿ! ಏಕೆಂದರೆ, ಅವಳು ಕನ್ನಡದಲ್ಲಿ ಚೆನ್ನಾಗಿ, ಶುದ್ಧವಾಗಿ, ಪಸಂದಾಗಿ ಮಾತಾಡಬಲ್ಲಳು! ತನ್ನ ಕರ್ನಾಟಕಿ ಹೆಸರಿನ ಮಹಿಮೆಯನ್ನು ತೋರಿಸಲೆಂದೇ ಒಂದು ಕನ್ನಡದೊಂದಿಗೆ, ಹತ್ತು 'ಎನ್ನಡ'ಗಳನ್ನೂ, ಇಪ್ಪತ್ತು 'ಎಂಡ್'ಗಳನ್ನು ಸೇರಿಸಿ, ನೀರುಗುಡಿದಂತೆ ಉಪನ್ಯಾಸ ಮಾಡಬಲ್ಲಳು. ಇಂಥವಳನ್ನು ಹುಡುಕಿ ನೇಮಿಸಿದ ಮಹಾಕಾರ್ಯಕ್ಕೆ ಹೀರೆಗೆ 'ಮೆಡಲ್' ಸಲ್ಲಬೇಕು!

ಇವಳು ಛಾರ್ಜು ವಹಿಸಿಕೊಂಡ ನಾಲ್ಕೇ ನಾಲ್ಕು ದಿನಗಳಲ್ಲಿ, ಲೆಕ್ಕದಲ್ಲಿ ಲಕ್ಷಗಟ್ಟಲೆ, ಭಾರದಲ್ಲಿ ಖಂಡಿಗಟ್ಟಲೆ, ತೂಕದಲ್ಲಿ ತ್ರಾಸುಗಟ್ಟಲೆ ಅರ್ಜಿಗಳು ತಮ್ಮ ಬೆನ್ನು ಮಡಿಸಿಕೊಂಡು ಓಡೋಡಬಂದವು. ಮತ್ತು ಮೇಲೆ ಬೀಳಹತ್ತಿದರು. ಕರ್ನಾಟಕಿ, "ನಮಗೆ, too much ಬಂದಿದೆ. ನೀವೂ ಒಂದು 'ಅಜ್ಜಿ' ಹಾಕಿ ನೋಡೋಣ." ಎಂದು, ಬಹಳ ಚಾಲಾಕಿನಿಂದ ಉತ್ತರಗೊಡುತ್ತಿದ್ದಳು.

ಸೊಸಾಯಟಿಯ ಆರಂಭೋತ್ಸವಕ್ಕೆ ಇನ್ನೂ ಒಂದು ಪಕ್ಷವಿರುವಾಗಲೇ, ಅದರ ಪ್ರಭಾವ, ಪರಿಣಾಮಗಳೆಲ್ಲಾ ಚೆನ್ನಾಗಿ ಪೇಟೆಯಲ್ಲಿ ಕಾಣಬಂದವು. ದಾರಿಯಲ್ಲಿ ಸಾಲಾಗಿ ಬಾಳೆಗಿಡಗಳ ಯಾತ್ರೆಯೇ ಯಾತ್ರೆ!

'ಎಲ್ಲಿಗೆ?' ಎಂದು ಕೇಳುವ ಅಗತ್ಯವೇ ಇರಲಿಲ್ಲ. ಪತಾಕೆ, ತೋರಣ, ಮಾಲೆಗಳಿಗಾಗಿ, ಪೇಟೆಯಲ್ಲಿ ತಗಣೆಯಿಂದ, ಗೆದ್ದಲು ಹಿಡಿದ ಬಣ್ಣದ ಕಾಗದ ಗಳೂ ಉಳಿಯಲಿಲ್ಲ. ಆ ದಿನದ ಕಾಫಿಗಾಗಿ, ಗಟ್ಟದ ಕಾಫೀ ತೋಟದ, ಒಂದು ವರ್ಷದ ಉತ್ಪನ್ನಕ್ಕೇ 'ಕಂಟ್ರಾಕ್ಟಾ'ಯಿತು. ತಿಂಡಿಯ ತಯಾರಿ, ಬೀದಿಯ ನಾಯಿಗಳ ಬಾಯಿಯಲ್ಲೂ ನೀರೂರಿಸತೊಡಗಿತು.

ಕರ್ನಾಟಕಿಯಮ್ಮನಿಗೆ ಒಂದು ನಿಮಿಷವಾದರೂ ಪುರಸತ್ತಿರಲಿಲ್ಲ. ಖುರ್ಚಿ, ಮೇಜು, ಬೆಂಚುಗಳನ್ನು ತರಿಸುವುದು ಮೊದಲಾಗಿ, ಚಪ್ಪರದ ನಿರ್ಮಾಣದ ತನಕ, ಅವಳ ಬೆವರು ಒಂದು ಕೊಡಪಾನ ಇಳಿದು ಹೋಗು ತ್ತಿತ್ತು. ಇದರ ನಡುವೆ, ಆ ದಿನಕ್ಕೆ ಶಂಕುಸ್ಥಾಪನೆ ಮಾಡುವ ದೊಡ್ಡ ಜನರೊಬ್ಬರು ಬೇಕು. ಕೋಯಲಮ್ಮ, ಮೊದಲಾಗಿ, ಬಾಡಿಗೆಯ ಮೋಟಾರ್ ಕಾರಿನಲ್ಲಿ 'ಕಲೆಕ್ಟರ್' ಸಾಬರ ಬಂಗಲೆಗೇ ಜೋದಳು. ಇದರಲ್ಲಿ ದೊಡ್ಡ ಬುದ್ಧಿವಂತಿಕೆಯನ್ನೂ ಖರ್ಚುಮಾಡಿದ್ದಳು. 'ಕಲೆಕ್ಟರ್' ಶಬ್ದದ ಮೊದಲ ಪದವನ್ನು ತೆಗೆದರೆ, ಅವರು ದೊಡ್ಡ ಉಪನ್ಯಾಸ ಕೊಡುವವರು ಎಂದಲ್ಲವೇ ಅದರರ್ಥ?? ಬೇಕಾದರೆ ಒಂದು 'ರ'ವನ್ನು ಹೆಚ್ಚಿಗೆ ಸೇರಿಸಿ ಕೊಂಡರಾಯಿತು. ಆದರೆ, ಕಲೆಕ್ಟರರ ಮುಂದೆ ಈ ಬುದ್ಧಿವಂತಿಕೆ ಕಾಸಿಗೂ ಬೇಡವಾಯಿತು. ಅವರು "ಸಮಯವಿಲ್ಲಾ, ಬಿಲ್‌ಖುಲ್ ಆಗುವುದಿಲ್ಲ." ಎಂದರೆ ಏನು ಮಾಡಲು ಬಂದೀತು? ಬಾಡಿಗೆಯ ಕಾರು, ಇವಳನ್ನು ಬೇರೆ ಕಡೆಗೆ ಸಾಗಿಸಿಕೊಂಡು ಹೋಯಿತು.

ಜಡ್ಜಿಗಳು, ಪ್ರೊಸಿಕ್ಯೂಟರರು, ಪ್ರಿನ್ಸಿಪಾಲರು, ಮಂತ್ರಿಗಳು, ತಂತ್ರಿ ಗಳು ಎಲ್ಲರೂ 'ನ'ಕಾರದಿಂದ ನಕ್ಕರು. ಕೋಯಲಮ್ಮನ ಕಣ್ಣು ಕತ್ತ ಲಾಯಿತು. ಕೊನೆಗೆ 'ಈ ಗಂಡಸರ ಸಹವಾಸಬೇಡ,' ಎಂದು, 'ಕೊನ್ವೆಂಟ'ಗೇ ಭೇಟಿಕೊಟ್ಟಳು. ಆದರೂ, ಹಾಳಾದವರು 'ನಮಗೊಂದೂ ಬೇಡ' ಎಂದು ಹೇಳುವವರೇ ಊರಲ್ಲಿ ತುಂಬಿರಬೇಕೇ? ಕೋಯಲಮ್ಮ 'ಐನೂರು ರೂಪಾಯಿ ಕೊಡುತ್ತೇನೆ' ಎಂದು ಕೊನೆಯ ಗುಂಡು ಹಾರಿ ಸಿದಳು. ರೂಪಾಯಿಗೋಸ್ಕರ ಒಬ್ಬಳು ಆಂಗ್ಲೋ-ಇಂಡಿಯನ್ನಳು ಬಂದಳು.

ಆ ದಿನವೂ ಬಂದಿತು; ಚಪ್ಪರದಲ್ಲಿ ಸಾಧಾರಣ ಒಂದು ಲಕ್ಷದಷ್ಟು ಜನರು ತುಂಬಿದ್ದರು. ಎಲ್ಲಾ ಸಭೆ, ನಾಟಕ, ಸಿನೇಮಾಗಳಲ್ಲಿ ಸ್ತ್ರೀಯರಿಗೆ ಪ್ರತ್ಯೇಕ ಸ್ಥಳ ಏರ್ಪಡಿಸುವಂತೆ, ಇಲ್ಲಿ ಗಂಡಸರಿಗೆ ಪ್ರತ್ಯೇಕ ಸ್ಥಳ ಏರ್ಪಡಿಸ

ಲಾಗಿತ್ತು. ಗಂಡಸರು, ಹೆಂಗಸರ ಈ ಚಟುವಟಿಕೆಗಾಗಿ ಮೂಗು ಮುರಿದರೂ, ಅದು ಹೇಗೆ ನಡೆಯುತ್ತದೆಂದು ನೋಡುವ ಮನಸ್ಸು ಮಾಡಿದುದರಿಂದ, ಕೋಯಿಲಮ್ಮನು ಬಹಳ ಮುತುವರ್ಜಿಯಿಂದ ಈ ಏರ್ಪಾಡು ಮಾಡಬೇಕಾಯಿತು.

ಮಂಗಳೂರಿನ ಜನರಿಗೆ ಕಾಲಕ್ಲಿಪ್ತತೆಯೆಂಬುದು ಗೊತ್ತಿಲ್ಲವೆಂದು ೬-೩೦ ಗಂಟೆಗೆ ನಡೆಯಬೇಕಾದ ಸಭೆಯನ್ನು ೫-೩೦ ಗಂಟೆಗೆಂದು ಜಾಹೀರು ಪಡಿಸಿದರು. ಆದರೆ ೪-೩೦ ಗಂಟೆಗೇ ಜನರು, ಕುಳಿತುಕೊಳ್ಳಲು ಸಿಗದೆ, ನಿಲ್ಲುವಷ್ಟರ ಮಟ್ಟಿಗೆ ನೆರೆದುದನ್ನು ನೋಡಿ ಕೋಯಿಲಮ್ಮನಿಗೆ ಅತ್ಯಾನಂದವಾಯಿತು; ಮಾತ್ರವಲ್ಲ. ಮೊದಲ ಬಾರಿಗೆ ಮಂಗಳೂರಿನ ಜನರ ಮೇಲೆ good impression ಆಯಿತು.

ಆಂಗ್ಲೋ-ಇಂಡಿಯನ್ ರಮಾಬಾಯಿಯೂ ಆ ಹೊತ್ತಿನೊಳಗಾಗಿಯೇ ಬಂದುಬಿಟ್ಟದ್ದರಿಂದ ಸಭೆ ೪-೩೦ಕ್ಕೆ ಪ್ರಾರಂಭವಾಯಿತು. ರಮಾಬಾಯಿ, ಮೊದಲಾಗಿ, ಕೋಯಿಲಮ್ಮನ ಕೇಳಿಕೆಯಂತೆ, ಅಧ್ಯಕ್ಷ ಪೀಠವನ್ನೇರಿದಳು. ಆ ನಂತರ ಕೋಯಿಲಮ್ಮನ ಸ್ವಾಗತ ಭಾಷಣ! ಲೌಡ್ ಸ್ಪೀಕರ್ ಅವಳಿಗೆ ಬಹಳ ಸಾಹ್ಯಮಾಡಿತು.

"ಭಗಿನಿಯರೇ! ಬಂಧುಗಳೇ! ನನಗೆ ಕನ್ನಡ ಚೆನ್ನಾಗಿ ಗೊತ್ತು. ಆದರೂ ಅಂಗಳ ಭಾಷೆಯಲ್ಲಿ ಹೆಚ್ಚು ವಾತ್ಸಲ್ಯವಾದುದರಿಂದ, ಅದರಲ್ಲೇ ಮಾತನಾಡುತ್ತೇನೆ."

'ಅಂಗಳ' ಎಂಬುದು ಯಾವ ಭಾಷೆಯ ಶಬ್ದ? ಎಂದು ಸಭಿಕರಲ್ಲಿ ಸ್ವಲ್ಪ 'ಗುಜುಗುಜು' ಪ್ರಾರಂಭವಾಯಿತು. ಕೋಯಿಲಮ್ಮನಂಥ ಒಬ್ಬ ಪಂಡಿತರೇ ಹೇಳಿದರು; "ಇಂಗ್ಲಿಷ್ ಶಬ್ದದ ಕನ್ನಡ equivalent ಆಂಗ್ಲ! ಆಂಗ್ಲದ ತದ್ಭವ ಅಂಗಳ. ಶುದ್ಧ ಕನ್ನಡಿತಿಯಾದುದರಿಂದ ಶುದ್ಧ ಕನ್ನಡವನ್ನೇ ಉಪಯೋಗಿಸಿದ್ದಾಳಯ್ಯಾ!"

ಸಾಧಾರಣ ಅರ್ಧಗಂಟೆಯತನಕ ಲೌಡಸ್ಪೀಕರ್ ಒಡೆದು ಹೋಗುವಂತೆ, ಕೋಯಿಲಮ್ಮನ ಉಪನ್ಯಾಸವಾಯಿತು. ಆ ಬಳಿಕ ರಮಾಬಾಯಿಯನ್ನು ಶಂಕುಸ್ಥಾಪನೆ ಮಾಡಲು ಕೇಳಿಕೊಂಡು ಹಾರ ಹಾಕಲಾಯಿತು. ಆದರೆ, ಒಬ್ಬರಾದರೂ clap ಹೊಡೆಯಲಿಲ್ಲ. "ನಮ್ಮ ಜನರಿಗೆ manners ಏ ಇಲ್ಲ." ಎಂದು ಕೊಯಿಲಮ್ಮನ ಮುಖ ಉರಿಯಿತು.

ಶಂಕುಸ್ಥಾಪನೆಯೂ ಆಯಿತು. ಕಾಫಿ, ಫಲಾಹಾರವೂ ಆಯಿತು. ಕಾಫಿಯ ಗ್ಲಾಸುಗಳು ಬಂದಾಗ, ಇದುತನಕ ಬಾಡಿದ ಜನರ ಮುಖಗಳು ಅರಳಿದವು. clap, ಸಿಳ್ಳು, ಕೂಗುಗಳು ಸಾಕಷ್ಟು ಕೇಳಿಸಿದವು. ಎಲ್ಲರೂ ತಿಂಡಿ,ಕಾಫಿಗಳನ್ನು ಚೆನ್ನಾಗಿ ಸವಿದು ಹೀರಿದರು. ಕೆಲವು ರುಚಿ ಗೊತ್ತಿಲ್ಲದವ (?) ರಂತೂ, ಮಸಾಲೆದೋಸೆಗೆ, 'ಮೊಸಳೆ. ದೋಸೆ' ಎಂದು ಟೀಕೆ ಮಾಡಿದರು.

ಕೊನೆಗೆ ಕೃತಜ್ಞತೆ ಹೇಳುವುದಾಯಿತು. ಮೊದಲಾಗಿ ರಮಾಬಾಯಿಗೂ, ನೆರೆದ ಸಭಿಕರಿಗೂ ತುಂಬಾ ವಂದನೆಗಳು! ಎಂದಾಯಿತು. ಜನವು, 'ಎಲ್ಲಾ ಮುಗಿಯಿತೆಂ'ದು ಚದರುವ ಆಲೋಚನೆ ಮಾಡುವಾಗ, 'ಒಂದು ಮಾತು' ಎಂದು ಲೌಡ್‌ಸ್ಪೀಕರ್ ಸಾರಿತು. 'ನಮ್ಮ ಈ ಮಹೀಳೋ'ದ್ಧಾರ ಸಮಿತಿಗೆ ಶ್ರೀಮತಿ ಲಲಿತಾ ರಾಜಾರಾಮರಾಯರು ತಮ್ಮ ಯಾವತ್ತೂ ಸಂಪತ್ತನ್ನೂ ಕೊಟ್ಟು ಉಪಕಾರ ಮಾಡಿದ್ದಾರೆ. ಇವರಿಗೆ ನಾವು ಸತ್ತಮೇಲೆಯೂ ಚಿರಋಣಿಗಳು.'

ಇದನ್ನು ಕೇಳಿ ಎಲ್ಲರೂ ಬೆಪ್ಪರಾದರು; ರಮಾನಂದಾಚಾರ್ಯರು' ಕೃಷ್ಣಪ್ಪ,-ಇವರೆಲ್ಲರ ಕೋಪ ಎಲ್ಲಿಯೂ ಹಿಡಿಸಲಿಲ್ಲ. ಕೆಲವರು, 'ಆ ಲಲಿತಮ್ಮ ಹೆಂಗಸಲ್ಲವೇ, ಹೆಂಗಸಿಗೇ ಕೊಟ್ಟಳು. ಅದರಿಂದ ನಮಗೇನು? ಹೆಂಗಸರಿಗೆ ಹೆಂಗಸರಲ್ಲದೆ ಮತ್ತ್ಯಾರು ಕೊಡುತ್ತಾರೆ?' ಎಂದರೂ ಅದರಿಂದ ಉಳಿದವರಿಗೆ ಸಮಾಧಾನವಾಗುವಂತಿರಲಿಲ್ಲ. ರಮಾನಂದಾಚಾರ್ಯರು, ''ಆ ಲಲಿತೆಗೆ ಏಳರ ಸಂಕಟ; ಅದರಿಂದ ಹೀಗೆಲ್ಲಾ ಆಯಿತು. ಹೋಗಲಿ, ಅವಳ ಆ ಕಾಂಚಾಣ ಯಾವ ದರಿದ್ರದವನಿಗೆ ಬೇಕಯ್ಯಾ? ಅವಳಲ್ಲದಿದ್ದರೆ, ಅವಳ ಅಪ್ಪ ಕೊಡುತ್ತಾನೆ ನಮಗೆ!'' ಎಂದರು. ಪಾಪ! ಕೃಷ್ಣಪ್ಪನವರಿಗೆ ಏಳೇಳು ಜನ್ಮದಲ್ಲಿಯೂ ಇಂಥ ನಿರಾಶೆ ಒಮ್ಮೆಯೂ ಆಗಿರಲಿಲ್ಲ. ''ಇದೆಲ್ಲಾ ಆ ಕೋಯಿಲಮ್ಮನ ಕಾರುಭಾರು! ಅದು ಯಕ್ಷಿಣಿಯಲ್ಲವೇ ಅವಳು? ಮಂತ್ರ-ತಂತ್ರ ಗೊತ್ತಿರಬಹುದು. ಅದರ ಪ್ರಭಾವ ಇದು!'' ಎಂದು ಕೋಯಿಲಮ್ಮನನ್ನೇ ಬೈದನು.

ದಾರಿಯಲ್ಲೆಲ್ಲಾ ಜನರು ಇದನ್ನೇ ಮಾತನಾಡುತ್ತಾ ಹೋಗುತ್ತಿದ್ದರು. ಲಲಿತೆಗೆ, 'ಹುಚ್ಚು! ಉನ್ಮಾದ! ಅ · ಸ್ಮಾರ!' ಇನ್ನೂ ಬೇಕಾದ ಬಿರುದುಗಳು! ಕೆಲವರಲ್ಲಿ ಕೋಯಿಲಮ್ಮನ ಹಾಗೂ, ರಮಾಬಾಯಿಯ ಭಾಷಣದ ಕುರಿತು

ವಾದ-ವಿವಾದ. ಅವರು ಉಪಯೋಗಿಸಿದ ಅನೇಕ ಶಬ್ದಗಳನ್ನು ಹೇಳಿ, "ಅದೇನು? ಇದೇನು? ಗೊತ್ತೇ ಆಗಲಿಲ್ಲ" ಎನ್ನುತ್ತಿದ್ದರು. 'ನಿಘಂಟು ಮಹಾಶಯ'ರೊಬ್ಬರು ಅದಕ್ಕೆ ಉತ್ತರಗೊಡುತ್ತಿದ್ದರು. ಜೊತೆಗೇ ಒಬ್ಬರ ಕಿವಿಯಿಂದೊಬ್ಬರಿಗೆ ಬಿದ್ದ ಇನ್ನೊಂದು ವಾರ್ತೆಯೂ ಸುಮನೋಹರವಾಗಿತ್ತು. 'ಮಾಟಿಂಗು ನಡೆದಮೇಲೆ ಕೋಯಲಮ್ಮ ರಮಾಬಾಯಿಗೆ promise ಮಾಡಿದ ಐನೂರು ರೂಪಾಯಿ ಕೊಡಲು ಮರೆತು ಹೋದಳಂತೆ. ರಮಾಬಾಯಿ ನೆನಪು ಹುಟ್ಟಿಸಿದುದೂ ನಿಷ್ಫಲವಾಯಿತು. 'As soon as receiving the property of Lalithamma' ಎಂದವಳು ನಂಬಿಸಿದಳು. ಆದರೆ ರಮಾಬಾಯಿಗೆ ಅದುತನಕ ಕಾಯಲು ಸಾಧ್ಯವಿರಲಿಲ್ಲವಾಗಿ, 'No, No' ಎಂದಳು. ಕೋಯಲಮ್ಮ ರೂಪಾಯಿ No, No, ಎಂದಳು. ಇವಳಿಗೆ ಉಪಾಯವಿಲ್ಲದೆ ಹೋಯಿತು. ಕೋಯಲಮ್ಮನನ್ನು, ಬಾಯಿಗೆ ಬಂದ ಹಾಗೆ ಸಾವಿರ ಬಯ್ಯುತ್ತಾ, 'ಈ ಮಂಗಳೂರಿನ ಜನರೆಲ್ಲಾ ಹೀಗೇನೇ ಎಲ್ಲಾ bogus boss. ಇವರ ಸಂಘ ಹಾಳಾಗಿಯೇ ಹೋಗಲಿ. ನಾ ಸಿವರನ್ನು ನಂಬುವುದೇ ಇಲ್ಲ; ಎಂದು ಕೊನೆಗೆ, ಮಂಗಳೂರಿನ ಮೇಲೆಯೇ ಕೋಪ ತಾಳಿ, 'ಈ ಮಂಗಳೂರೇ ಬೇಡ' ಎಂದು ಮುಂಬಯಿಗೇ ಸವಾರಿ ಮಾಡಿದಳು. ಕೋಯಲಮ್ಮನಿಗೆ ಐನೂರು ರೂಪಾಯಿ ಆದಾಯವಾಯಿತು. ಆದರೆ, ರಮಾಬಾಯಿ ಕೊಟ್ಟ 'A Thug' ಎಂಬುದರ ಸ್ತ್ರೀ ರೂಪಾಂತರವನ್ನು ಹೊತ್ತುಕೊಳ್ಳಬೇಕಾಯಿತು.

ಲಲಿತೆಗೂ ಇದೆಲ್ಲಾ ವಿಚಿತ್ರವೇ! ಯಾರೋ ಒಬ್ಬಳು ಬಂದು ಈ ವಾರ್ತೆಯನ್ನು ತಿಳಿಸಿದಾಗ ಅವಳಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. 'ಇದೆಲ್ಲಾ ಏನು ಮಂತ್ರಮಾಯೆ?' ಎಂದು ಅವಳಿಗೆ ಗೊತ್ತಾಗಲಿಲ್ಲ. ಒಂದೆರಡು ಬಾರಿ ದಾರಿಯಲ್ಲಿ ರಮಾನಂದಾಚಾರ್ಯರೂ, ಕೃಷ್ಣಪ್ಪನೂ, ಇನ್ನಿತರರೂ ಅವಳಿಗೆ ಎದುರಾಗಿದ್ದರು. ಅವರೆಲ್ಲಾ ಇವಳನ್ನು ಗಿಳಕ್ಕನೆ ಗಿಳಂಕರಿಸುವಂತೆ ದುರದುರನೆ ನೋಡಿ ಹೋಗಿದ್ದರು. ಇದರ ಕಾರಣ ಲಲಿತೆಗರ್ಥವಾಗದಿರಲಿಲ್ಲ. ಪತ್ರಿಕೆಗಳಲ್ಲೆಲ್ಲಾ ಲಲಿತೆಯ ಈ donation ನ ವಿಚಾರ, ಸುದ್ದಿಯು ತತ್ವಾರದಿಂದಾಗಿ, ದೊಡ್ಡ, ದೊಡ್ಡ ಅಕ್ಷರಗಳಲ್ಲಿ ಎರಡು-ಮೂರು ಪುಟಗಳನ್ನು ತುಂಬಿಸಿ ಪ್ರಕಟವಾಯಿತು.

ನಾಲ್ಕುದಿನಗಳಲ್ಲೇ ಲಲಿತೆಗೆ ಕೋಯಲಮ್ಮನ ಆಳು, ವಿನಂತಿ ಪತ

ವೊಂದನ್ನು ತಂದುಕೊಟ್ಟ. 'ದಯುವಿಟ್ಟು ನಮ್ಮ ಮನೆಯವರೆಗೆ ಬಂದು ಹೋಗುವ ಕೃಪೆ ಮಾಡುತ್ತೀರಾ ?––ಕೋಯಲ್‌ಬಾಯಿ ಕರ್ನಾಟಕಿ' ಎಂದಿತ್ತು.

"ಎಷ್ಟು ದೂರ ಮನೆ ?" ಎಂದು ಲಲಿತೆ ಕೇಳಿದಳು.

ಆಳು ಬೀಡಿ ಸೇದುತ್ತಾ, "ಒಂದು ನಾಲ್ಕಾರು–ವೈಲು. ಕದ್ರಿ— ಬಿಜಯಿ ಸೈಡ್."

"ಹಾಗಾದರೆ ಇವತ್ತು ಬೇಡ. ಭುಜಂಗ ಸಾಲೆಗೆ ಹೋಗಿದ್ದಾನೆ. ಅವನು ನನ್ನನ್ನು ಬಿಟ್ಟು ಒಬ್ಬನೇ ಇರಲಾರ. ಇವತ್ತು ಬುಧವಾರವಲ್ಲವೇ? ನಾಡದು ಶನಿವಾರ ಬರುತ್ತೇವೆ."

"ಛಿ! ಛಿ! ಅದೇನೂ ಇಲ್ಲ. ಕಾರಿದೆ. ಹೆಚ್ಚಿಗೆಂದರೆ ಒಂದು ನಾಲ್ಕೈದು ಮಿನಿಟು ಹಿಡಿಯುಬಹುದು ಹೋಗಿ ಬರಲು. ನಿಮ್ಮ ಭುಜಂಗ ಸಾಲೆಯಿಂದ ಬರುವುದರೊಳಗೆ ಖಂಡಿತ ಬರಬಹುದು."

ಕೊನೆಗೆ ಲಲಿತೆ ಬಿಜಯಿಗೆ ಬಿಜಯುಂಗೈಯಲು ಒಪ್ಪಿ ಬಂದು ಕಾರಿನಲ್ಲಿ ಕುಳಿತಳು. ಕಾರು, 'ಡುರ್' ಎಂದಿತು. ಕಣ್ಣು ತೆರೆಯುವುದರೊಳಗಾಗಿ, ಮಾರ್ಗದ ಸಾಲ್ಮರಗಳನ್ನೆಲ್ಲಾ ಗಿರಗಿರನೆ ಹಿಂದಿರುಗಿಸಿ, ಧೂಳನ್ನೆಬ್ಬಿಸಿ, ಕೋಯಲಮ್ಮನ ಮನೆಯ ಮುಂದೆ ನಿಂತೂ ಆಯಿತು.

ಮನೆಯೆಂದರೆ ಒಂದು ಚಿಕ್ಕ ಕೋಣೆ; ಹೊರಗೆ ಬಾಗಿಲ ಬಳಿಯಲ್ಲಿ ಒಂದು ಹಲಗೆಯಲ್ಲಿ,

KOYALI BAI KARNATAKI,
*President*,
Womens' Welfare Society,
Mangalore

ಎಂದು ಅರ್ಧ ಡಝನ್ ಬಣ್ಣಗಳಿಂದ ಬರೆಯಲಾಗಿತ್ತು. ಲಲಿತೆ, ಕಾರಿನಿಂದ ಳಿದು ಒಳಗೆ ಪ್ರವೇಶಿಸುವಾಗ, ಬಾಗಿಲಲ್ಲಿದ್ದ ದಫೆದಾರನು ಮೀಸೆ ಹುರಿ ಮಾಡಿ,

"ಠಹರೋ!" ಎಂದನು.

ಲಲಿತೆ ಬೆಪ್ಪಾದಳು.

ಅಷ್ಟರಲ್ಲಿ ಕಾರಿನ ಡ್ರೈವರ್ ಸಾಹೇಬನೇ ಬಂದು, ಯಾರ 'ಹುಕುಮೂ'

ಇಲ್ಲದೆ ಲಲಿತೆಯನ್ನು ಒಳಗೆ ಕರೆದುಕೊಂಡು ಹೋದನು. ದಫೇದಾರನ 'ಜಬರದಸ್ತಿ'ನ ಮುಖಕ್ಕೆ ಮೆಣಸಿನ ಒಗ್ಗರಣೆ ಕೊಟ್ಟಂತಾಯಿತು.

ಒಳಗೆ ಕೋಯಿಲಮ್ಮ, ಲಲಿತೆಯ ಆಗಮನವನ್ನೇ ಇದಿರು ನೋಡುತ್ತಾ ಕುಳಿತಿದ್ದವಳು, ಮರ್ಯಾದೆಪೂರ್ವಕವಾಗಿ, 'ಜೀ ನಮಸ್ತೇ!' ಎಂದಳು.

"ನಮಸ್ಕಾರ!"

"ಕುಳಿತುಕೊಳ್ಳಿ."

ಡ್ರೈವರ್ ಸಾಹೇಬನು ತಾನು ಹೊದ್ದ ವಲ್ಲಿಯಿಂದಲೇ ಖುರ್ಚಿಯನ್ನೊರಸಿ ಸಿದ್ಧವಾಗಿಸಿದನು. ಅಷ್ಟರಲ್ಲೇ, ಅವನಿಗೆ, "ತುಮ್ ಚಲೋ!" ಎಂದು ಕೋಯಿಲಮ್ಮನ ಆಜ್ಞೆಯಾಯಿತು.

"ಇದೇನು, ಕೋಯಿಲಮ್ಮ ನೀವು ಮಾಡಿದ್ದು? ನನಗೊಂದೂ ಅರ್ಥವಾಗುವುದೇ ಇಲ್ಲವಲ್ಲಾ!"

"ಯಾವುದು donationನ ವಿಚಾರ ಕೇಳುತ್ತೀರಷ್ಟೇ?" ಎಂದು ನಕ್ಕಳು.

"ಹೂಂ; ಅದೇ!"

"ಅದಕ್ಕೋಸ್ಕರವೇ ನಿಮ್ಮ ಬರವನ್ನು ಈಗ ಅಪೇಕ್ಷಿಸಿದ್ದು."

"ನೀವು, 'ಕೊಡಿ' ಎಂದು ಕೇಳಿದರೆ, ನಾನು ಕೇಳುತ್ತಿರಲಿಲ್ಲವೇ? ಕೊಡುತ್ತಿರಲಿಲ್ಲವೇ? ಅದಕ್ಕೆ ಇಷ್ಟೆಲ್ಲಾ ಸುಳ್ಳು-ಪಳ್ಳು ಕೂಡಿಸಬೇಕಾಗಿತ್ತೇ?" ಎಂದಳು. ಮಾತಿನಲ್ಲಿ ಸ್ವಲ್ಪ ಸಿಟ್ಟೊ ಬೆರೆತಿತ್ತು.

"Sorry ಲಲಿತಮ್ಮ; ನಾವು ನಿಮ್ಮನ್ನು cheat ಮಾಡಲಿಕ್ಕೆ ಹಾಗೆ ಹೇಳಲಿಲ್ಲ. ಹೆಂಗಸು cheating a ಹೆಂಗಸು at any cost, impossible ನಿಮಗೆ ಸಿಕ್ಕಿದವರೆಲ್ಲಾ ಬಂದು ಉಪದ್ರ ಕೊಡುತ್ತಿದ್ದದ್ದು ನಿಜವಷ್ಟೆ! ಅದನ್ನು ಹೋಗಲಾಡಿಸಲಿಕ್ಕೆ ಹೀಗೆ ಹೇಳಬೇಕಾಯಿತು."

"ಈಗ ಉಪದ್ರ ಕಡಿಮೆಯಾದರೂ, ಅವರ ಸಿಟ್ಟು ಹೆಚ್ಚಾಗಿದೆ. ಅಲ್ಲದೆ, ಈಗ ನಾನು ಆ donation ಕೊಡುವ ವಿಚಾರವನ್ನು ಸಂಪೂರ್ಣ ಬಿಟ್ಟುಬಿಟ್ಟಿದ್ದೇನೆ

"ನಿಜವೇ?"

"ಅಲ್ಲದೆ ಸುಳ್ಳೇ?"

ಕೋಯಲಮ್ಮನ ಧ್ವನಿ ಸ್ವಲ್ಪ ದಪ್ಪವಾಯಿತು; "ಹಾಗಾದರೆ, ನಾನೇನು ಹೇಳಲಮ್ಮ, ನಿಮಗೆ? ಯಾವುದಾದರೂ ಒಂದು ವಿಚಾರವನ್ನು ಹೇಳುವ ಮೊದಲಾಗಲೀ, ಮಾಡುವ ಮೊದಲಾಗಲೀ, ಚೆನ್ನಾಗಿ ಆಲೋಚಿಸಿ ಕೊಳ್ಳಬೇಕು. ಇಲ್ಲವಾದರೆ ಮಾನಕ್ಕೆ ಕುಂದು."

ಅವಳ ಮಾತು ಮುಗಿಯುವಷ್ಟರಲ್ಲಿ ಕಾಫಿ ಬಂದಿತು. ಕಾಫಿ ಕುಡಿದಂತೆ, ಹೊಸ ಆಲೋಚನೆಯೂ ಕೂಡಿತು ಲಲಿತೆಗೆ. "ಹೋಗಿ ಬರುತ್ತೇನೆ" ಎಂದು ಲಲಿತೆ ಹೇಳುವ ಮೊದಲಾಗಿಯೇ, ಕೋಯಲಮ್ಮ ಡ್ರೈವರನಿಗೆ ಲಲಿತೆಯನ್ನು ಬಿಟ್ಟು ಬರಲು ಆಜ್ಞೆಮಾಡಿದಳು.

ಕಾರು ಮನೆಯ ಬಳಿಗೆ ಬಂದಾಗ ಭುಜಂಗನು ಶಾಲೆಯಿಂದ ಬಂದಾಗಿತ್ತು. ಸಿಟ್ಟಿನಿಂದ ಸ್ಲೇಟು, ಪುಸ್ತಕಗಳನ್ನೆಸೆದು, ಜಗಲಿಯಲ್ಲಿ ಕೋಪದಿಂದ ಕುಳಿತುಕೊಂಡಿದ್ದ.

## ೧೩

ಮೂರು ಹಗಲು-ರಾತ್ರಿ, ಲಲಿತೆ ಇದೇ ವಿಷಯವನ್ನು ಕುರಿತು ಆಲೋಚಿಸಿದಳು. ಅವಳು ದೊಡ್ಡ ಸಂಕಟದಲ್ಲಿ ಸಿಕ್ಕಿಬಿದ್ದಿದ್ದಳು. ಈ ಮೊದಲು ಅವಳ ಬುದ್ಧಿ ಮಣ್ಣುತಿಂದು ಹೋಗಿತ್ತು. ಆಗ, ಭುಜಂಗನ ಆಲೋಚನೆ ಅವಳಿಗಿರಲಿಲ್ಲ. ಈಗ 'ತನ್ನ ಸಂಪತ್ತನ್ನು ಕೊಟ್ಟುಬಿಟ್ಟರೆ, ಭುಜಂಗನಿಗೆ?---' ಎಂದು ಬುದ್ಧಿ ಬಂತು. ಸಾಯುವ ಇಚ್ಛೆಯಂತೂ ಅವಳಿಗೀಗ ಲವಲೇಶವಾದರೂ ಇರಲಿಲ್ಲ.

ಎಷ್ಟು ಆಲೋಚಿಸಿದರೂ ವಿಚಾರ ಬಗೆಹರಿಯದು. ತನ್ನ ಈಗಿನ ನಿರ್ಧಾರವನ್ನೇ ಬಲಪಡಿಸಿ, ಮೊದಲಿನ ನಿರ್ಧಾರವನ್ನು ಸಡಲಿಸಿದರೆ ಮಾತ್ರ, ಅವಮಾನ ಕಟ್ಟಿಟ್ಟದ್ದು ಎಂದು ಅವಳಿಗೆ ಚೆನ್ನಾಗಿ ಗೊತ್ತಿತ್ತು. ಕೋಯಲಮ್ಮನ 'ಆಕಾಶವಾಣಿ ಬಾಯಿ' ಸುದ್ದಿಯನ್ನು ವಿಶ್ವದ ಮೂಲೆಮೂಲೆಗೂ ಅಟ್ಟಬಹುದು. ಪತ್ರಿಕೆಗಳೆಲ್ಲಾ ವ್ಯಂಗಚಿತ್ರಗಳನ್ನು ಬರೆದು ನಗಬಹುದು. ಎಲ್ಲರೂ ಉಗುಳಬಹುದು. ಮತ್ತೆ ಇಲ್ಲಿ ಉಳಿಯಲು ಸಾಧ್ಯವಿಲ್ಲ. ಆದುದರಿಂದ ಮಾನವನ್ನು ಹೇಗಾದರೂ ಉಳಿಸಿಕೊಳ್ಳಬೇಕು. ಕೊನೆಗೆ ತನ್ನ ಸಂಪತ್ತಿನಲ್ಲಿ ಅರ್ಧವನ್ನು Womens' Welfare Societyಗೆ ಕೊಡುವುದೆಂದು ನಿಷ್ಕರ್ಷಿಸಿದಳು.

ಈ ಸುದ್ದಿ ಹೇಗೋ ಡಂಗುರವಾಯಿತು! ಊರುರೇ ಇದನ್ನು ಕೇಳಿ ಅತ್ಯಾಶ್ಚರ್ಯಪಟ್ಟಿತು. ಗಂಡಸರು ಬಂದು ಮನೆಯಲ್ಲಿ ಹೆಂಗಸರ ಬಳಿ ವಿಚಾರಗಳನ್ನಾಡಿ ನಗತೊಡಗಿದರು. "ಇನ್ನು ಮಂಗಳೂರಿನಲ್ಲಿ ಹೆಣ್ಣು ನಾಯಿಗಳ ರಾಜ್ಯಭಾರ; ಹೊಸ, ಬೂದಿಗುಡ್ಡೆಗಳನ್ನು ನಿರ್ಮಿಸಬೇಕಾಯಿತು." ಹೆಂಗಸರಿಗೂ ಇದನ್ನು ಕೇಳಿ ಬೇಸರ ಬಂದಿತು. ಆ ಕೋಯಲಮ್ಮ ಬಿತ್ತಿದ ಬೀಜ ಬೆಳೆದರೆ, ನಾವು ಮರ್ಯಾದೆ ಬಿಟ್ಟು, ಬಟ್ಟೆ ಬಿಚ್ಚಿದಹಾಗೆ ಎಂದು ತೀರ್ಮಾನಿಸಿ, ಲಲಿತೆಯ ಬಳಿಗೆ ಬಂದರು.

"ನಿಮಗೇನು, ಹುಚ್ಚು ಲಲಿತಮ್ಮ!"

"ಆ 'ಬಿಕನಾಶಿ'ಗೆ ಹಣ ಕೊಡುತ್ತೀರಾ?"

"ನಿಮ್ಮ ತಲೆಗೆ ಹುಳ ಹಿಡಿದಿದೆಯೋ?"

"ಲಲಿತಮ್ಮ, ಇದೆಲ್ಲಾ ನಿಮ್ಮನ್ನು ಭಿಕಾರಿ ಮಾಡಲು ಕೋಯಲಮ್ಮನ ಶಿಖಾರಿ!"

"ಅಯ್ಯಯ್ಯೊ! ನಮ್ಮ ಲಲಿತಮ್ಮನಿಗೆ ಹಿಡಿದ ಗ್ರಹಚಾರವೇ!"

"ನೀವೆಲ್ಲಾದರೂ ಅವಳಿಗೆ ಚಿಕ್ಕಾಸು ಕೊಟ್ಟಿದ್ದೇ ಆದರೆ, ನಾವೊಮ್ಮೆ ಖಂಡಿತಕ್ಕೂ ಅವಳನ್ನು ಅಂದಮಾನಿಸಿಗೆ ಕಳುಹಿಸಿಯೇ ತೀರುತ್ತೇವೆ. ಅವಳ ಮೇಲೆ ಫಿರ್ಯಾದಿ ಕೊಂಡು ಹೋಗುತ್ತೇವೆ, ಕಳವಿನ ಮಾಲೆಂದು. ಲಕ್ಷಾಂತರ ರೂಪಾಯಿ ಖರ್ಚಾದರೂ ಚಿಂತಿಲ್ಲ."

"ನಾವೆಲ್ಲಾ ಬೂದಿ ಮುಚ್ಚಿದ ಕೆಂಡದ ಹಾಗೆ ಕಾಣಿ, ಲಲಿತಮ್ಮ! ಸ್ವಲ್ಪ ಹಾರಿದರೆ ಸಾಕು, ಊರನ್ನೇ ಸುಟ್ಟುಬಿಡುತ್ತೇವೆ."

"ಥೂ! ಯಾರಿಗೆ ಬೇಕಮ್ಮ ಅವಳ ಆ ಸೊಸಾಯಿಟಿ, ಲೀಗು ಎಲ್ಲಾ? ಅಲ್ಲಿ, ಅವರಾದರೂ ಹೇಳುವುದೇನು? ಗಂಡಸರನ್ನು ಬಿಟ್ಟುಬಿಡಿ, ಡ್ಯಾವೋರ್ಸ್ ಮಾಡಿ, ಮುಖಕ್ಕೆ ಸುಣ್ಣ ಹಚ್ಚಿಕೊಳ್ಳಿ. ಮರ್ಯಾದೆ ಬಿಟ್ಟು ಬೀದಿಯುದ್ದಕ್ಕೂ ಕಾರುಗಳಂತೆ ಓಡಾಡಿ. ಕೊನೆಗೆ ಸಮಯ ಬಂದರೆ, ಸೂಳೆಗೇರಿಗೂ ಇಳಿಯಿರಿ, ಅಂತ!"

"ಇಂಥವರ ಹುಚ್ಚು ಸುಧಾರಣೆಯಿಂದಾಗಿಯೇ, ಅಮ್ಮ, ನಮ್ಮಲ್ಲಿ ಹೆಂಗಸರಿಗೂ, ಗಂಡಸರಿಗೂ 'ಇಟಿಪಿಟಿ' ಇರುವುದು."

"ನೀವೇನಮ್ಮ, ಹಣವನ್ನು ಹೆಂಗಸರ ಉದ್ಧಾರಕ್ಕಾಗಿ ಕೊಡುವುದೇ? ಕೋಯಲಮ್ಮನ ಉದ್ಧಾರಕ್ಕಾಗಿ ಕೊಡುವುದೇ?"

"ಅಷ್ಟಿದ್ದರೆ, ನೀವೇ ಒಂದು ಸೊಸಾಯಿಟಿಯೋ, ಲೀಗೋ, ಕಾನ್ಫ ರೆನ್ಸೋ ಯಾಕೆ ತೆರೆಯಬಾರದು? ನಮ್ಮ ಸಂಪೂರ್ಣ ಬೆಂಬಲ ನಿಮಗಿದೆ."

"ಅಂತೂ, ಆ ಹಿಂದೀ-ಕನ್ನಡದ ಬೆರಕೆಯ ಪ್ರಾಣಿ ಬೇಡ."

"ಮತ್ತೆ........"

"ಮತ್ತೆ, ನಮಗೆ ಲಕ್ತಿಯೇ ಅಲ್ಲವೇ?"

"ಇಂಥವರ ಹಣೆಬರಹವೆಲ್ಲಾ ನನಗೆ ಚೆನ್ನಾಗಿ ಗೊತ್ತಮ್ಮ! ಸುಮ್ಮ ನೆಯೇ? ನನಗೆ ಎಪ್ಪತ್ತೈದು ವರ್ಷವಾಗಲಿಲ್ಲವೇ! ಯಾರು ತಾನೇ ನನ್ನ ಕಣ್ಣಿಗೆ ಮಂಕುಬೂದಿ ಎರಚಿಯಾರು, ನೋಡೋಣ! ಹತ್ತುವರ್ಷದ ಕೆಳಗೆ -ನಾನು ಹೇಳುತ್ತೇನಲ್ಲಾ, ಹೀಗೆಯೇ ಒಂದು ಅರ್ಧ ಸೂಳೆ-ಅರ್ಧ ಗರತಿ ಯಾದ ಹೆಂಗಸು ಬಂದಿತ್ತು. ಎರಡು ವಾರದ ತನಕ, ರಾಜಮಾರ್ಗದಲ್ಲೆಲ್ಲಾ ತನ್ನ ಹಿಂದೆ ಗಂಡಸರ ಪಡೆಯನ್ನು ಮೆರೆಯಿಸಿಕೊಂಡು ತನ್ನ ಪ್ರಭಾವವನ್ನು ಪ್ರದರ್ಶಿಸಿತು. ಕೊನೆಗೊಂದು, 'ಸ್ತ್ರೀ ಸಮಾಜ' ಸ್ಥಾಪನೆ ಎಂದಿತು. ನಮ್ಮ ಕುಂಬಾತಲೆಯ ಹೆಂಗಸರೆಲ್ಲಾ ಅದಕ್ಕೆ ಹುಚ್ಚುಗಟ್ಟಿದರು. ನಾನು ಸಾವಿರ ಬಾರಿ 'ಬೇಡ'ವೆಂದೆ. ಆದರೆ, ಈ 'ಮುಂಡೆ'ಯರೆಲ್ಲಾ ಕೇಳಿದರೇ? ಎಲ್ಲಾ ಅದರ ಥಳಕಿಗೆ ಮರುಳಾದರು. ನಾಲ್ಕೇ ದಿನದಲ್ಲಿ ಆ ಮುಂಡೆಗೆ ವಂತಿಗೆಯೆಂದು ಒಂದು ಕೋಟಿ ರೂಪಾಯಿಯತನಕ ವಸೂಲಾಯಿತು. ಉಪ್ಪಿಗೆ ಗತಿಯಿಲ್ಲದವರೂ ನೂರಾರು ರೂಪಾಯಿ ಕೊಂಡುಹೋಗಿ ಕೊಟ್ಟರೆ, ವಸೌಲ್ಯವೇರದೆ ಇದ್ದೀತೇ? ಐನೆಯ ದಿನ, ಐನೆಯ ದಿನವೇ ಸ್ತ್ರೀ ಸಮಾಜವೂ ಇಲ್ಲ ಮಣ್ಣೂ ಇಲ್ಲ. ಆ ಪ್ರಾಣಿ ಹಿಂದಿನ ದಿನವೇ ಇಂಗ್ಲಾಂಡಿಗೆ ಹಡಗು ಹತ್ತಿಯಾಗಿತ್ತು. ನಮ್ಮ ಹೆಂಗಸರೆಲ್ಲಾ ಸಿಟ್ಟಿನಿಂದ, ದುಃಖದಿಂದ, ಬೀದಿ ಯಲ್ಲಿ ಹೊರಳಾಡಿದರು, ಬೂದಿಯಲ್ಲಿ ಹೊರಳಾಡಿದರು! ಆದರೇನು? ಕೆಲ ವರು ಬಂದು ನನ್ನ ಕಾಲಿಗೆ ಬಿದ್ದು, ನಿಮ್ಮಮಾತು ಕೇಳದ್ದರಿಂದ ಹೀಗಾಯಿ ತೆಂದು ಕಣ್ಣೀರು ಸುರಿಸಿದರು. ಹಾಗೆ! ಈಗ ನೀನೂ, ನನ್ನ ಮಾತು ಕೇಳಮ್ಮ, ಲಲಿತಮ್ಮ! ಇಲ್ಲವಾದರೆ, ಹಿಂದಿನವರ ಗತಿಯೇ ನಿನಗೂ! ನನಗೇನು?"

"ಹೌದು, ಅಜ್ಜೀ! ನೀವಾದರೂ ಹೇಳಿ ಸ್ವಲ್ಪ ಲಲಿತಮ್ಮನಿಗೆ! ನಾವು ಹೇಳಿದರೆ, ಕೇಳುವುದಿಲ್ಲ. ನಿಮ್ಮ-ಹಿರಿಯರ, ಮಾತಿಗಾದರೂ ಸ್ವಲ್ಪ ಬೆಲೆ ಯಿಟ್ಟಾರು!"

"ಹಿರಿಯರು! ಹಿರಿಯರು! ನಾವು ಹಿರಿಯರು ಹೊರೆಯಾಗಿದ್ದೇವಮ್ಮ, ನಿಮ್ಮ ಕಿರಿಯರಿಗೆ!"

"ನಾನು, ಹಾಗಲ್ಲ, ಅಜ್ಜೀ!" ಎಂದು ಲಲಿತೆ, ಒಂದು ಮಾತನಾಡಿದಳು.

"ಹಾಗಾದರೆ, ನಮ್ಮಮಾತು ಕೇಳುತ್ತೀರಷ್ಟೇ?" ಎಂದು ಎಲ್ಲರೂ ಒಟ್ಟಾಗಿ ನುಡಿದರು.

"................"

"ನೋಡಿ! ಈಗೇಕೆ ಮಾತಿಲ್ಲ?"

"ಮೌನಂ ಸಮ್ಮತಿ ಲಕ್ಷಣವೇ?"

"ಅಲ್ಲ, ಮೌನಂ ಪಂಡಿತ ಲಕ್ಷಣವೇ?"

"ಆ ಶ್ಲೋಕವೆಲ್ಲಾ ಪ್ರಯೋಜನವಿಲ್ಲ; ಲಲಿತಮ್ಮ ತನ್ನ ಬಾಯಿಯಿಂದ ಹೇಳಬೇಕು, 'ಹೂಂ!" ಎಂದು ಇಲ್ಲವಾದರೆ, ಇದೇ ಬೀದಿಯಲ್ಲಿ, ಈಗಲೇ, ಬತ್ತಲೆಯಾಗಿ, ಸತ್ಯಾಗ್ರಹ! ಏನನ್ನುತ್ತೀರಿ?"

"ನಾವೆಲ್ಲಾ ತಯಾರೇ!"

ಆದರೆ, ಬತ್ತಲೆಯಾಗಿ ಸತ್ಯಾಗ್ರಹ, ಹೂಡುವುದಕ್ಕೆ ಮುಂಚಿತವಾಗಿಯೇ, ಅಪಜಯವಾಯಿತೆಂದು, ನಮ್ಮ ಕೈಲಾಗದೆಂದು, ಅವರು ಹಿಂದೆ ಹೋದರು. ದಾಮೋದರರಾಯರಿಗೆ, ಈ ಸುದ್ಧಿ ಮುಟ್ಟಿಸಲು, ರೇಸಿನಲ್ಲಿ ನಂಬರ್ ವನ್ ಬಂದ ಕುದುರೆಯ ಮೇಲೆಯೇ ಜನ ಹೋಯಿತು.

ಕುದುರೆ, 'ಹೇ! ಹೇ!' ಎಂದು ಬಂದಾಗ, ದಾಮೋದರ ಹೊಲದಲ್ಲಿ ಕೆಲಸ ಮಾಡುತ್ತಿದ್ದ. ಕುದುರೆಯನ್ನು ನೋಡಿ, ಮೊದಲು ಯಾರೋ ಒಬ್ಬ ಕೆಂಪು ಧೊರೆ, ಹೆಂಗಸರ ಬೇಟೆಗೆ ಬಂದಿರಬಹುದೆಂದು ತಿಳಿದ. ಕೊನೆಗೆ ಅದು ತಪ್ಪೆಂದು ತೋರಿ, ನಾಯಿ ಶಿಖಾರಿಗೆ ಬಂದಿರಬಹುದೋ ಎಂದು ಊಹಿಸಿದ. ರಾಯರೇ–ಧನಿಗಳೇ- ಕೆಲಸಬಿಟ್ಟು, ಕುದುರೆ ಬರುವುದನ್ನು ನೋಡುವುದನ್ನು ನೋಡಿ, ಒಕ್ಕಲುಗಳು ತಾವೂ ಅದೇ ಉದ್ಯಮದಲ್ಲಿ ತೊಡಗಿದರು. ಕುದುರೆ ಜವಾನ ಸನಿಯಕ್ಕೆ ಬಂದ.

"ದಾಮೋದರರಾಯರೆಂದರೆ ಯಾರು? ಅವರ ಮನೆಯೆಲ್ಲಿ?

ಆಶ್ಚರ್ಯ! ದಾಮೋದರನೊಡನೆಯೇ, ದಾಮೋದರನ ವಿಷಯ ಕೇಳುವುದು.

"ಯಾಕೆ ?'

"ಅವರ ತಂಗಿಯ ವಿಷಯ ಒಂದು ಮಾತು ಹೇಳಲಿಕ್ಕೆ ಬಂದೆ"

ದಾಮೋದರನಿಗೇನೋ ಸಂಶಯ ಬಂದಂತಾಗಿ, "ಅವರಿಗೆ ಮದುವೆಯಾಗಿದೆ." ಎಂದ.

"ಛೂ! ಅವರನ್ನು ಮದುವೆಯಾಗಲಿಕ್ಕಾಗಲೀ, ಹಾರಿಸಿಕೊಂಡು ಹೋಗಲಿಕ್ಕಾಗಲೀ, ನಾನು ಬರಲಿಲ್ಲ."

"ಮತ್ತೆ?"

"ನೀವೇ ದಾಮೋದರರಾಯರೋ?"

"ಇರಬಹುದು!"

"ಮನೆಗೆ ಹೋಗೋಣ; ಹೇಳುತ್ತೇನೆ."

"ಏಕೆ? ಏನಾದರೂ 'ವಾರಂಟು' ಇದೆಯೋ!"

"ಅಯ್ಯೋ! ಬೆಪ್ಪು ದಾಮೋದರರಾಯರೇ! ಮನೆಗೆ ಹೋಗೋಣ!"

ಮನೆಗೆ ಬಂದರು. ದಿವಾನ ಕುದುರೆಯನ್ನು ನೋಯಲುಬಿಟ್ಟ. ಜಗಲಿಯಲ್ಲಿ ದಾಮೋದರ ಹಾಸಿದ ಹಸೆಯಮೇಲೆ ಕುಳಿತ.

"ಸ್ವಲ್ಪ ಕುಳಿತಿರಿ; ಕಾಫಿಗೆ ಬೆಂಕಿ ಹಾಕಿ ಬರುತ್ತೇನೆ." ಎಂದ ದಾಮೋದರ.

"ಟಾಯ್ಮ್ ಇಲ್ಲ; ನಾನು ಹೇಳುವುದನ್ನು ಕೇಳಿ."

"ಏನು ?"

"ನನ್ನ ಹೆಸರು ದೇವೇಂದ್ರಯ್ಯ; ಕದ್ರಿ ಟೆಂಪಲ್ ರೋಡಿನಲ್ಲಿ ನಿವಾಸ. ಒಳ್ಳೇ ಆಸ್ತಿ, ಮನೆ, ಹಿತ್ತಲು ಎಲ್ಲಾ ಇದೆ, ಒಂದು ಗಂಡುಮಗು, ನಾಲ್ಕು ಹೆಣ್ಣುಮಕ್ಕಳು, ಮೂರು ಮಕ್ಕಳನ್ನು ಒಳ್ಳೇ ಕಡೆಗೆ ಮದುವೆಮಾಡಿ ಕೊಟ್ಟಿದ್ದೇನೆ. ನಾಲ್ಕನೆಯವಳಿಗೆ ಇದೀಗ ಮದುವೆಯ ಪ್ರಾಯ; ಮೊದಲ ಮೂರು ಅಳಿಯಂದಿರಿಗೆ ಒಳ್ಳೇ ವರದಕ್ಷಣೆಯನ್ನು ಕೊಟ್ಟಿದ್ದೇನೆ. ಅವರೆಲ್ಲಾ ಈಗ ಸುಖವಾಗಿದ್ದಾರೆ." ಎಂದು ತನ್ನ ಚರಿತ್ರೆಯನ್ನು ಹೇಳಿದ.

ದಾಮೋದರನಿಗೆ, ಇವರು ಲಲಿತೆಯಿಂದ ತನ್ನನ್ನು ತಿಳಿದುಕೊಂಡು ನಂಟುತನಕೆ ಬಂದುದೋ ಎಂದು ಸಂಶಯವಾಯಿತು. ಆದರೂ, "ವಿಷಯವೇನು, ದೇವೇಂದ್ರಯ್ಯ ?" ಎಂದು ಕೇಳಿದನು.

“ ಏನು ಹೇಳಲಿ, ದಾಮಣ್ಣ ! ಏನು ಹೇಳಲಿ ? ” ನಿಮ್ಮ ತಂಗಿಗೆ ಭಿಕಾರಿಯಾಗುವ ಆಲೋಚನೆಯಾಯಿತು.

“ ಹ್ಞೇ ! ”

“ ಮಂಗಳೂರಿನಲ್ಲಿ ಯಾವುದೋ Womens' Welfare Societyಗೆ ತನ್ನ ಸಂಪತ್ತನ್ನು ಕೊಡುತ್ತಾರಂತೆ ! ”

“ ಅವಳಿಗೇನು. ಹುಚ್ಚು ಹಿಡಿಯಿತೇ ? ”

“ ಅದೇ ನಾನೂ ಕೇಳುವುದು ! ”

“ ಯಾವುದು ಆ ಸೊಸ್ಯಾಟಿ ? ”

“ ಮೊನ್ನೆ ತಾನೇ ಒಂದು ಪ್ರಾರಂಭವಾಗಿದೆ. ಕೋಯಲಮ್ಮ ಎಂಬವಳು ಅದರ ‘ಪ್ರೆಸಿಡೆಂಟು’ ! ”

ದಾಮೋದರ ಏನೋ ಆಲೋಚಿಸುತ್ತಿದ್ದ.

“ ಇದರಲ್ಲಿ ಏನೋ ಹಿಕ್ಮತ್ತಿಯಿದೆ. ”

“ ಏನದು ? ”

“ ಮೊದಲಾಗಿ ಸಭೆಯಲ್ಲಿ, ಲಲಿತಮ್ಮನಿಗೆ ಸಭೆಯ ನೋಟೀಸೂ ಕೊಡದೆ, ಲಲಿತಮ್ಮ ಸೊಸ್ಯಾಟಿಗೆ ತಮ್ಮ ಸಂಪತ್ತನ್ನು ಕೊಟ್ಟಿದ್ದಾರೆಂದು ಸಭೆಯಲ್ಲಿ ಬಹಿರಂಗವಾಗಿ ಹೇಳಿದಳಂತೆ. ಲಲಿತಮ್ಮ ಈಗ ಮಾನವುಳಿಸಿ ಕೊಳ್ಳಲಿಕ್ಕಾಗಿ ಉಪಾಯವಿಲ್ಲದೆ ಸಂಪತ್ತನ್ನು ಕೊಡುತ್ತಾರೆಂದು ವದಂತಿ. ”

“ ಅವಳೇಕೆ ಹಾಗೆ ಮಾಡಿದಳು ? ”

“ ಅದೇ ಅಲ್ಲವೇ. ನಾನು ಹೇಳುವುದು, ಏನೋ ಹಿಕ್ಮತ್ತಿದೆ ಯೆಂದು. ”

“ ಏನದು ದೇವೇಂದ್ರಣ್ಣ ? ”

“ ಇದರಲ್ಲಿ ಬೇರೆಯವರ ಕೈವಾಡವೂ ಇದೆ. ”

“ ಯಾರವರು ? ”

“ ರಾಜಾರಾಮ ಮತ್ತು ಹೀರಾಬಾಯಿ ! ”

“ ಹಾಗಾದರೆ, ಸಲೀಸಾಯಿತು. ಲಲಿತೆಗೆ ಈ ವಿಷಯ ತಿಳಿಸಿದರೆ, ಅವಳೆಂದೂ ಕೊಡಲಾರಳು ! ”

“ ನಾವೆಲ್ಲಾ ಪ್ರಯತ್ನಿಸಿ ನೋಡಿದ್ದೇವಲ್ಲಾ ! ಆಧಾರವಿಲ್ಲದೆ, ಲಲಿ

ತಮ್ಮ ನಂಬುವುದಿಲ್ಲ. ನಾನು ತಿರುಪತಿ ತಿಮ್ಮಪ್ಪನ ಆಣೆ ಹಾಕಿ ಹೇಳಿದುದೂ ವ್ಯರ್ಥವಾದ ಮೇಲಲ್ಲವೇ, ಇಲ್ಲಿಗೆ ಬಂದದ್ದು !"

"ಹಾಗಾದರೆ, ಇದಕ್ಕೆ ಆಧಾರ ದೊರಕಿಸಿಕೊಳ್ಳುವುದು ಹೇಗೆ?"

"ಓಹೋ ! ದೊರಕಿಸಿಕೊಳ್ಳಬಹುದು, ಪ್ರಯತ್ನಪಟ್ಟರೆ."

"ಎಂಥ ಪ್ರಯತ್ನ ?"

"ಹೆಚ್ಚಿಗೇನಿಲ್ಲ; ಎರಡು ಕಾಸು ಖರ್ಚಾಗಬಹುದು."

"ಅಷ್ಟೆಯೇ !" ದಾಮೋದರನು ಹತ್ತು ರೂಪಾಯಿ ನೋಟನ್ನು ದೇವೇಂದ್ರಯ್ಯನಿಗೆ ಕೊಟ್ಟು, "ಹಾಗಾದರೆ, ಪ್ರಯತ್ನ ಮಾಡುತ್ತೀರಷ್ಟೇ ?" ಎಂದನು.

"ನೀವು ಮೊದಲು ಹೀಗೆಯೇ ಬಾಯಿಯಲ್ಲಿ ಹೇಳಿ ನೋಡಿ; ಅದು ಫಲಿಸದಿದ್ದರೆ, ತನ್ನ ಸಹಾಯ ಹೇಗೂ ಇದೆಯಲ್ಲ !" ಎಂದನು. ಸ್ವಲ್ಪ ತಡೆದು, ನೀವೂ, ಈಗ ನನ್ನೊಂದಿಗೆ ಬರುತ್ತೀರಲಿಲ್ಲ." ಎಂದನು. "ಹೂಂ" ಎಂದ ದಾಮೋದರ.

ಅವರು ಹೊರಡುವಾಗ ಸಾಧಾರಣ ಕತ್ತಲೆ. ದೀಪ ಹಚ್ಚುವ ಹೊತ್ತಾಗಿತ್ತು. ಒಕ್ಕಲುಗಳಿಗೆ ಹೊಲದಲ್ಲಿ ಮಾಡಬೇಕಾದ ಕೆಲಸಗಳ ಪಟ್ಟಿ ಹೇಳಿ, ಮನೆಯ ಕಡೆಗೆ ಜಾಗ್ರತೆ ಹೇಳಿ, ದಾಮೋದರ ಹೊರಟನು. ತಾನು ಹಿಂದಿರುಗಿ ಬರಲು ಕಡಿಮೆಪಕ್ಷ ಒಂದು ವಾರವಾದರೂ ಹಿಡಿದೀತು ಎಂದೂ ತಿಳಿಸಿದನು.

ನದಿಯ ಪಕ್ಕದ ದಾರಿಯಲ್ಲೇ ಹೊರಟರು. ಸಂಜೆಯ ಪ್ರಶಾಂತ ವಾತಾವರಣದಲ್ಲಿ ಪ್ರಯಾಣವು ಆನಂದಕರವಾಗಿತ್ತು. ಮೆಲ್ಲಮೆಲ್ಲನೆ ಅಲುಗುವ ಮರಗಳ ಎಲೆಗಳಿಂದ ಊದುವ ಗಾಳಿಯ ಸ್ಪರ್ಶವು ಆನಂದವನ್ನು ದ್ವಿಗುಣಿಸುತ್ತಿತ್ತು. ಕುದುರೆಯೂ ಮಂದಗಮನೆಯಿಂದ, ಉಲ್ಲಾಸಚಿತ್ತದಿಂದ ನಡೆಯುತ್ತಿತ್ತು. ನದಿಯಲ್ಲಿ ಕೆಲವು ದೋಣಿಗಳು ಬಿಟ್ಟ ಬಿರುಸು ಬಾಣಗಳಂತೆ, ಓಡುತ್ತಿದ್ದವು. ಬಂಡೆಗಳಮೇಲೆ ಹತ್ತಿ, ಹಾರುತ್ತಾ ಕೆಲವು ಬಾಲಕರು ಈಜಾಡುತ್ತಿದ್ದರು. ನದಿಗೆ ಬಾಗಿದ್ದ ವೃಕ್ಷಗಳ ಪ್ರತಿಬಿಂಬಗಳು, ಕುಣಿಯುವ ನೀರಿನೊಂದಿಗೆ ತಾವೂ ಕುಣಿಯುತ್ತಿದ್ದವು. ಕೆಲವು ಕಡೆ ಸೀರಿಂಗಿ, ಪುಳಿನರಾಶಿಗಳು ಗೋಚರಿಸುತ್ತಿದ್ದವು. ನದಿಯ ನಡುವೆ ಕುದುರುಗಳ ಸಿರಿಯು ಮನವನ್ನಾಕರ್ಷಿಸುತ್ತಿತ್ತು. ಗಾಳಿಗೆ

ಅಲುಗುವ ಕಬ್ಬಿನ ಗರಿಗಳು ಒಂದು ಬಗೆಯ ಗೀತವನ್ನು ಪ್ರಾರಂಭಿಸಿದ್ದವು. ಶಾಂತಿಮಯ ಸೌಂದರ್ಯ!

ದೇವೇಂದ್ರಯ್ಯನೂ, ದಾಮೋದರನೂ, ಆ ಸೌಂದರ್ಯವನ್ನು ಸವಿಯುತ್ತಾ, ಮುನ್ನಡೆದರು. ಅವರು ಕಡಲಿನ ಬಾಗಿಲಿಗೆ ಬಂದಾಗ ಚಂದಿರನು ದಿಗಂತವನ್ನಡರಿದ್ದ. ಡೋಣಿಗಳ ಸಂಚಾರವು ಕಡಮೆಯಾಗಿತ್ತು. ಒಬ್ಬ ಅಂಬಿಗನು ಮಾತ್ರ ಕೊನೆಯದಾಗಿ, ಆಚೆ ದಡಕ್ಕೆ ಹೊರಡುವ ಸನ್ನಾಹದಲ್ಲಿದ್ದ. ಅನಾಯಾಸವಾಗಿ ಎರಡು ಕಾಸು ಸಿಕ್ಕುವ ಸಂದರ್ಭ ದೊರೆತುದರಿಂದ ಅಂಬಿಗನಿಗಾನಂದವಾಯಿತು. ಡೋಣಿಯಲ್ಲಿ ಚಾಪೆ ಬಿಡಿಸಿ, ಅನುಕೂಲವಾಗಿದ್ದುದರಿಂದ, ದೇವೇಂದ್ರಯ್ಯ. ದಾಮೋದರರಿಗೂ ಪರಮಾನಂದವಾಯಿತು. ಪಟ ಬಿಡಿಸಿದ ಡೋಣಿಯು ಗಾಳಿಯ ಸಾಹ್ಯದಿಂದಲೇ ಮೆಲ್ಲನೆ ಮುನ್ನಡೆಯಿತು. ದೇವೇಂದ್ರಯ್ಯ–ದಾಮೋದರರನ್ನು ತೂಕಡಿಕೆ ಪೀಡಿಸತೊಡಗಿತು. ಅದರೊಂದಿಗೆ ಅಂಬಿಗನ ಗಾನವೂ ಸೇರಿ ಜೋಗುಳವಾಯಿತು. ಅವರು ಸುಲಭವಾಗಿ ನಿದ್ರಾವಶರಾದರು.

ದಡ ತಲಪಿದ ಮೇಲೆ, ಅಂಬಿಗನೇ ಅವರನ್ನೆಚ್ಚರಿಸಿದ. ದೋಣಿಯವನ ಬಾಡಿಗೆ ತೆತ್ತು, ಅವರು ಸಿಗರೇಟಿನ ಬೂದಿ ಹಾರಿಸುತ್ತಾ ಮುನ್ನಡೆದರು. ಸುತ್ತಲಿನ ಕಟ್ಟಡ, ಮರ ಮಟ್ಟುಗಳು ಕತ್ತಲೆಯಲ್ಲಿ, ಭೂತಗಳಂತೆ ಕಾಣುತ್ತಿದ್ದವು; ಯಾವುದೋ ಸವಾರಿ ಗಾಡಿ ಹೋಗುತ್ತಿದ್ದುದನ್ನು ಕಂಡು ಅದನ್ನೇರಿದರು. ಸಾಧಾರಣ ಅರ್ಧ ಮೈಲು ಸಾಗಿದ ಮೇಲೆ, "ನಾಳೆ ಸಿಕ್ಕುತ್ತೇನೆಂ"ದು ದೇವೇಂದ್ರಯ್ಯ ಇಳಿದು ಹೋದ. ದಾಮೋದರಯ್ಯ ಸ್ವಲ್ಪ ಹೊತ್ತು ಗಾಡಿಯ ಹೊರಗೆ ತಲೆಹಾಕಿ ನೋಡುತ್ತಿದ್ದ. ದಾರಿಯ ಎಡಪಕ್ಕದಲ್ಲಿ ಒಂದು ಚಿಕ್ಕ ಗುಡ್ಡ; ಅದರ ಮೇಲೆ ಪೂರ್ಣಚಂದಿರನ ನಗು; ಆಗಾಗ ಕೇಳಿ ಬರುತ್ತಿರುವ ಹಕ್ಕಿಯೊಂದರ ಕೂಗು; ಇಬ್ಬನ್ನಿಯಲ್ಲಿ ತೊಯ್ದು ಚಾಮರವನ್ನು ಬೀಸುತ್ತಿರುವ ಮರಗಳು; ಎಲ್ಲೆಡೆಯೂ ನೀರವ, ನಿಶ್ಶಬ್ದ! ಸಂಪೂರ್ಣ ಜಡವಾದ ಜಗತ್ತಿನಲ್ಲೇ, ಆ ಗಾಡಿಯೊಂದೇ ಚೇತನದಿಂದ, ತನ್ನ 'ಟಕಟಕ' ಸದ್ದಿನೊಂದಿಗೆ ಸಾಗಿದೆ. ದಾಮೋದರ, ನೋಡುತ್ತಿದ್ದಂತೆ, ಚಳಿಗಾಳಿ ಬೀಸಿ ಮೈನಡುಗಿತು. ಹಾಗೆ, ಮುಖವನ್ನೊಳಗೆಳೆದುಕೊಂಡವನು ಕುಳಿತಲ್ಲೇ ನಿದ್ದೆಹೋದ.

ಲಲಿತೆಯ ಮನೆಯ ಬಳಿಗೆ ಬಂದಾಗ, ಚಂದಿರನು ಕಂತುವುದರಲ್ಲಿದ್ದ.

ಮನೆಯೊಳಗೆ ಲಲಿತೆಯ ಹಾಗೂ ಭುಜಂಗನ ಬಲವಾದ ಗೊರಕೆಯು ಶಬ್ದ ಕೇಳಿಸುತ್ತಿತ್ತು. ದಾಮೋದರ ಬಾಗಿಲು ತಟ್ಟಿದ. ನಾಲ್ಕಾರು ಬಾರಿ, "ಲಲಿತೆ! ಲಲಿತೆ!" ಎಂದು ಕೂಗಿದ.

ಲಲಿತೆ ಎಚ್ಚತ್ತಳು. "ಯಾರದು?" ಎಂದು ಒಳಗಿನಿಂದಲೇ ಹೆದರಿಕೆಯಿಂದ ಕೇಳಿದಳು.

"ಹೆದರಬೇಡ, ಲಲಿತೆ! ನಾನು, ದಾಮೋದರ!"

"ಯಾರು, ಅಣ್ಣನೇ?" ಎಂದು ಮಿಂಚಿನ ವೇಗದಿಂದ ಎದ್ದು ಬಂದು ಬಾಗಿಲು ತೆರೆದಳು.

"ಇದೇನಣ್ಣ, ಈ ಅಪರಾತ್ರಿಯಲ್ಲಿ?"

"ಎಲ್ಲಾ ನಾಳೆ ಹೇಳೋಣ; ಈಗ ಮಲಗು."

"ಎಲ್ಲಿಂದ ಬಂದೆ?"

"ಮನೆಯಿಂದಲೇ! ನೀನು ಮಲಗು."

"ಊಟ–ಗೀಟ............"

"ಎಲ್ಲಾ ಆಗಿದೆ; ಬೇಗನೇ ಒಂದು ಚಾಪೆ ಕೊಡು; ನಿದ್ರೆ ಬರುತ್ತದೆ."

ದಾಮೋದರನು ಚಾಪೆಯ ಮೇಲೆ ಕೈಕಾಲು ಬಿಡಿಸಿ ಮಲಗಿದ. ಚೆನ್ನಾಗಿ ಬೆಳಗಾಗುವ ತನಕ ಅವನ ಗೊರಕೆ ಕೇಳಿಸುತ್ತಿತ್ತು. ಒಂಭತ್ತು ಗಂಟೆಗೆ ಎಚ್ಚರವಾಯಿತು. 'ಓ! ಎಷ್ಟು ಹೊತ್ತಾಯಿತು!' ಎಂದು ತಟಕ್ಕನೆ ಎದ್ದ. ಮುಖ ತೊಳೆದುಕೊಂಡು ಬರುವುದರೊಳಗಾಗಿ ಕಾಫಿ, ತಿಂಡಿ ಸಿದ್ಧವಾಗಿದ್ದಿತು.

ಮಧ್ಯಾಹ್ನ ಕಳೆಯಿತು; ಸಂಜೆಯೂ ಬಂದಿತು. ಲಲಿತೆಯಾಗಲೀ, ದಾಮೋದರನಾಗಲೀ ಮಾತನಾಡಲಿಲ್ಲ. ಲಲಿತೆ, ಅವನಾಗಿಯೇ ಮಾತನಾಡಲಿ, ಎಂದು ಸುಮ್ಮನಿದ್ದಳು. ದಾಮೋದರನು ಮಾತನಾಡಲು ಸರಿಯಾದ ದಾರಿಯನ್ನು ಹುಡುಕುತ್ತಿದ್ದ. ಐದು ಘಂಟೆಗೆ ಸರಿಯಾಗಿ, ಕೋಯಲಮ್ಮ ಕಳುಹಿಸಿದ ಯಾವನೋ ಒಬ್ಬ ಹುಡುಗ ಬಂದ. "ಅಮ್ಮ, ನೀವು ಬೇಂಕಿಗೆ ಚೆಕ್ಕು ಯಾವಾಗ ಬರೆದುಕೊಡುತ್ತೀರೆಂದು, ತಿಳಿದು ಬರಲು ಕಳಿಸಿದ್ದಾರೆ" ಎಂದ.

ದಾಮೋದರನಿಗೆ, ಸುಲಭವಾದ ದಾರಿ ದೊರೆತಂತಾಯಿತು.

"ಏನಿದು, ಲಲಿತೆ?" ಎಂದನು.

ಲಲಿತೆಯ ಹೃದಯದಲ್ಲೇನೋ ಆಯಿತು. ಆ ಹುಡುಗನನ್ನು ಉಪಾಯ

ವಾಗಿ ಕಳಿಸಿದಳು. ಅಣ್ಣನೆಡೆಗೆ ತಿರುಗಿ; "ಹಾಗಾದರೆ, ನಿನಗೆ ಇನ್ನೂ ಗೊತ್ತೇ ಇಲ್ಲ." ಎಂದಳು ಮೆಲ್ಲನೆ.

"ಅದೇ, ಎಲ್ಲಾ ಗೊತ್ತಾಯಿತು. ಏನಿದು, ನಿನ್ನ ಹುಚ್ಚುತನ?"

"ಉಪಾಯವಿಲ್ಲಣ್ಣ."

"ಏನು ಉಪಾಯ?"

"ಹೆಂಗಸರ ಉದ್ಧಾರಕ್ಕಾಗಿ ಕೊಡುವಾಗ ನಿನಗೇಕಿಷ್ಟು ಹೊಟ್ಟೆಕಿಚ್ಚು?"

"ಉದ್ಧಾರ! ಉದ್ಧಾರ! ನಿನ್ನ ಉದ್ಧಾರಕ್ಕಾಗಿ ಬೆಂಕಿ ಬಿತ್ತು! ತಂದೆಯ ಮರಣಶಯ್ಯೆಯ ಬಳಿ ಪ್ರತಿಜ್ಞೆ ಮಾಡಿದ್ದೇನಲ್ಲಾ, ನಿನ ಗೋಸ್ಕರವಾಗಿ."

"................"

"ಇದರಲ್ಲಿರುವ ಕುಯುಕ್ತಿಯನ್ನು ಬಲ್ಲೆಯಾ?"

"ಏನದು?"

"ಇದೆಲ್ಲಾ ಹೀರಾ-ರಾಜಾರಾಮನ ಒಳಸ್ಥಾನವೆಂಬುದನ್ನ."

"ನಾನೂ ಇಂಥ ಸುಳ್ಳು ಹೇಳಿಕೆಗಳನ್ನು ಕೇಳಿದ್ದೇನಣ್ಣ, ಆಧಾರ ವಿಲ್ಲದೆ, ಯಾವುದನ್ನೂ ನಂಬಬಾರದು"

"ನಾನು ಆಧಾರ ತಂದು ತೋರಿಸಿದರೆ ನಂಬುತ್ತೀಯಾ?"

"ಹೂಂ!" ಎಂದಳು.

ದಾಮೋದರನು ಆ ದಿನ ಮತ್ತೆ ಮಾತನಾಡಲಿಲ್ಲ. ರಾತ್ರಿ ಮಲಗಿ ಕೊಂಡರೂ, ಅದೇ ಕುರಿತು ಆಲೋಚಿಸುತ್ತಿದ್ದನು. ದೇವೇಂದ್ರಯ್ಯ ಮೋಸ ಕೊಟ್ಟನೋ ಎಂಬುದೇ ಅವನ ಬಲವಾದ ಸಂದೇಹ! ಆ ರಾತ್ರಿ ಯೆಲ್ಲಾ ಅದೇ ಆಲೋಚನೆಯೇ ಆಯಿತು. ಮರುದಿನ ಮುಂಜಾನೆ, ಲಲಿತೆ, ಏಳುವುದಕ್ಕೆ ಮುಂಚಿತವಾಗಿಯೇ ಅವನೆದ್ದು ಹೊರಗೆ ಹೋಗಿದ್ದನು.

ಕೃಷ್ಣಭವನದ ತನಕ ನಡೆದು, ಮೇಜಿನಮುಂದೆ ಕುಳಿತು, ಕಾಫಿ—ತಿಂಡಿಗಳಿಗೆ, 'ಆರ್ಡರ್' ಮಾಡಿದನು. ತಿಂಡಿಯನ್ನು ಬರಿದುಮಾಡಿ, ಕಾಫಿ ಕುಡಿಯುತ್ತಿರುವಾಗ, ಯಾರೋ ಹಿಂದಿನಿಂದ ಹೆಗಲಮೇಲೆ ಕೈಯಿಟ್ಟರು. ನೋಡಿದರೆ,– ದೇವೇಂದ್ರಯ್ಯ!

"ಏನು, ಸ್ವಾಮಿ?" ಎಂದನು ಇವನು.

''ಹೋ! ದೇವೇಂದ್ರಯ್ಯ, ಬನ್ನಿ, ಬನ್ನಿ. ಕಾಫಿಯಾಯಿತೇ?'' ಎಂದನು.

''ಆಗಿದೆ!'' ಎಂದರೂ ಬಿಡಲಿಲ್ಲ. ಅವನೊಂದಿಗೆ ಪುನಃ ತಾನೂ ಒಂದು ಕಪ್ ಕಾಫಿ ಕುಡಿದನು.

ಹಣ ಕೊಟ್ಟು, ಹೊರಗೆ ಬರುವಾಗ, ದೇವೇಂದ್ರಯ್ಯ ಕೇಳಿದನು; ''ಏನಾಯಿತು; ಸ್ವಾಮೀ!''

''ಪ್ರಯೋಜನವಿಲ್ಲ; ನೀವು ಹೇಳಿದ ಹಾಗೇ, ಆಧಾರವಿಲ್ಲದೆ, ಅವಳು ನಂಬುವದಿಲ್ಲ.''

''ಹೂಂ!'' ಎಂದ ದೇವೇಂದ್ರಯ್ಯ.

''ನಾನೀಗ ನಿಮ್ಮನ್ನು ಹುಡುಕಿಕೊಂಡೇ ಬಂದೆ.''

''ಸರಿ; ಈ ಕಾಗದವನ್ನು ಕೊಂಡು ಹೋಗಿ, ಅವರಿಗೆ ತೋರಿಸಿದರೆ, ಎಲ್ಲಾ ಬಗೆಹರಿದೀತು.''

ದಾಮೋದರ, ಕಾಗದ ಬಿಡಿಸಿ ಓದಿದನು. ಆಶ್ಚರ್ಯದಿಂದ, ''ಇದು ನಿಮಗೆ ಹೇಗೆ ಸಿಕ್ಕಿತಯ್ಯಾ!'' ಎಂದನು.

''ಅದೆಲ್ಲಾ, ಅಧಿಕಪ್ರಸಂಗ, ನಿಮಗೇಕೆ? ನಿಮ್ಮ ಕೆಲಸವಾಯಿತಷ್ಟೇ!''

ದಾಮೋದರನೂ, ''ಆಗಲಿ! ನನಗೇಕೆ?'' ಎಂದು ಸುಮ್ಮನಾದನು.

''ನಾನು ಬರುತ್ತೇನೆ.'' ಎಂದು ದೇವೇಂದ್ರಯ್ಯನಂದಾಗ, ದಾಮೋದರ, ''ತಡೆಯಿರಿ; ನಿಮ್ಮದು ಬಹಳ ಉಪಕಾರವಾಯಿತು; ಎಂದು ಹತ್ತು ರೂಪಾಯಿ ಕೊಡಹೋದನು.

''ಲಂಚ. ಬೇಡ, ಮೊನ್ನೆ ಕೊಟ್ಟದ್ದೇ ಹೆಚ್ಚಾಯಿತು. ಪ್ರೀತಿ ಇರಲಿ.'' ಎಂದು ದೇವೇಂದ್ರಯ್ಯ ತನ್ನ ದಾರಿ ಹಿಡಿದು ಹೋದನು.

ದಾಮೋದರ ಮನೆಗೆ ಬಂದಾಗ, ಲಲಿತೆ ಅವನ ಬರವನ್ನೇ ಹಾರೈಸಿ ಕೊಂಡಿದ್ದಳು. ''ಎಲ್ಲಿಗೆ ಹೋದದ್ದಣ್ಣ?'' ಎಂದು ಮೊದಲ ಪ್ರಶ್ನೆ ಹಾಕಿದಳು.

''ನಿನಗೆ, ಆಧಾರ ತೆಗೆದುಕೊಂಡು ಬರಲು.''

''ಏನು?''

'' ಈ ಕಾಗದವನ್ನು ಓದಿ ನೋಡು; ಎಲ್ಲವೂ ಗೊತ್ತಾಗುತ್ತದೆ.''

ಲಲಿತೆ ಕಾಗದವನ್ನು ಬಿಡಿಸಿದಳು. ರಾಜಾರಾಮನ ಅಕ್ಷರವೆಂದು ಕೂಡಲೇ ಗೊತ್ತಾಯಿತು; ಹಾಗೆಯೇ ಒಕ್ಕಣೆಯನ್ನೋದಿದಳು.

ಮಿಸ್ ಕೋಯಲಮ್ಮನಿಗೆ,—ನಮಸ್ಕಾರಗಳು.

ಲಲಿತಾಬಾಯಿ donation ಕೊಡುವ ವಿಚಾರ ಹೇಳಿದ್ದು ನಿಮಗೆ ಗೊತ್ತಿರಬಹುದು. ಅದನ್ನು ವಶಪಡಿಸಿಕೊಳ್ಳುವ ಆಲೋಚನೆಯಲ್ಲಿದ್ದೇವೆ. ಅದಕ್ಕೆ ನಮಗೆ, ನಿಮ್ಮ ಸಹಾಯ ಬೇಕು. ಎಲ್ಲಾದರೂ ನಮ್ಮ ಕಾರ್ಯ ಸಿದ್ಧಿಸಿದರೆ, ನಿಮಗೆ ೫,೦೦೦ ರೂಪಾಯಿ ಬಹುಮಾನವಾಗಿ ಕೊಡುತ್ತೇವೆ.

ಇತಿ,

ಹೀರಾಬಾಯಿ ಮತ್ತು ರಾಜಾರಾಮರಾವ್.

ಕಾಗದವನ್ನೋದಿ ಲಲಿತೆ ಸಿಟ್ಟಿನಿಂದ ಕುದಿದಳು.

" ಈಗ ನಂಬುತ್ತೀಯಷ್ಟೇ ?" ಎಂದನು, ದಾಮೋದರ.

" ನನ್ನನ್ನು ಕ್ಷಮಿಸಣ್ಣ !"

" ಭುಜಂಗನು ನಿನ್ನನ್ನು ಕ್ಷಮಿಸಬೇಕು. ತಲೆ ಸರಿಯಿಲ್ಲದೆ, ಅವನನ್ನು ನೀನು ಭಿಕಾರಿಯಾಗಿಮಾಡುತ್ತಿದ್ದೆ."

ಅಂದೇ, ದಾಮೋದರನ ಇಚ್ಛೆಯಂತೆ, ಲಲಿತೆ ಕೋಯಲಮ್ಮನಿಗೆ ಒಂದು ಕಾಗದ ಬರೆದಳು.

ಮಿಸ್ ಕೋಯಲಮ್ಮ,

ನಿಮ್ಮ, ಹೀರೆ-ರಾಜಾರಾಮರ ನೀಚತನವೆಲ್ಲಾ ಬಯಲಿಗೆ ಬಿದ್ದಿದೆ. ಸಂಪತ್ತನ್ನು ನಿಮಗೆ ಕೊಟ್ಟು, ನನ್ನ ಭುಜಂಗನಿಗೆ ಕರಟ-ಕೋಲು ಕೊಡುವಷ್ಟು ಮೂರ್ಖಳು ನಾನಲ್ಲ. ಇನ್ನು ನೀವು ಈ ವಿಷಯದಲ್ಲಿ ಚಕಾರವೆತ್ತುವುದಾದರೆ, ನಿಮ್ಮ ಒಳಸಂಚಿನ ಪತ್ರ, ನಮ್ಮ ಕೈಸೇರಿದೆ, ವ್ಯವಹರಣೆ ನಡೆಸಲಾದೀತು. ಎಚ್ಚರಿಕೆ !

ಲಲಿತಾಬಾಯಿ

ಕಾಗದವನ್ನೋದಿ, ಕೋಯಲಮ್ಮ ಒಮ್ಮೆ ಆಕಾಶಕ್ಕೆ ಹಾರಿ, ಪಾತಾಳಕ್ಕೆ ಬಿದ್ದಿರಬಹುದು.

## ೧೪

ನಾಲ್ಕಾರು ದಿನಗಳಿಂದ, ರಾಮಗೋಪಾಲನ ಸ್ಥಿತಿಯಲ್ಲೇನೋ ಬದಲಾವಣೆಯಾಗಿತ್ತು. ಊರು, ದೂರವಾಗಿ ಕಾಡು ಹತ್ತಿರವಾದುದರಿಂದ,

ಅವನಿಗೀಗ ಸ್ವರ್ಗ-ನರಕಗಳ ಕಲ್ಪನೆಯಾಗಿ, ತನ್ನ ಪಾಪವು ಎಷ್ಟು ಘೋರ ವಾಗಿರಬಹುದೆಂದು ಪರಿತಪಿಸುತ್ತಿದ್ದನು. ಎಷ್ಟು ಮಹಿಳೆಯರಬಾಳನ್ನು ತಾನು ಗೋಳಾಗಿ ಮಾಡಿದ್ದೇನೆಂಬುದನ್ನು ನೆನೆದು ಹುಚ್ಚಾಗುತ್ತಿದ್ದನು. ಹರಿಕಥಾ ದಾಸರು ವರ್ಣಿಸಿದ ವಿವಿಧ ನರಕಗಳ ಕಲ್ಪನೆಯನ್ನು ತನ್ನ ಮನಸ್ಸಿನಲ್ಲಿ ಚಿತ್ರಿಸಿಕೊಂಡು ಮಿಡುಕುತ್ತಿದ್ದನು.

ಸಂಜೆ ನಾಲ್ಕು ಘಂಟೆಯ ಸಮಯ; ಇಂದೂ, ಕದ್ರಿಗಿರಿಯಮೇಲೆ ಕುಳಿತುಕೊಂಡು, ಅದೇ ವಿಚಾರದಲ್ಲಿ ತನ್ಮಯನಾಗಿದ್ದನು. ಪಾಪದ ಭಾರ ವನ್ನು ಹೊತ್ತುಕೊಂಡು, ಎದುರಿಗಿದ್ದ ಮಂಜುನಾಥನ ಮೂರುತಿಯನ್ನೂ ನೋಡಲಾರದವನಾಗಿದ್ದನು.

ಸುಮಾರು ಐದು ಗಂಟೆ , ರಾಜಾರಾಮನು ಆ ದಾರಿಯಾಗಿ ಹೋಗು ವುದನ್ನು ನೋಡಿದನು. ಅವನು ಇವನನ್ನು ನೋಡದೆ, ನೆಟ್ಟಗೆ ಹೋಗು ತ್ತಿದ್ದನು. "ರಾಜಾರಾಮರಾಯರೇ!" ಎಂದು ಕರೆದನು.

ರಾಜಾರಾಮನಿಗೆ ಆಶ್ಚರ್ಯವಾಯಿತು. ಎಂದೂ ರಾಮಗೋಪಾಲನು, ಅವನನ್ನು ಹಾಗೆ ಬಹು ವಚನದಿಂದ ಸಂಬೋಧಿಸಿದವನಲ್ಲ. ಬಳಿಗೆ ಬಂದು, "ಏನಾಯಿತೋ, ನಿನಗೆ? ಹುಚ್ಚನಹಾಗಿದ್ದೀಯಲ್ಲಾ!"

"ನನ್ನಾಣೆಯಿದೆ, ರಾಜಾರಾಮರಾಯ್, ನೀವೀಗ ನೆಟ್ಟಗೆ ಮನೆಗೆ ಹೋಗಬೇಕು."

"ನಾನೀಗ ಮನೆಗೇ ಹೋಗುವುದು." ಎಂದನು ನಗುತ್ತಾ.

"ಆ ಮನೆಗಲ್ಲ; ಲಲಿತಮ್ಮನ ಮನೆಗೆ!"

"ಓಹೋ! ಇದೇನು, ಹೊಸ ಅಧ್ಯಾಯ ಪ್ರಾರಂಭವಾಯಿತೇ?"

"ಅಂಥಃ ಪತಿವ್ರತೆಯ ಪಾದಸೇವೆ ಮಾಡಬೇಕು, ನಮ್ಮಂಥ ಪಾಪಿಗಳು!"

"ಇದೆಲ್ಲಾ ನೀನು ಹೇಳಲು ಏನು ಕಾರಣ?"

"ಆ ದಾರಿಯಾಗಿ ಬರುತ್ತಿದ್ದೆ. ಏಕೋ. ಒಳಗೆ ನೋಡೋಣ ಅನಿ ಸಿತು.. ನೋಡಿದೆ, ನಿಮ್ಮ ಪಟಕ್ಕೆ ಮಲ್ಲಿಗೆಹೂವಿನ ಹಾರ ಹಾಕಿತ್ತು ಬಳಿಯಲ್ಲೇ ಲಲಿತಮ್ಮ ದುಃಖದಿಂದ ನಿಂತುಕೊಂಡಿದ್ದರು. ನೋಡಿ, ನನಗೆ ಕಣ್ಣಲ್ಲಿ ನೀರು ಬರುವ ಹಾಗಾಯಿತು "

“ಓಹೋ! ಸರಿ, ನೀನೇನೀಗ ನನ್ನೊಂದಿಗೆ ಬರುತ್ತೀಯೋ ಇಲ್ಲವೋ?”

“ಹೋಗೋಣ.” ಎಂದು ಎದ್ದನು.

ಮನೆಗೆ ಬಂದೊಡನೆಯೇ, ರಾಜಾರಾಮ ಹೀರೆಯೊಡನೆ, “ರಾಣೀ! ನನಗಿಂದು ಸುನೀತಿಶ್ರವಣವಾಯಿತು!”

“ಯಾರಿಂದ?”

“ಮತ್ತಾರಿಂದ? ನಿನ್ನ ಗಂಡಯ್ಯನಿಂದಲೇ!”

“ಏನೆಂದು?”

“ನಾನು ನಿನ್ನನ್ನು ಬಿಡಬೇಕಂತೆ. ಲಲಿತೆಯನ್ನು ಸೇರಬೇಕಂತೆ!”

“ಹಾ! ಅವನು ಇಷ್ಟು ಮುಂಬರಿದನೇ?” ಎಂದು ರಾಮಗೋಪಾಲನೆಡೆಗೆ ತಿರುಗಿ, “ಇದೆಲ್ಲಾ ನಿಜವೇನೋ?” ಎಂದು ಕೇಳಿದಳು.

“ನಿಜವಲ್ಲದೆ, ಮತ್ತೆ ಸುಳ್ಳೇನು?”

“ಚಂಡಾಲ! ಈಗಲೇ ನಡಿ, ನನ್ನ ಮನೆಯಿಂದ.”

“ಹೋಗುತ್ತೇನೆ, ಹೀರಾ! ಹೋಗುತ್ತೇನೆ. ಇದುತನಕ ಮಾಡಿದ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಹೋಗುತ್ತೇನೆ. ಹೋಗಿ, ಆ ಲಲಿತಮ್ಮನ ಪಾದಸೇವೆಯನ್ನೇ ಮಾಡುತ್ತೇನೆ. ಆದರೆ?–ನೀನು! ಮುಂದಿನದನ್ನು ಜ್ಞಾಪಿಸಿಕೋ! ದುಡುಕಬೇಡ!”

ರಾಮಗೋಪಾಲನು ಹೋಗಿ, ಲಲಿತೆಯ ಮರೆಹೊಕ್ಕನು. ಲಲಿತೆ, ಅವನನ್ನು ಆದರದಿಂದ ಸ್ವಾಗತಿಸಿದಳು. ಊರಲ್ಲಿ ಕೆಲವರು ಇದಕ್ಕೂ ಟೀಕೆ ಮಾಡಿದರು. “ಇದು Exchange System! ಲಲಿತೆಯ ಗಂಡ, ಹೀರೆಗೆ, ಹೀರೆಯ ಗಂಡ ಲಲಿತೆಗೆ,” ಎಂದು ನಕ್ಕರು.

× × × ×

“ಸಾರ್! ಸಾರ್!” ಎಂದು ಶಾಲಾ ಪೇದೆ ಕರೆದನು.

ಹೆಡ್ಮಾಸ್ಟರನು ತಲೆಯೆತ್ತಿ ನೋಡಿದನು. ಎದುರಾಗಿ ಭುಜಂಗನು, ಶಾಲಾಪೇದೆಯೂ ನಿಂತಿದ್ದರು.

“ಏನು ವಿಚಾರ?” ಎಂದು ಕೇಳಿದರು.

“ಈ ಹುಡುಗರನ್ನು ಆಳುವುದು ಬಹಳ ಕಷ್ಟವಾಗಿದೆ, ಸಾರ್!

ಮುಂಡೇ ಮಕ್ಕಳು ಎಷ್ಟು ಹೇಳಿದರೂ ಕೇಳುವುಲ್ಲ. ಆ ಹುಣಸೇಮರ ಹತ್ತಿ, ಹತ್ತಿ ಸಾಯುತ್ತಾರೆ. ನೋಡಿ, ಈ ಹುಡುಗ ಈಗ ಹತ್ತಿ ಬಿದ್ದ.''

''ನೀನು ಹೋಗು.'' ಎಂದರು. ಅವನು ಹೋದ.

''ನಿನ್ನ ಹೆಸರೇನು?'' ಎಂದರು ಭುಜಂಗನೊಡನೆ.

''ಭುಜಂಗ.''

''ಭುಜಂಗರಾವ್! ಅಲ್ಲವೇ?''

''ಹೂಂ!!''

''ಅಪ್ಪನ ಹೆಸರು?''

''ಗೊತ್ತಿಲ್ಲ.''

''ಬದುಕಿದ್ದಾರೋ, ಸತ್ತಿದ್ದಾರೋ?''

''ಗೊತ್ತಿಲ್ಲ!''

''ತಾಯಿಯ ಹೆಸರೂ ಗೊತ್ತಿಲ್ಲವೇ!''

''ಲಲಿತಾ!''

ಹೆಡ್‌ಮಾಸ್ತರರಿಗೆ ಆಶ್ಚರ್ಯವಾಯಿತು. ''ಲಲಿತೆಯ ಮಗನೋ, ನೀನು?'' ಎಂದರು, ಯಾವುದೋ ಆಲೋಚನೆಯಿಂದ. ''ನಾನು ನಿಮ್ಮ ಮನೆಗೆ ಬರಲೇನು'' ಎಂದರು.

''ಓಹೋ! ಬನ್ನಿ, ತಾಯಿಗೆ ಬಹಳ ಸಂತೋಷವಾದೀತು.'' ಕೊನೆಯ ಮಾತನ್ನು ಏನೋ ರೀತಿಯಾಗಿ ತಿಳಿದರು ಹೆಡ್‌ಮಾಸ್ತರರು. ಭುಜಂಗನಿಗೆ ಮರ ಹತ್ತಬಾರದೆಂದು ಒಂದೆರಡು ಒಳ್ಳೆಯ ನುಡಿಗಳನ್ನಾಡಿ ಕಳಿಸಿದರು.

ಮನೆಗೆ ಬಂದ ಭುಜಂಗ. ತಾಯಿಗೆ, 'ಹೆಡ್‌ಮಾಸ್ತ್ರು ಬರುತ್ತಾರೆ'ಂಬ ಸುದ್ದಿಯನ್ನು ತಿಳಿಸಿದ. ಅವಳು ಕಾಫಿ ತಯಾರಿಸಿ ಕಾದಳು. ಆದರೆ, ವ್ಯರ್ಥವಾಯಿತು. ಹೆಡ್‌ಮಾಸ್ತರ್ ಬರಲಿಲ್ಲ.

ಸಾಧಾರಣ ರಾತ್ರಿ ಹತ್ತು ಗಂಟೆಗೆ, ಬಾಗಿಲಲ್ಲಿ, 'ಟಕ್, ಟಕ್' ಎಂದು ಸದ್ದಾಯಿತು. ಲಲಿತೆ ಆಶ್ಚರ್ಯದಿಂದ ಬಾಗಿಲು ತೆರೆದಳು. ಸೆಂಟಿನ ಸುವಾಸನೆಯಿಂದ ಗಮಗಮಿಸುತ್ತಾ, ಹೆಡ್‌ಮಾಸ್ತರರು ಒಳಗೆ ಬಂದರು.

''ಯಾರು, ಮಾಸ್ತರರೋ?''

''ಹು, ಹು, ಹು, ಹೌದು! ಏನಮ್ಮ, ಸಂತೋಷವೇ'' ಎಂದು

ಕೇಳಿದರು. ಲಲಿತೆಗೆ ಅವರು ಹೇಳಿದುದೊಂದೂ ಅರ್ಥವಾಗಲಿಲ್ಲ."ಸಂತೋಷ! ಏನು ಮಾಸ್ಟ್ರೇ, ಇಷ್ಟು ಕತ್ತಲೆಗೆ ಬಂದುಬಿಟ್ಟಿರಿ!"

ಹು, ಹು, ಸ್ವಲ್ಪ ಕೆಲಸವಿತ್ತು. ಈಗ ತಾನೇ ಅಲ್ಲವೇ ಬರಬೇಕು." ಎಂದು ನಕ್ಕರು.

ಲಲಿತೆ ಮಾತನಾಡಲಿಲ್ಲ.

"ಭುಜಂಗನೆಲ್ಲಿದ್ದಾನೆ?" ಎಂದು ಕೇಳಿದರು.

"ಮಲಗಿದ್ದಾನೆ."

ಹೆಡ್‌ಮಾಷ್ಟರರು ನಿರಾತಂಕವಾಯಿತೆಂದು ಬಗೆದರು. ಅಲ್ಲೇ ಗೋಡೆಯ ಮೇಲೆ ಹಾಕಿತ್ತು ಲಲಿತೆಯ ಪಟ. ದೀಪದ ಬೆಳಕಿನಲ್ಲಿ ಅದು ಬೆಳಗುತ್ತಿತ್ತು.

"ಇದು ಯಾರ ಪಟವಮ್ಮಾ? ನಿಮ್ಮದೇ?"

"ಹೂಂ!"

"ಬಹಳ ಚೆನ್ನಾಗಿದೆ!"

ಲಲಿತೆ ಗೋಡೆಯ ಕಡೆಗೆ ಮುಖಮಾಡಿ ನಿಂತಿದ್ದಳು. ಬೆಚ್ಚನೆಯ ಕೈಯೊಂದು ಅವಳ ಹೆಗಲ ಮೇಲಿಳಿಯಿತು. ಲಲಿತೆ ಹಿಂದೆ ನೋಡಿದಳು. ಹೆಡ್‌ಮಾಸ್ಟರರು ಕೆಟ್ಟ ಕಣ್ಣಿನಿಂದ ತನ್ನನ್ನು ನೋಡುತ್ತಾ ನಿಂತಿದ್ದಾರೆ. ಅವಳು ಸಿಟ್ಟಿನಿಂದ ಕೈಯನ್ನು ಕಿತ್ತೆಸೆದಳು.

ಹೆಡ್‌ಮಾಷ್ಟರರು ಪ್ರಾರಂಭಿಸಿದರು; "ಲಲಿತಾರಾಣಿ! My queen consort! ಚಲುವಿನ ಅರಸೀ! ನನ್ನನ್ನು ನೋಡು!"

ಲಲಿತೆಗೆ ಸಿಟ್ಟಿನೊಂದಿಗೆ ಹೆದರಿಕೆಯೂ ಉಂಟಾಯಿತು.

"ಹೋಗುತ್ತೀರೊ ಇಲ್ಲವೋ ಇಲ್ಲಿಂದ!"

"ಹೋಗಲು ಬರಲಿಲ್ಲ ರಾಣಿ! ನಿನ್ನ ಬಳಿ ಪ್ರೇಮಯಾಚನೆಗಾಗಿ ಬಂದೆ. ನಿನ್ನ ಮೇಲಿನ ಮೋಹವನ್ನು ತಡೆಯಲಾರದೆ ಬಂದೆ ನೋಡು, ಹೊರಗೆ ನೋಡು! ನೀಲಾಕಾಶದಲ್ಲಿ ಪೂರ್ಣಚಂದಿರನು ಮೇಲೇರಿ ಬರುತ್ತಾ ನನ್ನ ಪ್ರೇಮವನ್ನು ಶತಗುಣಿಸುತ್ತಿದ್ದಾನೆ. ಭಾವನಾಪ್ರಪಂಚದಲ್ಲಿ ಒಮ್ಮೆ ಆಲೋಚಿಸಿ ನೋಡು. ಪ್ರಪಂಚವೇ ಪ್ರೇಮದ ಸಿದ್ಧಿಯಲ್ಲಿ ತನ್ಮಯವಾಗಿದೆ. ಇಲ್ಲಿ, ಬಾ ಏಕಾಂತದಲ್ಲಿ. ಯಾರೂ ನೋಡಲಾರರು. ಇಲ್ಲಿ ಗುಪ್ತವಾಗಿ ಪ್ರೇಮದ ಸಿದ್ಧಿಯಲ್ಲಿ ತೊಡಗೋಣ!"

"ಅಯ್ಯಯ್ಯಯ್ಯೋ..........!" ಎಂದಳು ಲಲಿತೆ.

ಹೆಡ್‌ಮಾಸ್ಟರರು ಲಲಿತೆಯನ್ನಾಲಂಗಿಸಿದರು. ಇನ್ನು ಅವರು ಲಲಿತೆಯನ್ನು ಮುದ್ದಿಸುವವರು. ಆದರೆ, ದೊಣ್ಣೆಯ ಬಲವಾದ ಪ್ರಹಾರವು ತಲೆಯಮೇಲೆ ಬಿದ್ದು, ಅವರ ಆಲಿಂಗನವು ಸಡಲಿತು. ಕಣ್ಣುಕತ್ತಲೆ ಬಂದಂತಾಯಿತು. ಹಿಂದೆ ನೋಡಿದರು. ಪ್ರತ್ಯಕ್ಷ ಯಮನಂತೆ, ಬಲವಾದ ದೊಣ್ಣೆಯನ್ನು ಹಿಡಿದುಕೊಂಡು ರಾಮಗೋಪಾಲ ನಿಂತಿದ್ದ. ಹೊರಗೆ ಮಲಗಿದಲ್ಲಿಂದಲೇ, ಲಲಿತೆಯ ಕೂಗನ್ನು ಕೇಳಿ ಎಚ್ಚರಗೊಂಡು ಅವನು ಬಂದಿದ್ದ.

"ಇದೇನು ನಡೆಸಿದ್ದಿಯೋ ಇಲ್ಲಿ, ಮುಂಡೇಮಗನೇ!"

ಹೆಡ್‌ಮಾಸ್ಟರರು ಬೆಪ್ಪಾದರು. ಏನು ಹೇಳುವುದೆಂದು ತೋಚಲಿಲ್ಲ; "ಈ ಮಾರಿ, ಸೂಳೆ, ಬೋಧ ತಪ್ಪಿಸಿ, ನನ್ನನ್ನು ಮನೆಯಿಂದ ಹೊತ್ತುಕೊಂಡು ಬಂದು ಇಲ್ಲಿ ಕೆಡಿಸುವುದರಲ್ಲಿದ್ದಳು. ನೀನು ಬಂದು ನನ್ನನ್ನು ಉಳಿಸಿದೆ, ಮಹಾರಾಯಾ, ಉಳಿಸಿದೆ!" ಎಂದು 'ಸಲಾಂ' ಹಾಕಿದರು.

ಆದರೆ ರಾಮಗೋಪಾಲನು ದೊಣ್ಣೆಯಿಂದ ಬಲವಾಗಿ ಇನ್ನೊಂದು ಕಾಯಿಸಲು ಚಂಗನೆ ಮೇಲಕ್ಕೆ ನೆಗೆದನು.

"ಸುಳ್ಳು ಬಗುಳತ್ತೀಯಾ, ಮಗನೇ!"

"ಸುಳ್ಳಲ್ಲ!"

ರಾಮಗೋಪಾಲ ಮೇಲಿಂದ ಮೇಲೆ ಪ್ರಹರಿಸುತ್ತಾ ಬಂದ. ಹೆಡ್‌ಮಾಸ್ಟರರು ನೋವಿನಿಂದ ಹಣ್ಣಾದರು.

"ನನ್ನನ್ನು ಬಿಟ್ಟುಬಿಡು ಮಹರಾಯ! ಇನ್ನು ಈ ಸುದ್ದಿಗೆ ಬರುವುದಿಲ್ಲ. ದಮ್ಮಯ್ಯ!" ಎಂದರು.

ರಾಮಗೋಪಾಲ 'ಲಾತು' ಕೊಟ್ಟು ಅವರನ್ನೋಡಿಸಿದ.

ಅಲ್ಲಿಂದ ಬಂದ ಹೆಡ್‌ಮಾಸ್ಟರರು, ಲಲಿತೆಯ ವಿಷಯವಾಗಿ ಏನೇನೋ ಅಪಪ್ರಚಾರವನ್ನೆಸಗಿದರು. ಆದರೆ, ಅದನ್ನು ನಂಬಿದವರು ನಂಬಿದರು, ಬಿಟ್ಟವರು ಬಿಟ್ಟರು. ಆದರೆ, ತಮ್ಮ ಮಿತ್ರರೇ, ತಮ್ಮನ್ನು ಸಂಶಯದಿಂದ ಕಂಡಾಗ ಮಾತ್ರ ಅವಮಾನವನ್ನು ತಾಳಲಾರದೆ, ಎರಡು ತಿಂಗಳು ರಜಾ ಬರೆದುಹಾಕಿ ಹೋಗಿ ತಮ್ಮ ಹಳ್ಳಿಯೂರನ್ನು ಸೇರಿದರು.

× × × ×

ಹೇಮಂತ ಋತುವು ಮೆಲ್ಲಮೆಲ್ಲನೆ ಆಗಮಿಸುತ್ತಿತ್ತು. ಹಳ್ಳ, ಕೆರೆ, ಹೊನಲಿನ ನೀರು ಮುಟ್ಟಿದರೆ ಚಳಿಜ್ವರ ಬರುವಂತೆ ಹಿಮಗಡ್ಡೆಯಾಯಿತು. ಬೆಳಿಗ್ಗೆ ಒಂಭತ್ತು-ಹತ್ತು ಗಂಟೆಯಾದರೂ ಜಗತ್ತಿನಲ್ಲಿ ಚೈತನ್ಯದ ಲಕ್ಷಣ ಗಳೇನೂ ಕಾಣುತ್ತಿರಲಿಲ್ಲ. ಗುಡ್ಡ, ಬೆಟ್ಟ, ಊಟಿ, ಕೊಡೈಕನಾಲ್ ಮುಂತಾದ ಸ್ಥಳಗಳಿಗೆ ಜೀವನ ವ್ಯವಸಾಯವನ್ನರಸಿ ಹೋದ ಸೆಕೆಯೂರಿನ ಮಂದಿ, ಅಲ್ಲಿಯ ಚಳಿಯನ್ನು ತಡೆಯಲಾರದೆ, ಕೆಳಗೆ ಕಣಿವೆಗಿಳಿಯಲಾರಂ ಭಿಸಿದ್ದರು. ಚಳಿ! ಚಳಿ!! ಚಳಿ!!!

ಒಂದುದಿನ ಭುಜಂಗ ಶಾಲೆಯಿಂದ ಬೇಗನೇ ಮನೆಗೆ ಬಂದ. ಮೈಯಲ್ಲಿ ಆಲಸ್ಯ, ಆಯಾಸಗಳು ತೋರುತ್ತಿದ್ದವು. ಬಂದವನೇ ಕಾಫಿ ಕೂಡಾ ಕುಡಿಯದೆ ಶಯ್ಯೆಯನ್ನೆಳೆದುಕೊಂಡು ಮಲಗಿದ. ಲಲಿತೆ ಆಶ್ಚರ್ಯ ದಿಂದ ಬಂದು ನೋಡಿದಾಗ ಭುಜಂಗನಿಗೆ ಅಸಾಧಾರಣವಾದ ಜ್ವರ ಬರು ತ್ತಿತ್ತು. ಅವನ ಮೇಲೆ ಕೈಯಿಟ್ಟುದೇ, ಉರಿಯುವ ಕೆಂಡದ ಮೇಲೆ ಕೈಯಿ ಟ್ಟಂತಾಯಿತು.

ರಾಮಗೋಪಾಲನು ಹೊರಗೆ ಹೋದವನು ಬರುವತನಕ, ಲಲಿತೆ, ಭುಜಂಗನ ಶಯ್ಯೆಯ ಬಳಿಯಲ್ಲೇ ಕುಳಿತಿದ್ದಳು. ರಾಮಗೋಪಾಲನು ಬರುವಾಗ ರಾತ್ರಿ ಹತ್ತುಗಂಟೆಯೇ ಕಳೆದಿತ್ತು. ಆಗ, ಭುಜಂಗನ ಸ್ಥಿತಿ ಬಹಳ ವಿಪರೀತವಾಗಿತ್ತು. ರಾಮಗೋಪಾಲನು ಬಂದಮೇಲೆ, ಲಲಿತೆ, ಒಳಗೆ ಅಡುಗೆಮನೆಗೆ ಹೋದಳು. ರಾಮಗೋಪಾಲನೇ ಶಯ್ಯೆಯ ಬಳಿ ಕುಳಿತನು. ಆ ದಿನ ರಾತ್ರಿ ಅವರಿಗೆ ಊಟವಾಗುವಾಗ ಒಂದು ಗಂಟೆಯಾ ಗಿತ್ತು.

ಮರುದಿನವೂ ಭುಜಂಗನ ಸ್ಥಿತಿ ಸುಧಾರಿಸಲಿಲ್ಲ. ರಾಮಗೋಪಾಲನು ಡಾಕ್ಟರರನ್ನು ಕರೆಯುವ ಆಲೋಚನೆ ಮಾಡಿದನು. ಅಲ್ಲಿಗೆಲ್ಲಾ ಇದ್ದುದು ಒಬ್ಬರೇ ವೈದ್ಯರು-ಶಾಸ್ತ್ರಿಗಳು! ಅವರೇನು ಎಂ. ಬಿ. ಬಿ. ಎಸ್. L. I. M. ಡಾಕ್ಟರರಲ್ಲ! ಆಯುರ್ವೇದಿಯ R. M. P. ಯವರು. ಅವರನ್ನೇ ಹೋಗಿ, ರಾಮಗೋಪಾಲ ಕರೆದುಕೊಂಡು ಬಂದನು. ಶಾಸ್ತ್ರಿಗಳು ರಾಮ ಗೋಪಾಲನ ಚಿಂದಿಬಟ್ಟೆ, ಹರಕುಬಟ್ಟೆಗಳನ್ನು ನೋಡಿ ಮೊದಲು ಹೊರ ಡಲು ಅನುಮಾನಿಸಿದರೂ, ಅವನು ತಂದಿದ್ದ ಹೊಸ ಕಾರನ್ನು ನೋಡಿ, ಲಲಿತೆಯ ಹೆಸರನ್ನು ಕೇಳಿ ಬಹಳ 'ಉಮೇದಿ'ನಿಂದ ಬಂದರು.

ಶಾಸ್ತ್ರಿಗಳು ಬಂದರು. ಆದರೆ, ಹೊರಡುವ ಮೊದಲು, ಅವರು 'bag' ಕೈಗೆ ತೆಗೆದುಕೊಳ್ಳಬೇಕಾದರೆನೇ ಐದು ರೂಪಾಯಿ ಕೊಡಬೇಕಾಯಿತಲ್ಲದೆ, ಮನೆಗೆ ಬಂದನೊಡನೆಯೇ ಮೊದಲು ಕಾಫಿ ಕೊಡಬೇಕಾಯಿತು. ಆ ಮೇಲೆ ಶಾಸ್ತ್ರಿಗಳು ರೋಗಿಯ ಪರೀಕ್ಷೆಗೆ ಬಂದರು. ನಾಡಿ ಹಿಡಿದೊಡನೆಯೇ ರೋಗಿಗೆ ಬದುಕುವುದಕ್ಕೆ 'ಧಾಡಿ'ಯೇನೂ ಇಲ್ಲವೆಂದು ಅವರಿಗೆ ಗೊತ್ತಾಯಿತು. ವೈದ್ಯ ವಿದ್ಯೆಯಲ್ಲಿ ಅಷ್ಟು ಪ್ರವೀಣರು ಅವರು! ಮಾತ್ರವಲ್ಲ, ಇಪ್ಪತ್ತೈದು ವರ್ಷದ ಚೆನ್ನಾದ ಸರ್ವೀಸು ಕೂಡ ಇತ್ತು.

"ಗಾಬರಿಯೇನೂ ಇಲ್ಲ ಅಮ್ಮಾ! ಇಂಥವುಗಳಿಗೆಲ್ಲಾ ರಾಮಬಾಣದಂಥಃ ಔಷಧಿಗಳು ನನ್ನಲ್ಲಿವೆ. ಆದರೆ, ಆರೈಕೆ ಮಾತ್ರ ಸ್ವಲ್ಪ ಚೆನ್ನಾಗಿ ಮಾಡಬೇಕು. ಹಾಲು, ತುಪ್ಪ, ಮೊಸರು,–ಎಲ್ಲಾ ಚೆನ್ನಾಗಿ ಹಾಕುತ್ತೀರಷ್ಟೇ!"

"ಅದಕ್ಕೇನೂ ಕಡಿಮೆಯಿಲ್ಲ."

"ಹಾಗಾದರೆ, ಗಾಬರಿಯೇನೂ ಇಲ್ಲ, ಬಿಡಿ."

ಶಾಸ್ತ್ರಿಗಳು ತಮ್ಮ ಸ್ವಹಸ್ತದಿಂದಲೇ ರೋಗಿಗೆ ಔಷಧಿ ಕುಡಿಸಿದರು. ಪುನಃ ತಮ್ಮ ಪ್ರತಿಫಲವೆಂದು ಹತ್ತು ರೂಪಾಯಿಗಳನ್ನು ಯಾಚಿಸಿದರು. ಈ ರೋಗದ ನೆವದಿಂದ, ಲಲಿತೆಯ ಟ್ರೆಜರಿಯ ಬೀಗದ ಕೈಯನ್ನು ತಮ್ಮದಾಗಿ ಮಾಡಿಕೊಳ್ಳಬಹುದೆಂದು ಅವರು ಬಗೆದಿದ್ದರು. ಸ್ವಲ್ಪ ಹೊತ್ತಿನಲ್ಲೇ ಶಾಸ್ತ್ರಿಗಳ ಸವಾರಿ, ಬಾಡಿಗೆಯ ಸ್ಪೆಷಲ್ ಮೋಟಾರ್‌ಕಾರಿನಲ್ಲೇ ತಮ್ಮ ನಿವಾಸದೆಡೆಗೆ ಸಾಗಿತು. ಹೋಗುವಾಗ ಮಾತ್ರ, "ನಾಳೆ ಬರುತ್ತೇನೆ, ಮೋಟರ್ ಕಳಿಸಿದರೆ" ಎಂದುಸುರಿ ಹೋದರು.

ಶಾಸ್ತ್ರಿಗಳು ಅತ್ತ ಹೋದೊಡನೆಯೇ ಭುಜಂಗನಿಗೆ ಸ್ವಲ್ಪ ಜ್ಞಾನೋದಯವಾಯಿತು. "ಅಮ್ಮಾ!" ಎಂದವನು ಕರೆದನು. ಲಲಿತೆ, ರಾಮಗೋಪಾಲ–ಇಬ್ಬರಿಗೂ ಉಂಟಾದ ಸಂತೋಷವಷ್ಟಿಷ್ಟಲ್ಲ! ಇದು ಶಾಸ್ತ್ರಿಗಳ ಔಷಧದ ಪ್ರಭಾವವೆಂದು ತರ್ಕಿಸಿದರು. ಮಾತ್ರವಲ್ಲ; ಅವರನ್ನು ಮನಸ್ಸಿನಲ್ಲಿಯೆ! ಕೊಂಡಾಡಿ ಹರಸಿದರು.

"ಏನು, ಮಗು?" ಎಂದು ಕೇಳಿದಳು ಲಲಿತೆ.

"ಬಾಯಾರಿಕೆ!" ಎಂದನು.

ಲಲಿತೆ ಹೋಗಿ ಕಾಯಿಸಿದ ಹಾಲನ್ನು ತಂದಳು. ಆದರೆ, ಹಾಲು

ಬಾಯಿಗೆ ಬೀಳುತ್ತಲೇ, 'ಒಲ್ಲೆ!' ಎಂದನು. ರುಚಿ ಕೆಟ್ಟುಹೋಗಿತ್ತು. 'ಕಹಿಯಾಗುತ್ತದೆ!' ಎಂದನು. ಅದನ್ನು ಕೇಳಿ, ರಾಮಗೋಪಾಲ, "ಏನು ಕಾರಣವೋ, ಬಾಯಿ ರುಚಿಯಿಲ್ಲ? ನಾಳೆ, ನೆನಪು ಮಾಡಿಯಮ್ಮ, ವೈದ್ಯರ ಬಳಿ ಹೇಳೋಣ." ಎಂದನು. ಅಂತೂ ಹಾಲನ್ನು ಒತ್ತಾಯದಿಂದ ಭುಜಂಗ ನಿಗೆ ಕುಡಿಸಿದ್ದಾಯಿತು. ಆದರೆ, ಏನು ಪ್ರಯೋಜನ?—ಪೂರ್ಣ ಕುಡಿಯು ವುದರೊಳಗಾಗಿಯೇ, ಕುಡಿದುದೆಲ್ಲಾ ವಮನದ ರೂಪದಲ್ಲಿ ಈಚೆಗೆ ಬಂದಿತು.

"ಭುಜಂಗ! ಸ್ವಲ್ಪ ಊಟಮಾಡುತ್ತೀಯಾ, ಮಗು?" ಎಂದು ಲಲಿತೆ ಕೇಳಿದಳು.

"ಇಲ್ಲ." ಎಂದು ಭುಜಂಗನು ಕಣ್ಣುಮುಚ್ಚಿ ಮಲಗಿದನು. ಲಲಿತೆ, ಹೊದಿಕೆಯನ್ನು ಹೊದ್ದಿಸಿ ಒಳಹೋದಳು.

ಮರುದಿನವೂ ಟಾಂಗಾ ತೆಗೆದುಕೊಂಡು ಹೋದ. ರಾಮಗೋಪಾಲ ನೊಡನೆ ಶಾಸ್ತ್ರಿಗಳ ಸವಾರಿ ಬಂದಿತು. ಭುಜಂಗನ ನಾಡಿ ಹಿಡಿದು ನೋಡಿ ದುದೇ ಅವರ ಸಂತೋಷಕ್ಕೆ ಎಲ್ಲೆಯೇ ಇಲ್ಲ. "ನಾನು ಹೇಳಿದುದು ಸುಳ್ಳೇ? ನೂರಕ್ಕೆ ಐವತ್ತು ಪಾಲು ಗುಣ! ಹೇಗೆ ನನ್ನ ಮದ್ದು? ನಾಲ್ಕು ದಿನ ಕಳೆ ಯಲಿ; ನೂರಕ್ಕೆ ಇನ್ನೂರು ಗುಣ ಸಿಗುತ್ತದೋ ಇಲ್ಲವೋ ನೀವೇ ನೋಡಿ." ಎಂದರು.

ಈ ದಿನ ಅವರು ಕೇಳುವುದಕ್ಕೆ ಮೊದಲಾಗಿಯೇ ಇಪ್ಪತ್ತು ರೂಪಾ ಯಿಯ 'ಚೆಕ್' ಅವರ ಕೈ ಸೇರಿತು. ಶಾಸ್ತ್ರಿಗಳಿಗೆ ತುಂಬ ಸಂತೋಷವಾ ಯಿತು. ಆದರೂ, ಅಷ್ಟರಿಂದಲೇ ತೃಪ್ತಿಪಟ್ಟುಕೊಂಡು ಹೋಗುವ ಮನಸ್ಸು ಅವರಿಗಿರಲಿಲ್ಲ. ಮೆಲ್ಲನೆ, "ಒಳಗೆ ಸ್ವಲ್ಪ ಬೆಣ್ಣೆಯಿದೆಯೇನಮ್ಮಾ? ನಮ್ಮ ಹುಡುಗನಿಗೆ ನಾಲ್ಕಾರು ದಿನವಾಯಿತು, ಏನೋ ಒಂದು ಕೆಟ್ಟ 'ಸೀಕು.' ಬೆಳಗಿನಿಂದ ಸಂಜೆಯ ವರೆಗೆ ಇಡೀ ಮಂಗಳೂರು ಪೇಟೆ ಸುತ್ತಾಡಿದರೆ, ಪವನು ಕೊಡುತ್ತೇನೆಂದರೂ, ಸಾಸಿವೆಕಾಳಿನಷ್ಟು ಬೆಣ್ಣೆ ದೊರೆಯಲಿಲ್ಲ" ಎಂದು ನಾಲ್ಕಾರು ತೊಲೆ ಬೆಣ್ಣೆಯನ್ನು ಮಾರ್ಜಾಲಶಾಸ್ತ್ರಿ ಗಳು ಹಾರಿಸಿಕೊಂಡು ಹೋದರು.

ಅದೇ ರಾತ್ರಿ ಭುಜಂಗನು ಸಂಕಟದಿಂದ ಹೊರಳತೊಡಗಿದನು. ಏನು ಮಾಡಿದರೂ ಕಡಮೆಯಾಗಲಿಲ್ಲ. ರಾಮಗೋಪಾಲನಿಗೆ ಗಾಬರಿ ಹೆಚ್ಚಿ, ಆಗಲೇ ವಾಯುವೇಗದಿಂದ ಶಾಸ್ತ್ರಿಗಳ ದವಾಖಾನೆಗೆ ಓಡಿದನು. ಶಾಸ್ತ್ರಿಗಳೂ

ವಾಹನವನ್ನೇನೂ ಅಪೇಕ್ಷಿಸದೆ ಪಾದರಕ್ಷೆಯ ಸಾಹ್ಯದಿಂದಲೇ, ಲಲಿತೆಯ ಮನೆಗೆ 'ರೇಸ್' ತೊಡಗಿ ಬಂದರು.

ತೋಳಿಗೆ ಯಾವುದೋ ಒಂದು ಇಂಜೆಕ್ಷನನ್ನು ಚುಚ್ಚುತ್ತಲೇ ಭುಜಂಗನ ಹೊರಳಾಟ ನಿಂತುಹೋಯಿತು. ಸ್ವಲ್ಪ ನಿದ್ರೆಯೂ ಬಂದಾವರಿಸಿತು. 'ಇನ್ನು ಗಾಬರಿಯಿಲ್ಲ' ಎಂದರು ಶಾಸ್ತ್ರಿಗಳು. ಮತ್ತೆ, "ಬರೀ ಇಂಜಕ್ಷನಿನ ಕ್ರಯ ನೂರು ರೂಪಾಯಿ ಅಷ್ಟೇ ಕೊಡಿ, ಸಾಕು" ಎಂದು ಕೇಳಿದರು. ಲಲಿತೆ ಇನ್ನೂರು ರೂಪಾಯಿಗೇ ಚೆಕ್ಕು ಕೊಟ್ಟಳು. "ಛಿ, ಛಿ, ಬೇಡಮ್ಮ, ಬೇಡ" ಎಂದು ಶಾಸ್ತ್ರಿಗಳು ದೊಡ್ಡ ಮನಸ್ಸು ಮಾಡಿದರು. "ಇರಲಿ ಶಾಸ್ತ್ರಿಗಳೇ, ನಿಮ್ಮ ಉಪಕಾರಕ್ಕೆ ಎಷ್ಟು ಕೊಟ್ಟರೂ ಕಡಿಮೆಯೇ" ಎಂಬ ಪ್ರಶಂಸೆಯನ್ನು ಕೇಳಿ, ಶಾಸ್ತ್ರಿಗಳ ಮುಖ ಇಷ್ಟು ಅಗಲವಾಯಿತು.

ಮರುದಿನ ಮಧ್ಯಾಹ್ನ ಪುನಃ ಭುಜಂಗನ ಅವಸ್ಥೆ ಮತ್ತಷ್ಟು ವಿಪರೀತವಾಯಿತು. ರಾಮಗೋಪಾಲ, ಶಾಸ್ತ್ರಿಗಳ ಔಷಧಾಲಯಕ್ಕೆ ಓಡಿದನು. ಗ್ರಹಚಾರಕ್ಕೆ ಅವರೂ ಅಲ್ಲಿರಲಿಲ್ಲ. ಕಂಪೌಂಡರನು, "ಈಗ ಬಂದಾರು" ಎಂದುಸುರಿದುದರಿಂದ, ಅಲ್ಲೇ ಹಾಕಿದ ಸ್ಟೂಲಿನ ಮೇಲೆ ಕುಳಿತನು. ಮನಸ್ಸು ಮಾತ್ರ ಮನೆಯ--ಭುಜಂಗನ—ಕಡೆಗೆ ಸೆಳೆಯುತ್ತಿತ್ತು.

ಒಂದು ಗಂಟೆಯ ಮೇಲೆ ಶಾಸ್ತ್ರಿಗಳು ಬಂದರು. ಅವರ ಮುಖದಲ್ಲೇನೋ ಬದಲಾವಣೆಯ ಕುರುಹು ಗೋಚರವಾಗುತ್ತಿತ್ತು. ರಾಮಗೋಪಾಲನನ್ನು ಕಂಡು ಆಶ್ಚರ್ಯದಿಂದ, "ಏನು ಪುನಃ....?" ಎಂದರು.

"ಹೂಂ, ಶಾಸ್ತ್ರಿಗಳೇ! ಈಗಲೇ ಹೊರಡಬೇಕು."

ಅವರು ಮನೆಗೆ ಬಂದಾಗ ಭುಜಂಗನ ಉಸಿರು ಮೇಲುಕೆಳಗಾಗಿತ್ತು. ಶಾಸ್ತ್ರಿಗಳು ಯಾವುದೋ ಚಿಕ್ಕ ಬಾಟಲಿಯನ್ನು ತೆಗೆದರು. ಅದರೊಳಗಿನ ಮದ್ದನ್ನು ಕುಡಿಸುವಾಗ, ಅವರ ಕೈ ಅಸಾಧಾರಣವಾಗಿ ಕಂಪಿಸುತ್ತಿತ್ತು. ಅದನ್ನು ನೋಡಿ ಲಲಿತೆಗೂ, ರಾಮಗೋಪಾಲನಿಗೂ ಸಂದೇಹವಾಯಿತು. ರಾಮಗೋಪಾಲನು ಇತ್ತ ಬಂದು ಕೇಳಿದನು: "ಏನು, ಶಾಸ್ತ್ರಿಗಳೇ! ಮಿಂಚಿಹೋಯಿತೇ?" ಶಾಸ್ತ್ರಿಗಳು ಆಕಾಶದೆಡೆಗೆ ಮೊಗವೆತ್ತಿ, ಎರಡೂ ಕೈಗಳನ್ನು ಅಲ್ಲಾಡಿಸಿದರು.

ಅವರು ಹೋದ ಮೇಲೆ ರಾಮಗೋಪಾಲನಿಗೆ ಏನು ಆಲೋಚನೆಯಾಯಿತೋ, ಕೂಡಲೇ ಹಂಪನಕಟ್ಟೆಗೆ ಪಯಣ ಬೆಳೆಯಿಸಿದನು. ಎಂ. ಬಿ.

ಬಿ. ಎಸ್. ಸರ್ಜನರೊಬ್ಬರನ್ನೇ ಕರೆದು ತಂದನು. ಆದರೆ, ಅಷ್ಟರೊಳಗೆ ಭುಜಂಗನು ಅವರ ಸಹವಾಸದಿಂದ ಪಾರಾಗಿದ್ದನು. ಇಬ್ಬರನ್ನೂ ಬಾಗಿಲಲ್ಲೇ ಸ್ವಾಗತಿಸುತ್ತಾ ಲಲಿತೆ, ದುಃಖವನ್ನು ಕೊಂಚವೂ ಪ್ರದರ್ಶಿಸದೆ, "ದೇವರಿಚ್ಛೆಯಂತೆ ಆಯಿತು ಗೋಪಾಲ," ಎಂದಳು.

ಸರ್ಜನರು, ಭುಜಂಗನನ್ನು ಪರೀಕ್ಷಿಸಿದವರೇ ಆಶ್ಚರ್ಯದಿಂದ ದಂಗಾದರು! "ಇವನಿಗೆ ವಿಷಪ್ರಯೋಗ ಮಾಡಿದಂತಿದೆಯಲ್ಲಾ!"

"ಆ್ಞ!?!" ಎಂದನು ರಾಮಗೋಪಾಲ.

"ಎರಡು ಗಂಟೆಯ ಮೊದಲೇ ಇವನಿಗೆ ವಿಷಪ್ರಯೋಗವಾಗಿರಬೇಕು. ಇದು ಬಹಳ ಕಠಿಣ ವಿಷ. ಇದನ್ನು ಒಬ್ಬ ವ್ಯಕ್ತಿ ಸೇವಿಸಿದನೆಂದರೆ, ಯಮನಿಗೂ ಅವನನ್ನು ಬದುಕಿಸಲಸಾಧ್ಯ!" ಎಂದರು.

ರಾಮಗೋಪಾಲನು "ಆ ಕಳ್ಳ, ನೀಚ, ಸೂ......... ಮಗ ಶಾಸ್ತ್ರಿ ಹೀಗೂ ಮಾಡಿದನೇ?" ಎಂದು ತನ್ನಷ್ಟಕ್ಕೆ ತಾನೆ ವಿಚಾರಿಸುತ್ತಲಿದ್ದನು. ಲಲಿತೆ ಹುಚ್ಚಿಯಂತೆ ಕುಳಿತಿದ್ದಳು. ರಾಮಗೋಪಾಲನು ಅತ್ತಿತ್ತ ಸುಳಿದನು. ಸರ್ಜನರು ಹೋದಮೇಲೆ ಹೊರಗೆ ಹೋಗಿ, ಸ್ವಲ್ಪ ಹೊತ್ತಿನಲ್ಲೇ ತಿರುಗಿ ಬಂದನು. ಲಲಿತೆ, ಮೊದಲ ಸ್ಥಿತಿಯಲ್ಲೇ ಇದ್ದಳು.

"ಕೂಡಲೇ ಹೊರಡಿ, ಅಮ್ಮಾ!"

"ಎಲ್ಲಿಗೆ?"

"ಪೋಲೀಸರಿಗೆ ಸುದ್ದಿ ತಿಳಿಸಬೇಡವೇ?"

"ಅವರು ಮಗುವನ್ನು ಬದುಕಿಸಬಲ್ಲರೇ!"

"ಇದು ಸರಿಯಾದ 'ಸವಾಲು'! ಹಾಗಾದರೆ, ಅನ್ಯಾಯಕ್ಕೆ ಪ್ರತಿಕ್ರಿಯೆಯೇ ಇಲ್ಲವೇ? ಲೋಕದಲ್ಲಿ ದುಷ್ಟರಿಗೆ ಶಿಕ್ಷೆಯೇ ಬೇಡವೇ? ಅಮ್ಮಾ! ಇದೆಲ್ಲಾ ನನಗೆ ಚೆನ್ನಾಗಿ ಗೊತ್ತಾಗಿದೆ. ಎಲ್ಲಾ ಹಿರಿಯ ಕಾರಸ್ಥಾನ! ಶಾಸ್ತ್ರಿಗೆ ಲಂಚಕೊಟ್ಟು ಈ ಕೆಲಸ ಮಾಡಿಸಿದಳು. ಅದೂ, ನಿಮ್ಮ ಆಸ್ತಿಗಾಗಿ! ಬನ್ನಿ, ಆ ಶಾಸ್ತ್ರಿಗೂ, ಸೂಳೆಗೂ ಒಮ್ಮೆ ಜೈಲಿನ ಅನುಭವ ಕೊಡೋಣ.!"

"ಗೋಪಾಲ! ಶಿಕ್ಷಿಸಲು ನಾವೆಷ್ಟರವರು? ಏನು, ಸ್ವರ್ಗ, ನರಕವೆಂಬುದು ಸುಳ್ಳಾಯ್ತೇ? ದುಷ್ಟಮರ್ದಕ, ಶಿಷ್ಟಪಾಲಕ, ಆ ಸರ್ವಾಂತರ್ಯಾಮಿ ಇಲ್ಲವೇ? ಅವನೆಲ್ಲವನ್ನೂ ನೋಡುವುದಿಲ್ಲವೇ?" ಎಂದಳು. ಕಣ್ಣು ಹೊಳೆಯಾಯ್ತು 'ನನ್ನ ಮಗು ಸ್ವರ್ಗದಲ್ಲಿದ್ದಾನೆ! ಸ್ವರ್ಗದಲ್ಲಿದ್ದಾನೆ!'

ಎಂದು ಶವವನ್ನಪ್ಪಿದಳು. ರಾಮಗೋಪಾಲನು ಶವದಹನದ ಸಿದ್ಧತೆಯಲ್ಲಿ ತೊಡಗಿದನು.

## ೧೫

ಹೀರೆಯ ಎಲ್ಲಾ ಪ್ರಯತ್ನವೂ ಮಣ್ಣುತಿಂದು ಹೋಯಿತು. ಅವಳು ಹೆದರಿದಂತೆ, ಲಲಿತೆ ಅವಳಮೇಲೆ ಖಟ್ಲೆ ಹೂಡದಿದ್ದರೂ, ಅವಳಿಗೆ ಭುಜಂಗನ ಪ್ರಾಣಹರಣದಿಂದ ಲಾಭವೇನೂ ಆಗಲಿಲ್ಲ. ಲಲಿತೆಯ ಸಂಪತ್ತೆಂಬುದು ಅವಳಿಗೆ ಇನ್ನು ದೂರದ ಗಂಟು—ಆಕಾಶ ಕುಸುಮವಾಗಿಯೇ ಉಳಿಯಿತು. ಇದಕ್ಕಿಂತ ಮಿಕ್ಕಿ ಬೇರಾವ ಪ್ರಯತ್ನವೂ ಅವಳಿಗೆ ತೋಚಲಿಲ್ಲ.

ರಾಜಾರಾಮನಾದರೋ ದಿನದಿಂದ ದಿನಕ್ಕೆ ಗರೀಬನಾಗುತ್ತಾ ಬರುತ್ತಿದ್ದನು. ಹೀರೆ ಈಗ ಅವನನ್ನು ಸಾಕುವುದು ಮಾತ್ರವಲ್ಲ; ಅವನ ಕಾಫಿ, ಸಿಗರೇಟಿಗೂ ತಾನೇ ಕೊಡಬೇಕಾಗಿತ್ತು. ಇಂಥಾದ್ದರಲ್ಲಿ ಅವಳಿಗೆ ಅವನ ಮೇಲೆ ಸಂಪೂರ್ಣ ಬೇಸರವುಂಟಾಯಿತು. ಯಾವಾಗ ಲಲಿತೆಯ ಸಂಪತ್ತಿನಾಸೆಯನ್ನು ಅವಳು ಬಿಟ್ಟುಬಿಟ್ಟಳೋ, ಆಗಲೇ ರಾಜಾರಾಮನನ್ನೂ ಅವಳು ಬಿಡುವ ಆಲೋಚನೆ ಮಾಡಿದಳು.

ಒಂದು ದಿನ ಎಂದಿನಂತೆ ರಾಜಾರಾಮನು ಕೋಣೆಯಲ್ಲಿರುವಾಗ ಆ ಕುರಿತು ಪ್ರಸ್ತಾಪವೆತ್ತಿದಳು. ಸಂಪತ್ತು ಲಭಿಸದಿದ್ದುದರಿಂದ ಈಗ ಹೀರೆಗೆ ತನ್ನಮೇಲೆ ಅಸಮಾಧಾನ, ತುಚ್ಛೀಕಾರವೆಂದು ರಾಜಾರಾಮನಿಗೂ ತಿಳಿದಿತ್ತು ಆದುದರಿಂದ ಅವನು ಆದಷ್ಟು ಮೌನಿಯಾಗಿಯೇ ಇರುತ್ತಿದ್ದನು.

"ಏನು ಆ ಲಲಿತೆಯನ್ನು ಯಾವುದರಿಂದಲೂ ಬಗ್ಗಿಸಲು ಸಾಧ್ಯವಿಲ್ಲವೇ?"

"ದೇವರಿಗೇ ಗೊತ್ತು!"

"ಅಂದರೆ?" ಎಂದು ಬಿರುಸಾಗಿ ಕೇಳಿದಳು.

"ಅಂದರೆ,–ನೀನೇ ನೋಡಲಿಲ್ಲವೇ, ಎಂಥಃ ಪ್ರಯತ್ನಗಳೆಲ್ಲಾ ನೀರಲ್ಲಿ ಹೋಮ ಮಾಡಿದಂತಾಯಿತು!"

"ಹೂಂ!"

"ಏನು, ಬೇಸರವಾಯಿತೇ?"

"ಅಯ್ಯಯ್ಯೋ! ಏಕೆ ಬೇಸರವಾದೀತು? ಆ ಲಲಿತೆಯೊಂದಿಗೆ ನೀವೆಲ್ಲಾ

ಸೇರಿ, ನನಗೆ ಇದುತನಕವೂ ಮೋಸಮಾಡಿದಿರೆಂದು ಈಗ ತಾನೇ ಗೊತ್ತಾಯಿತು!"

"ಇದೆಂಥಃ ಮಾತು, ಹೀರಾ!"

"ಸತ್ಯವಾದ ಮಾತು! ಬೆಳ್ಳಗಿದ್ದುದೆಲ್ಲಾ ಹಾಲೆಂದು ನಂಬುವವಳು, ನಾನು. ಆದರೆ ಬಿಳಿಯಾದುದೆಲ್ಲಾ ಸುಣ್ಣದ ನೀರೆಂದು ಈಗ ತಾನೇ ತಿಳಿಯಿತು!"

ಮತ್ತೆ ಹೀರೆ ಮಾತನಾಡಲಿಲ್ಲ. ರಾಜಾರಾಮನೂ ಮೌನಿಯಾದನು. ಊಟದ ಹೊತ್ತಿಗೆ ಮಾತ್ರ ಒಳಗಿನಿಂದಲೇ ಸಿಟ್ಟಿನ ಭರದಿಂದ, "ಊಟಕ್ಕಾಯಿತು." ಎಂದಳು. ಊಟಕ್ಕೆ ಕುಳಿತರೆ, ರಾಜಾರಾಮನು ತಿಂದು ಮುಗಿಯುವುದರೊಳಗಾಗಿಯೇ ಉಳಿದುದನ್ನು ಹಳಸಿದ ಅನ್ನವನ್ನು ಬೀದಿಯ ನಾಯಿಗೆಸೆಯುವಂತೆ, ತಂದು ಎಲೆಯಮೇಲೆ ಸುರಿದಳು. ದಿನ ನಿತ್ಯದ ಉಪಚಾರ, ಒಯ್ಯಾರ, ಒಂದೂ ಆ ದಿನ ಇರಲಿಲ್ಲ. ಮಾತು, ಮಾತಿನಲ್ಲಿಯೂ ತಿರಸ್ಕಾರ, ಕೃತಿ, ಕೃತಿಯಲ್ಲಿಯೂ ಸಿಟ್ಟು. ರಾಜಾರಾಮನು ತಾಟಸ್ಥ್ಯಭಾವದಿಂದ ಎಲ್ಲವನ್ನೂ ಸಹಿಸಿ ಊಟವನ್ನು ಮುಗಿಸಿದನು. ಅಂದು ಇಡೀದಿವಸ ಹೀರೆಯೂ, ರಾಜಾರಾಮನೂ ಮೌನವಾಗಿಯೇ ಇದ್ದರು.

ಮರುದಿನ ಎಚ್ಚತ್ತಾಗ, ಗಂಟೆ ಒಂಭತ್ತಾಗಿತ್ತು. ಕಾಫಿ ಕುಡಿದು ಹೋದವನು ರಾಜಾರಾಮ ಸೀದಾ ದೀಪಸ್ತಂಭ ಗುಡ್ಡವನ್ನೇರಿದನು. ಸೋಮವಾರ; ಮುನಿಸಪಲ್ ವಾಚನಾಲಯಕ್ಕೂ ರಜಾದಿನ; ಗುಡ್ಡದ ಮೇಲೂ ಜನರ ಸುಳಿವಿಲ್ಲ. ಕೆಲವು ಪೋಲಿಗಳೇನೋ ಮರದ ಮೇಲಿದ್ದಾರೆ. ಆದರೆ, ಸಭ್ಯರಾರೂ ಇಲ್ಲ; ಅದು ಅವರು ಬರುವ ಹೊತ್ತೂ ಅಲ್ಲ. ಸಾಯಂಕಾಲವಲ್ಲದೆ, ಅವರ ಹೆಜ್ಜೆಗಳು ಬಾವಟಕಟ್ಟೆಯಕಡೆಗೆ ತಿರುಗವು.

ಗಾಳಿ ಚೆನ್ನಾಗಿ ಬೀಸುತ್ತಿತ್ತು; ಗುಡ್ಡದ ಕೆಳಗೆ ಸಸ್ಯಸಾಮ್ರಾಜ್ಯವು ಕುಣಿಯುತ್ತಿತ್ತು. ಅವುಗಳ ನಡುವಿನಿಂದ ಕೆಲವು ಮೋಟಾರ್ ಹಾರ್ನಿನ ಸದ್ದೂ ಕೇಳುತ್ತಿತ್ತು. ಪಕ್ಕದ ಮನೆಯೊಂದರ ರೇಡಿಯೋದಿಂದ, 'ಪಂಛೀ ಬಾವರ.' ಧ್ವನಿ........

ರಾಜಾರಾಮನು ನೆಟ್ಟಗೆ ಸಮುದ್ರದೆಡೆಗೆ ನೋಡಿದನು. ಕಿರಿದಾಗಿ ಕಾಣುತ್ತಿರುವ ಹೊಳೆ; ಅದರಾಚೆ ಮಳಲರಾಶಿ; ಅದರತ್ತ ಕಡಲು; ಏಳು–

ಬೀಳುತ್ತಿರುವ ತೆರೆಗಳು ಚೆನ್ನಾಗಿ ಕಾಣಿಸಿದವು. ರಾಜಾರಾಮನು ಆಲೋಚ ನಾಂಬುಧಿಯಲ್ಲಿ ಮುಳುಗಿಹೋದನು.

ತನ್ನ ಬಾಲ್ಯ, ವಿವಾಹ, ಲಲಿತೆಯೊಡನೆ ಸಂಸಾರ ಸುಖ, ಎಲ್ಲವನ್ನೂ ಸ್ಮರಿಸಿಕೊಂಡನು. ಅವುಗಳೆಲ್ಲಾ ಎಷ್ಟು ಆನಂದದಾಯಕವಾಗಿದ್ದವು, ಸುಖ ದಾಯಕವಾಗಿದ್ದವು? ಆದರೆ, ?–ಈಗ! ಇನ್ನಾದರೂ ಆ ಸುಖ ದೊರೆಯು ಲುಂಟೆ? ಕಳೆದುಹೋದುದು ಕಳದೇ ಹೋಯಿತು. ಅದನ್ನು ಸ್ಮರಿಸಿಕೊಂಡು ಸುಖಿಸುವುದು ಹುಚ್ಚುತನ, ಅದರಿಂದೊದಗುವುದು ಹೆಚ್ಚಿನ ದುಃಖವಲ್ಲದೆ ಬೇರೇನೂ ಅಲ್ಲ.

ಗರ್ಭಿಣಿಯಾದ ಲಲಿತೆ! ಅವಳ ಗರ್ಭವೇ ಇಷ್ಟು ಅನರ್ಥಕ್ಕೂ, ದುರಂತಕ್ಕೂ ಮೂಲಕಾರಣವಲ್ಲವೇ? ಆ ಸಮಯದಲ್ಲಿ ಹೇಗೆ ಉಪಾಯ ವಾಗಿ ರಾಮಗೋಪಾಲ ತನ್ನನ್ನು ಕೆಡಿಸಿಬಿಟ್ಟ! ಸಹ ಧರ್ಮಿಣಿಯೊಂದಿಗಿರುವ ಸುಖ ವೇಶ್ಯೆಯಲ್ಲಿ ಎಲ್ಲಿಂದ ಬರಬೇಕು? ಆದರೆ, ತನ್ನ ಕುರುಡುಬುದ್ಧಿ ಇದು ತನಕ ಇದನ್ನೇ ಸ್ವರ್ಗಸುಖವೆಂದು ಭಾವಿಸಿತ್ತು.

ಅವಳಿಗೋಸ್ಕರವಾಗಿ ತಾನು ಇದುತನಕ ಎಂಥಃ ಹೀನ, ಕ್ರೂರಕೃತ್ಯ ಗಳನ್ನೆಲ್ಲಾ ಮಾಡಿದೆ? Women's Welfare Society ಯೆಂಬ ಕಪಟ ಸಂಸ್ಥೆಯ ನೆವದಿಂದ ಲಲಿತೆಯನ್ನು ವಂಚಿಸ ನೋಡಿದೆ. ಕೊನೆಗೆ ಹೆಚ್ಚೇಕೆ?–ಹೀರೆಯ ಉಚ್ಛಿಷ್ಟ ಸಂಪರ್ಕಕ್ಕಾಗಿ ತನ್ನ ಅಂಶವಾದ ಕಂದ ನಿಗೇ ವಿಷ ಉಣಿಸಲು ಹಿಂಜರಿಯಲಿಲ್ಲ! ಅಯ್ಯೋ!!!

ಇನ್ನು ನಿರಾಶೆ ಹೊಂದಿದ ಆ ಹೀರಾ ಏನು ಮಾಡಬಹುದು?–ತನ್ನನ್ನು ತಿರಸ್ಕರಿಸಬಹುದು, ಕಡೆಗಣಿಸಬಹುದು, ಕೊನೆಗೆ ಬಿಟ್ಟೂ ಬಿಡಬಹುದು. ಸುಖವಾಯಿತು! ಇನ್ನು ಲಲಿತೆಯಂಥಃ ಯಾವದೋ ಸಾಧ್ವಿಯ ಜೀವನ ವನ್ನು ನರಕವನ್ನಾಗಿ ಮಾಡಬಹುದು, ಆದರೆ, ಇದು ಯಾರ ತಪ್ಪು?––ಆ ಹೀರೆಯದೇ ಅಥವಾ ತನ್ನಂಥಃ ಪುರುಷ ವರ್ಗದವರದೇ?....... ....

ಮಧ್ಯಾಹ್ನವಾಯಿತು; ರಾಜಾರಾಮನಿಗೆ ಹೀರೆಯ ಮನೆಗೆ ಹೋಗುವ ಮನಸ್ಸಿರಲಿಲ್ಲ. ಗುಡ್ಡವನ್ನಿಳಿದು ಸಮೀಪದ 'ಜಯ, ಕೆಫೆ'ಗೆ ಹೋದ. ತಿಂಡಿ–ತೀರ್ಥಗಳಿಂದ ಹಸಿವನ್ನು ಹಿಂಗಿಸಿಕೊಂಡ. 'ಲೇಡಿಸ್ ರೂಮಿ'ನಲ್ಲಿ ಕಾಫಿ–ಫಲಾಹಾರಕ್ಕೆಂದು ಬಂದ ಎಷ್ಟೋ ದಂಪತಿಗಳು ಕಾಣಿಸಿದರು. ರಾಜಾ ರಾಮನು ವಿಚಾರಿಸಿದ. 'ಇವರಲ್ಲೆಷ್ಟು ಮಂದಿ ಬಹಿರಂಗದಲ್ಲಿ ಸಂಭಾವಿತ

ರಾಗಿದ್ದು, ತಮ್ಮ ಪತ್ನಿಯರನ್ನು ಪ್ರೀತಿ, ವಾತ್ಸಲ್ಯ, ಮಮತೆಯಿಂದ ಕಾಣು ತ್ತಿದ್ದರೂ, ಅಂತರಂಗದಲ್ಲಿ ವೇಶ್ಯಾಸಂಗಿಗಳಾಗಿರಬಹುದು ?' ಎಂದು ಕೇಳಿ ಕೊಂಡ.

ಪುನಃ ಗುಡ್ಡವನ್ನ ಡರಿದ. ಗಾಳಿಗೆ ಅಲುಗುವ ಮರದೆಲೆಗಳೂ, ಪಾಚಿ ಹಿಡಿದ ಸೋಫಾಗಳೂ ಅವನನ್ನು ಸ್ವಾಗತಿಸಿದವು. ಒಂದು ಸೋಫಾದ ಮೇಲೆ ಆಸೀನನಾದನು. ಮಧ್ಯಾಹ್ನ ನಿದ್ರೆಯ ಅಭ್ಯಾಸವಿದ್ದುದರಿಂದ ಕುಳಿ ತಲ್ಲಿಯೇ ತೂಕಡಿಕೆ ಬರತೊಡಗಿತು. ಆಲೋಚಿಸುತ್ತಿದ್ದಂತೆಯೇ, ಗಾಢ ವಾದ ನಿದ್ರೆಯಲ್ಲಿ ಸೇರಿಹೋದನು.

ಎಚ್ಚರವಾದಾಗ ಸಮಯ ಸುಮಾರಾಗಿತ್ತು. ಅವನ ಪಕ್ಕದಲ್ಲೂ, ಸುತ್ತಮುತ್ತ ನೆಲದಮೇಲೂ, ಸೋಫಾಗಳ ಮೇಲೂ ಕುಳಿತುಕೊಂಡು ಅನೇಕ ಜನರು 'ಕಿರಿ,ಕಿರಿ' ಮಾತನಾಡುತ್ತಿದ್ದರು. ಕೆಲವು ಹಳ್ಳಿಯ ಶಾಲಾ ಹುಡು ಗರೂ ತಮ್ಮ ಅಧ್ಯಾಪಕರೊಡನೆ, 'ಟ್ರಿಪ್' ಬಂದಿದ್ದರು. ಅಲ್ಲಲ್ಲಿ ಕೆಲವು ಮೋಟಾರುಕಾರುಗಳು, ಜಟಕಾಗಾಡಿ, ಸೈಕಲುಗಳಿದ್ದವು.

"ಓಽ! ಎಷ್ಟು ದೊಡ್ಡ ಸಮುದ್ರ!" ಎಂದೊಬ್ಬ ಹುಡುಗನು ತನ್ನ ಸ್ನೇಹಿತನಿಗೆ, ಆಶ್ಚರ್ಯವನ್ನು ವ್ಯಕ್ತಪಡಿಸುತ್ತಿದ್ದ. "ಇದು ಹಿಂದೂ ಸಾಗರವೋ, ಬಂಗಾಳ ಆಖಾತವೋ?" ಎಂದು ಪ್ರಶ್ನೆ ಕೇಳಿದ ಅವನು ಇವ ನೊಡನೆ. "ಎರಡೂ ಅಲ್ಲ, ಅರಬ್ಬೀ ಕಡಲು." ಎಂದಾಗ ಅವನಿಗೆ ಆಶ್ಚರ್ಯ ವಾಯಿತು. "ಹೋಹ್! ನಮ್ಮ ಅರಬ್ಬಿಕಡಲು ಇಲ್ಲಿಗೂ ಬಂತೇ?" ಎಂದು ಸಂತೋಷಾಶ್ಚರ್ಯಗಳಿಂದ ಹೇಳಿ ಕಡಲನ್ನೇ ನೋಡತೊಡಗಿದ. "ನೋಡು! ತೆರೆಗಳು ಹೊರಳುವುದು ಎಷ್ಟು ಸರಿಯಾಗಿ ಕಾಣುತ್ತದೆ!" ಎಂದ.

ಅಲ್ಲಲ್ಲಿ ನೆಲಗಡಲೆ ಮುರಿಯುವ ಸದ್ದು ಕೇಳುತ್ತಿತ್ತು. ಹೆಂಗಸರ ತಲೆಯ ಹೂವಿನ ಪರಿಮಳ ಸುತ್ತಹರಡತೊಡಗಿತ್ತು. ರುಗೂಸುಗಳಲ್ಲಿ ಕೆಲವು ಓಲಗ ಬಾರಿಸುತ್ತಿದ್ದರೆ, ಕೆಲವು ರಣಭೇರಿ ಹೊಡೆಯುತ್ತಿದ್ದವು.

ರಾಜಾರಾಮನು ಕುಳಿತಲ್ಲಿಂದ ಎದ್ದು ನಿಂತ. ಅದೇ ಸೋಫಾದಲ್ಲಿ ಕುಳಿತವನೊಬ್ಬನು ತನ್ನ ಪಕ್ಕದವನೊಡನೆ ಮೆಲ್ಲನೆ ರಾಜಾರಾಮನನ್ನುದ್ದೇಶಿಸಿ " ಇವನೆಂಥ ಪ್ರಾಣಿ! ಮಲಗಲಿಕ್ಕೆ ಇಲ್ಲಿಗೆ ಬರಬೇಕೇ? ಮನೆಯಲ್ಲಿ ಸ್ಥಳ ವಿಲ್ಲವೇ" ಎಂದು ಹೇಳುವುದು ಸ್ಪಷ್ಟವಾಗಿ ಕೇಳಿಸಿತು.

ರಾಜಾರಾಮ ಹೊರಟ. ಕೃಷ್ಣಭವನದಲ್ಲಿ ಸಾಲ್ಮಾಣೆಯ'ಬಿಲ್ಲು' ತೀರಿಸಿ

ಮೈದಾನಿಗೆ ಬಂದ. ಸೈಗಲನ ಸುಮನೋಹರ ಗಾಯನವು ಕೇಳುತ್ತಿತ್ತು. ಒಂದರ ಹಿಂದೊಂದರಂತೆ ಸುಮಧುರ ಸಂಗೀತವನ್ನು ಕೇಳುತ್ತಾ ಕುಳಿತಂತೆ ಗಂಟೆ ಎಂಟು ಕಳೆದುದು ಗೊತ್ತಾಗಲೇ ಇಲ್ಲ. ರೇಡಿಯೋ ಹೌಸಿನ ಬಾಗಿಲು ಮುಚ್ಚಲು, ಅಲ್ಲಿಂದದ್ದವನು ಸೀದಾ ಮನೆಗೇ ನಡೆದ.

ಮನೆಯಲ್ಲಿ ಯಾವನೋ ಒಬ್ಬನು ಹೀರಾ ಕೊಟ್ಟ ರುಚಿಕರವಾದ ಹಾಲನ್ನು ಸೇವಿಸುತ್ತಾ ಕುಳಿತಿದ್ದ. ಅವನು ಯಾರೆಂದು ರಾಜಾರಾಮ ತತ್‌ಕ್ಷಣವೇ ಊಹಿಸಿದನು.

"ಇದು ಯಾರು ?" ಎಂದು ಕೇಳಿದ ಆ ಮನುಷ್ಯ.

"ಯಾರೋ? ಗೊತ್ತಿಲ್ಲವಲ್ಲಾ! ಯಾರಯ್ಯಾ ನೀನು ?" ಎಂದು ಹೀರಾ ನೇರವಾಗಿ ರಾಜಾರಾಮನನ್ನೇ ಕೇಳಿದಳು.

ರಾಜಾರಾಮನಿಗೆ ಆಶ್ಚರ್ಯವಾಗಲಿಲ್ಲ; ಮಾತ್ರ ನಗು ಬಂದಿತು.

"ಏ! ಏತಕ್ಕೆ ನಗುತ್ತಿಯೋ ಘಟಿಂಗ?" ಎಂದು ಆ ಮನುಷ್ಯ, ಹೀರೆಯೆಡೆಗೆ ತಿರುಗಿ, "ಏನು, ಇವನೂ ಇಲ್ಲಿಗೆ ಬರುತ್ತಾನೋ? ಏನು, ನಿನ್ನದು Public business ಏ? ಹಾಗಾದರೆ, ನಾನು ಹೊರಟೆ."

ಹೀರಾ– "ಏನಪ್ಪ! ಏತಕ್ಕಿಲ್ಲಿ ಬಂದೆ? ದಾರಿ ತಪ್ಪಿತೇ? ಹಾಗಾದರೆ ಹಿಂದೆ ಹೋಗು. ಇದು ನಿನ್ನ ಮನೆಯಲ್ಲ."

"ಹೀರಾ!"

"................"

"ತಿಳಿಯಿತು, ಹೀರಾ! ತಿಳಿಯಿತು. ಇದರಿಂದ ಕಿಂಚಿತ್ತೂ ಬೇಸರವಿಲ್ಲ ನನಗೆ!"

"ಇಲ್ಲಿಂದ ದಯಮಾಡಿಸಬಹುದು."

"ಹೋಗುತ್ತೇನೆ, ಹೀರಾ! ಹೋಗುತ್ತೇನೆ, ನಿಜವಾಗಿಯೂ ಹೋಗುತ್ತೇನೆ. ಆದರೆ ಹೋಗುವ ಮುನ್ನ ಒಂದು ಮಾತನ್ನು ಹೇಳಿ ಹೋಗಬೇಕೆಂದೆನಿಸುತ್ತದೆ. ನನಗಂತೂ ನೀನು ಅರ್ಧಚಂದ್ರ ಪ್ರಯೋಗವನ್ನು ಮಾಡಿದೆ. ಅದಕ್ಕೆ ಕಾರಣವೂ ಗೊತ್ತಿದೆ. ಇನ್ನು ಈ ನರಪ್ರಾಣಿಯ ಸರದಿ ಯಾವಾಗ ಬರುತ್ತದೋ? ನನ್ನಂತೆಯೇ ಕುಬೇರನಿದ್ದವನು ಹೋಗಿ ಗರೀಬನಾದ ಮೇಲೆ ಅಲ್ಲವೇ?"

"ಏಯ್! ನನ್ನ ಕಡೆಗೆ ಬೊಟ್ಟಿಟ್ಟು ಯಾಕೆ ಮಾತನಾಡುತ್ತೀಯೋ ನಿನಗೇನಾಗಿದೆ?" ಎಂದನಾ ಹೊಸಬ.

"ಸಾಕು, ಸಾಕು ಮಾಡು! ಹೋಗು ಇಲ್ಲಿಂದ" ಎಂದಳು ಹೀರಾ. ಅವಳು ಹಾಗೆನ್ನುವುದಕ್ಕೆ ಮೊದಲೇ ಅವನು ಹೊರಟು ಹೋಗಿದ್ದನು.

"ಯಾರು ಆ Mannerless fellow?" ಎಂದು ಆತ ಕೇಳಿದ.

"ಒಬ್ಬ ಹುಚ್ಚ!"

"ಹುಚ್ಚನೇ! ಸರಿ, ನನಗೆ ಮೊದಲೇ ಗೊತ್ತಾಗಿತ್ತು!" ಎಂದನು. ಇಬ್ಬರೂ ಒಬ್ಬರನ್ನೊಬ್ಬರು ನೋಡಿ ನಕ್ಕು ನಲಿದಾಡಿದರು.

ಮರುದಿನ ಬೆಳಗಾಯಿತು; ರಾಜಾರಾಮನು ಉಭಯಗಿರಿ (Hat Hill) ಯನ್ನೇರಿ ಕುಳಿತುಕೊಂಡಿದ್ದನು. ತನ್ನ ಮುಂದಿನ ಹಾದಿಯನ್ನು ಕಾಣದೆ ಅವನು ಪರಿತಪಿಸುತ್ತಿದ್ದನು. "ಈಗಲಾದರೂ ನನಗೆ ಬುದ್ಧಿ ಬಂದಿತಲ್ಲ, ಇನ್ನುಳಿದ ನನ್ನ ಜೀವಿತವನ್ನಾದರೂ ಸದ್ವಿನಿಯೋಗಗೊಳಿಸ ಬಹುದಲ್ಲ!" ಎಂದು ಅವನು ತನಗೆ ತಾನೇ ಹೇಳಿಕೊಳ್ಳುವ ಸಮಾಧಾನ ವಾಗಿತ್ತು. "ನಾನು ಗೈದ ಕೃತ್ಯಕ್ಕೆ ಪ್ರಾಯಶ್ಚಿತ್ತವಾಗಿ ಇನ್ನು ನನ್ನುಳಿದ ಜೀವನವೆಲ್ಲಾ ಜನೋದ್ಧಾರಕ್ಕಾಗಿ, ಜನರ ಏಳಿಗೆಗಾಗಿ ಮೀಸಲು" ಎಂದು ಧೃಡನಿರ್ಧಾರ ಮಾಡಿದನು.

ಆ ದಿನ ಬಹಳ ದುರ್ದಿನವಾಗಿತ್ತು. ಆಕಾಶವೆಲ್ಲಾ ಕರಿದಾಗಿತ್ತು. ಕಾಗೆಗಳೂ ಏನೋ ದುಃಖಭಾರದಿಂದ ಎಂಬಂತೆ ಸುಮ್ಮನಾಗಿದ್ದವು. ರಾಜಾ ರಾಮನು ಕುಳಿತುಕೊಂಡಿದ್ದಂತೆ ಬೀದಿಯಲ್ಲಿ ಒಂದು ದೊಡ್ಡ ಮೆರೆವಣಿಗೆ ಹೋಗುವುದು ಕಂಡಿತು. ಅದರೊಡನೆ, 'ಇನ್‌ಕ್ವಿಲಾಬ್' ಎಂಬ ಸ್ವರವೂ ಆಕಾಶದ ತನಕ ಹಾರಿತು.

ಪಟ್ಟಣದಲ್ಲಿ ಬಹಳ ಗಲಿಬಿಲಿ; 'ಏನು? ಏನು?' ಎಂದರ 'ಆಗಸ್ಟ ವಿಪ್ಲವ' ಎಂದಾಯಿತು. ರಾಜಾರಾಮನ ಹೃದಯದಲ್ಲೇನೋ ಮಿಂಚು ಮಿಂಚಿದಂತಾಯಿತು. ಆ ಕ್ಷಣದಿಂದಲೇ ಅವನು ಸ್ವಾತಂತ್ರ್ಯದ ವಿಪ್ಲವದ ರಣಯೋಧನಾಗಿ ಜಿಗಿದನು.

× × × ×

ಇಪ್ಪತ್ತೊಂದನೆಯ ಶತಮಾನದ ನಲ್ವತ್ತೊಂದು ವರುಷಗಳು ಕಳೆ

ದವು. ನಲ್ವತ್ತೆರಡರ ಏಳು ತಿಂಗಳುಗಳೂ ಸಂದುಹೋದವು. ಆಗ ಇದ್ದ ಕ್ಕಿದ್ದಂತೆ ಜ್ವಾಲಾಮುಖಿ ಸಿಡಿದಂತಾಯಿತು. ಭೂಮ್ಯಾಕಾಶಗಳೆಲ್ಲಾ ಅದರ ಬೆಂಕಿ, ಹೊಗೆಗಳಿಂದ ತುಂಬಿಕೊಂಡವು. ಭೂಕಂಪವಾದಂತೆ, ಅಖಿಲ ಭರತ ಭೂಮಿಯೇ ನಡುಗಿತು. 'ಹೆಣದ ರಾಶಿ ಬೀಳಲಿ, ರಕ್ತ ಸೂಸಿ ಸುರಿಯಲಿ' ಎಂದು ಎಲ್ಲರೂ ಹಾಡತೊಡಗಿದರು. 'Quit India ಇನ್‌ಕ್ವಿಲಾಬ್ ಜಿಂದಾಬಾದ್' ಎಂಬ ಉದ್ಗಾರಗಳು ಪ್ರತಿದಿನವೂ, ಕ್ಷಣ ಕ್ಷಣವೂ, ಕೇಳುತ್ತಿದ್ದವು.

ಮಜೂರರು, ಕಾರ್ಮಿಕರು, ದಲಿತರು, ಬಡವರು, ಸಿರಿವಂತರು, ಹೆಂಗಸರು, ಮಕ್ಕಳು, ಮುದುಕರು ಎನ್ನದೆ ಎಲ್ಲರೂ ವಿಪ್ಲವದಲ್ಲಿ ಭಾಗ ವಹಿಸಿದರು. ಕೋರ್ಟು ಕಚೇರಿಗಳು ಮುಚ್ಚಿದವು. ಶಾಲಾ, ಕಾಲೇಜುಗಳ ಬಾಗಿಲುಗಳು ತೆರೆಯಲಿಲ್ಲ. ಜನರೆಲ್ಲಾ ತಾವಾಗಿಯೇ ಕೋರ್ಟು ಕಛೇರಿಗಳಿಗೆ ಹೋಗುವುದನ್ನು ನಿಲ್ಲಿಸಿದರು. ಕೆಲವು ಬ್ರಿಟಿಷರು ಗುಲಾಮರ ಠೀವಿಯಿಂದ ಹೋದರೂ, ಅದೆಲ್ಲಾ ಲೆಕ್ಕಕ್ಕೆ ಬರ ನಂತಿರಲಿಲ್ಲ. ಕೆಲವರು ಬೇಕೆಂದೇ ಸ್ವಾತಂತ್ರ್ಯ ಯೋಧರಾಗಿ ಕೋರ್ಟು, ಕಛೇರಿಗಳಿಗೆ ಬಹಿಷ್ಕಾರ ಹಾಕಿದರೂ, ಹೆಚ್ಚಿನವರು ಸ್ವಾತಂತ್ರ್ಯ ಯೋಧರು ಕೋರ್ಟು, ಕಛೇರಿಗಳ ಮುಂದೆ ಮಲಗಿ ಮುಷ್ಕರ ಹೂಡಿದಾಗ, ಅಂಗಲಾಚಿದಾಗ ಉಪಾಯವಿಲ್ಲದೆ ಹಿಂದೆ ಹೋಗಬೇಕಾಯಿತು.

ಗೋಡೆ, ಕೌಂಪೌಂಡು, ಡಾಮಾರಿನ ಬೀದಿಗಳಲ್ಲೆಲ್ಲಾ ಸೀಮೆಸುಣ್ಣ ದಿಂದ ಬರೆದ, 'Quit India Inquilab Zindabad' ಗಳು ರಾರಾಜಿಸುತ್ತಿದ್ದವು. ೧೪೪ನೇ ಸೆಕ್ಷನನ್ನೂ ಉಲ್ಲಂಘಿಸಿ ಮೆರವಣಿಗೆ ತೆಗೆದು ಕೊಂಡು ಹೋಗುತ್ತಿದ್ದರು. ಸಭೆ ಜರಗಿಸುತ್ತಿದ್ದರು. ಪೋಲೀಸರೂ ಸಿಕ್ಕಿ ಸಿಕ್ಕಿದಲ್ಲಿ ಲಾಠಿ ಪ್ರಯೋಗ ಮಾಡುತ್ತಿದ್ದರು.

ಒಂದು ದೊಡ್ಡ ತರುಣರ ಗುಂಪು ಒಂದು ಹೈಸ್ಕೂಲಿನೆಡೆಗೆ ಧಾವಿಸಿತು. ಕ್ಲಾಸು, ಕ್ಲಾಸುಗಳ ಬಳಿಗೂ, ಕೋಣೆ, ಕೋಣೆಗೂ ಹೋಗಿ, 'Quit India, Come out, Come out' ಎಂದು ಕೂಗಿತು. ಕೆಲವರು ಅಧ್ಯಾಪಕರು ಕುಳಿತಿದ್ದಂತೆಯೇ ಎದ್ದು ಹೊರಗೆ ಬಂದರು. ಹಾಗೆ ಹೊರಗೆ ಬಾರದವರಿಗೆ, 'Shame, Shame' ಎಂದು ಸಹಸ್ರನಾಮೋಚ್ಚಾರಣೆ ಯಾಯಿತು.

ಪಾಠ ಸಾಗಿಸಲು ಸಾಧ್ಯವಾಗದಂತೆ, ಹುಡುಗರೆಲ್ಲಾ ಕಾಂಪೌಂಡಿನಲ್ಲಿ ನಿಂತು ಕೇಕೇ ಹಾಕಿದರು; ಕುಣಿದರು; ದೊಂಬಿ ಎಬ್ಬಿಸಿದರು. ಹೆಡ್ ಮಾಸ್ಟರರು ಪೋಲೀಸ್ ಸಬ್ ಇನ್ಸ್‌ಪೆಕ್ಟರರಿಗೆ ಟೆಲಿಫೋನ್ ಕೊಟ್ಟರು. ಪೋಲೀಸ್ ವ್ಯಾನ್ ಸಾಗಿ ಬಂದಿತು. ಲಾಠಿಯ ಪೋಲೀಸರನ್ನು ಕಂಡೊಡನೆ ಹುಡುಗರ ಪಡೆ ಸಿಕ್ಕಾಬಟ್ಟೆಯಾಗಿ ಚದುರಿತು. ದರೆ ಹಾರಿದರು; ಬೇಲಿ ಹಾರಿದರು. ಪೋಲೀಸರೂ ಅವರನ್ನು ಹಿಂಬಾಲಿಸಿ, ಕುಸ್ತಿಮಾಡಿ ಸಿಕ್ಕಿಸಿಕ್ಕಿ ದಲ್ಲಿ ಅಪ್ಪಳಿಸಿದರು. ದುರ್ಬಲರಿಗೂ ಪೆಟ್ಟು ಬಿದ್ದಿತು. ನಿರಪರಾಧಿಗಳೂ ಸೆರೆ ಸಿಕ್ಕಿದರು. ಅಂತೂ, ಒಂದು ವ್ಯಾನ್ ತುಂಬ ಹುಡುಗರನ್ನು ಕುಳ್ಳಿರಿಸಿ ಕೊಂಡು ಅವರು ಹೋಗುವಾಗ, 'Quit India' ಜೈ ಗಾಂಧಿ! ಜಯ ಹಿಂದ್! ಎಂಬ ಸ್ವರಗಳು ಆಕಾಶವನ್ನು ಬೇಧಿಸುತ್ತಿದ್ದವು. ಪೋಲೀಸರು ಅವರನ್ನು ಸುಮ್ಮನಾಗಿಸಲು ಮಾಡಿದ ಪ್ರಯತ್ನವೆಲ್ಲಾ ನಿಷ್ಫಲವಾಯಿತು.

ರಥ ಬೀದಿಯಲ್ಲಿ ಬೇರೆಯೇ ಚಟುವಟಿಕೆ ಪ್ರಾರಂಭವಾಯಿತು. ಎಲ್ಲೆಲ್ಲಿ ಅಡಗಿ ನಿಂತು ಕೆಲವರು ಪೋಲೀಸರಮೇಲೆ ಕಲ್ಲೆಸೆಯುತೊಡಗಿದರು. ಪೋಲೀಸರ ಬಳಿ ಲಾಠಿ, ಬಂದೂಕುಗಳಿದ್ದರೂ, ಅವರ ಜೀವವೊಮ್ಮೆ ತಲ್ಲಣಿಸಿಹೋಯಿತು. ಕಳ್ಳಾಟಿಕೆಯಲ್ಲಿ, 'ಲುಚ್ಚಗಿರಿ' ತೋರಿಸಿದರೆ, ಅವರೇನು ಮಾಡಲಾದೀತು? 'ಧೈರ್ಯವಿದ್ದರೆ ದಿರು ಬನ್ನಿ.' ಎಂದು ಅವರು ಹೇಳಿದ್ದೂ ನಿಷ್ಫಲವಾಯಿತು. ರಥ ಬೀದಿಯಲ್ಲಿ ಪೋಲಿಸನೊಬ್ಬನು ಒಬ್ಬನೇ ಆಗಿ ಹೋಗುತ್ತಿದ್ದದ್ದನ್ನು ನೋಡಿ, ಕೆಲವು ಕೊಂಕಣಿಗಳು 'ಕೆಂಪು ಟೊಪ್ಪಿಗೆ' ಹಾರಿಸಿದರು. ಅವನ್ನು ಅವನಿದಿರಲ್ಲಿಯೇ ಭಸ್ಮಮಾಡಿದರು. ಪಾಪ! (?) ಅವನಿಗೆ ಅವನನ್ನೇ ಜೀವಂತ ಸುಟ್ಟಹಾಗಾಯಿತು. ಅವನು ಹೋಗಿ ಪೋಲೀಸರ ಪಡೆಯನ್ನೇ ಕರೆದುಕೊಂಡು ಬಂದ. ಆದರೆ, ಅಪ ರಾಧಿಗಳು ಸಿಕ್ಕುತ್ತಾರೆಯೇ? ಕೊನೆಗೆ, ಅವರೆಲ್ಲಾ ಸೇರಿ, ಒಂದು ಹೋಟೆ ಲಿಗೆ ಗುಂಡು ಹಾರಿಸಿ, ಕನ್ನಡಿ ಕಪಾಟುಗಳನ್ನು ಚೂರುಮಾಡಿ, ತಮ್ಮ ಸಿಟ್ಟನ್ನು ತೀರಿಸಿಕೊಂಡರು. ಪೋಲೀಸರಮೇಲೆ ಹೋಟಲಿನವರು ನಷ್ಟ ಕ್ಕಾಗಿ ದಾವೆ ಹೂಡಿದರೆ, ಉಚ್ಚ (ಲುಚ್ಚವೋ?) ಅಧಿಕಾರಿಗಳು ಮತ್ತಷ್ಟು ದಂಡಹಾಕಿ 'ಲಾಭ ಮಾಡಿದರು!'

ಶಾಲಾ, ಕಛೇರಿಗಳ ಮುಂದೆ ದಿನಂಪ್ರತಿಯೂ 'ಸ್ಟ್ರೈಕ್' ನಡೆಯು ತ್ತಿತ್ತು. ಅದನ್ನೊಲ್ಲದೆ ಕೆಲವು ಬಾಲಕರು ಕಳ್ಳದಾರಿಯಿಂದ ಶಾಲೆಯೊಳಗೆ

ಪ್ರವೇಶಿಸಿ, 'ಬಚಾವಾಗುತ್ತಿದ್ದರು.' ಬಾಲಕಿಯರಲ್ಲಿ ಕೆಲವರು, ಕಿಡಿಕಿ ಹತ್ತಿ ಒಳಗೆ ಪಾರಾಗುತ್ತಿದ್ದರು.

ಉಭಯಗಿರಿಯ ಪಕ್ಕದಲ್ಲೇ ಕೆ ವು ಸ್ವಾತಂತ್ರ್ಯಯೋಧರು ಒಂದು ಶಿಬಿರ ಹೂಡಿದ್ದರು. ರಾಜಾರಾಮನೂ ಅವರೊಂದಿಗೆ ಹೋಗಿ ಸೇರಿ ಕೊಂಡನು, ಯೋಧರು ಮೊದಮೊದಲು ರಾಜಾರಾಮನನ್ನು C. I. D ಎಂಬ ಅನುಮಾನದಿಂದ ಸೇರಿಸಿಕೊಳ್ಳಲು ಒಪ್ಪಲಿಲ್ಲ. ರಾಜಾರಾಮನು ಬಹಳ ಕಷ್ಟದಿಂದ ಅವರನ್ನು ನಂಬಿಸಬೇಕಾಯಿತು. ಅಲ್ಲಿ ಅವರ ಗುಪ್ತ ಚಟು ವಟಿಕೆಗಳು ನಡೆಯುತ್ತಿದ್ದವು.

ಊರಲ್ಲಿಯ ಪತ್ರಿಕೆಗಳಿಗೆಲ್ಲಾ 'Ban' ಹಾಕಲಾಗಿತ್ತು. ರಾಜಾ ರಾಮನ ಹಿಂದಿನ ಪತ್ರಿಕಾ ಅನುಭವವು, ವ್ಯವಸಾಯವು ಪುನಃ ಅವನನ್ನು ಕರೆಯಿತು. ಪರಿಣಾಮವಾಗಿ 'ಸ್ವಾತಂತ್ರ್ಯ' ಪತ್ರಿಕೆ ಹೊರಟಿತು. 'Ban' ಬಿದ್ದಿತು. 'ವಿಪ್ಲವ' ಹೊರಟಿತು. ಅದಕ್ಕೂ Ban. 'ಕ್ರಾಂತಿದೂತ' ಹೊರಟನು. ದೊಡ್ಡದೊಡ್ಡ ಅಧಿಕಾರಿಗಳ ವ್ಯಂಗ್ಯ ಚಿತ್ರಗಳು ಬಂದವು. ಎಲ್ಲರೂ ಮಂಗ, ಕೋತಿಗಳಾದರು. ಅದು ಜನರ ಕೈಸೇರುವುದಕ್ಕೆ ಮುಂಚಿತ ವಾಗಿಯೇ ಸುಟ್ಟು ಭಸ್ಮವಾಯಿತು.

ಒಮ್ಮೆ ಒಬ್ಬ ಪೋಲೀಸನಿಗೆ ಯೋಧರ ಗುಪ್ತ ಚಟುವಟಿಕೆಯ ಸುಳಿವು ಹತ್ತಿ ಬಂದೂಕು ಸಮೇತನಾಗಿ ಅತ್ತ ಹೊರಟನು. ಅಲ್ಲಿ ಯೋಧರಿಗೂ. ಪೋಲೀಸನಿಗೂ ಚಕಮಕಿಯಾಗಿ ಬಂದೂಕು ರಾಜಾರಾಮನ ವಶವಾಯಿತು. ಅವನು ಸ್ವಲ್ಪವೂ ಯೋಚಿಸದೆ ಅದನ್ನು ಉಪಯೋಗಿಸಿ, ಪೋಲೀಸನನ್ನು 'ರಾಮ, ರಾಮ' ಎಂದು ಚೀರುವಂತೆ ಮಾಡಿ ಕೆಳಗುರುಳಿಸಿದನು. ✓

ಅದೇ ಸಮಯಕ್ಕೆ ಸರಿಯಾಗಿ ಹತ್ತಿಪ್ಪತ್ತು ಪೋಲೀಸರು ದುರದೃಷ್ಟ ವಶಾತ್ ಆ ದಾರಿಯಾಗಿ ಬಂದರು. ಉಳಿದ ಯೋಧರೆಲ್ಲಾ ಮಾಯವಾದರು. ರಾಜಾರಾಮನೊಬ್ಬನೇ ಉಳಿದನು. ಬಂದೂಕನ್ನೆತ್ತುವ ಮೊದಲೇ ಪೋಲೀ ಸರು ಅವನನ್ನು 'ಖೈದು' ಮಾಡಿದರು. ವಿಚಾರಣೆ, ನ್ಯಾಯ ಒಂದೂ ಇಲ್ಲದೆ ಅವನನ್ನು ಗುಂಡಿನಿಂದ ಸುಡುವುದೆಂದು ತೀರ್ಮಾನವೂ ಆಯಿತು. ಮಿಂಚಿನಂತೆ ಈ ವಾರ್ತೆ ನಗರದ ಎಲ್ಲೆಡೆಗೂ ವ್ಯಾಪಿಸಿಕೊಂಡಿತು.

ರಾಮಗೋಪಾಲ ಆ ದಿನ ಮನೆಗೆ ಬಹಳ ವಿಜಯಿಯಂತೆ ಬಂದನು. ಪ್ರತಿದಿನವೂ ಅವನು ಹೊರಗಿದ್ದು ಸುತ್ತಾಡಿ, ಸಂಭವಿಸಿದ ಅಕಾಂಡತಾಂಡವ

ಗಳನ್ನು ಬಂದು ಲಲಿತೆಗೆ ಹೇಳುತ್ತಿದ್ದನು. ಈದಿನ ಕೇಳಿದ ವಾರ್ತೆ ಅವನಿಗೆ ಬಹಳ ಸಂತೋಷವನ್ನುಂಟುಮಾಡಿತ್ತು.

"ಬಹಳ ಸಂತೋಷದ ಸಂಗತಿ, ಅಮ್ಮಾ!" ಎಂದು ಕೂಗಿ ಹೇಳಿದನು.

"ಏನದು, ಗೋಪಾಲ?"

"ರಾಜಾರಾಮನನ್ನು ಗುಂಡಿನ ಬಾಯಿಗೆ ಕೊಡುತ್ತಾರಂತೆ!"

"ನಿಜವೇ!"

"ಅಲ್ಲವೇ ಮತ್ತೆ?"

"ಇದು ಸಂತೋಷದ ಸಂಗತಿಯೇ, ಗೋಪಾಲ?"

"ಅಮ್ಮಾ! ನೀವೊಂದು ಮರುಳು. ಅವನಿಷ್ಟು ಮಾಡಿದ ಮೇಲೂ, ನಿಮಗವನ ಮೇಲೆ ಪ್ರೀತಿಯೇ?"

"ಗೋಪಾಲ! ನಾನೊಂದು ಸಂಗತಿ ಹೇಳುತ್ತೇನೆ. ಮಾಡುತ್ತೀಯಾ?"

"ಏನದು"

ಲಲಿತೆ, ಮೆಲ್ಲನೆ ಕಿವಿಯಲ್ಲಿ ಹೇಳಿದಳು. ಕೇಳಿ ಗೋಪಾಲನಿಗೆ ಆಶ್ಚರ್ಯ! "ಇದೆಂಥಃ ವಿಚಿತ್ರ, ಅಮ್ಮಾ!"

"ಗೋಪಾಲ! ಆ ವಿಷಯ ನಿನಗೆ ಬೇಡ. ನನ್ನ ಧೃಡ ನಿರ್ಧಾರದಂತೆ, ನಾನು ಮಾಡುವವಳೇ. ನಿನಗೆ ಮನಸ್ಸಿದ್ದರೆ, ನನಗೆ ಸಹಾಯ ಮಾಡು!"

"ಆಗಲಿ!" ಎಂದನು.

ರಾತ್ರಿಯಾಗಿತ್ತು. ಇಬ್ಬರೂ ಸೆರೆಮನೆಯ ಕಡೆಗೆ ಬಂದರು. ಸುಲಭವಾಗಿ ಒಳಹೊಕ್ಕು ಒಂದು ಕೋಣೆಯ ಬಳಿಗೆ ಬಂದರು. ಕಾವಲುಗಾರನು ಎಚ್ಚತ್ತಿದ್ದರೂ, ಅವನ ಜೇಬು ಈ ಮೊದಲೇ ಭಾರವಾಗಿದ್ದುದರಿಂದ ಸುಲಭವಾಗಿ ಒಳಗೆಹೋಗಬಿಟ್ಟನು. ಒಳಗೆ ಖೈದಿ ಪೋಲೀಸರ ಸಿಕ್ಕಾಪಟ್ಟೆ ಹೊಡೆತಕ್ಕೆ ಆಹುತಿಯಾಗಿ ಸ್ಮೃತಿತಪ್ಪಿ ಬಿದ್ದುಕೊಂಡಿದ್ದನು.

ಸ್ವಲ್ಪ ಹೊತ್ತಿನಲ್ಲೇ ಒಳಗೆಹೋದವರಲ್ಲೊಬ್ಬನು ಸ್ತ್ರೀ ಉಡುಪಿನ ಮತ್ತೊಂದು ವ್ಯಕ್ತಿಯನ್ನು ಹೊತ್ತುಕೊಂಡು ಮನೆಯಕಡೆಗೆ ಸಾಗಿದನು.

ಮರುದಿನ ಬೆಳಗಾಯಿತು. ರಾಜಾರಾಮನನ್ನು ಗುಂಡಿಗಾಹುತಿ ಕೊಡಲು ಜೈಲುಕೋಣೆಯಿಂದ ಹೊರಗೆ ತಂದರು. ಅಧಿಕಾರಿಗಳೆಲ್ಲಾ ಅವ

ಲಿನ ಗುಂಗಿನಲ್ಲಿದ್ದರು. ಇಲ್ಲವಾದರೆ, 'ಇವನು ರಾಜಾರಾಮನಲ್ಲ!' ಎಂದನ್ನು ಅವರು ಸುಲಭವಾಗಿ ಕಂಡುಹಿಡಿಯಬಹುದಾಗಿತ್ತು.

ಸ್ವಲ್ಪ ಹೊತ್ತಿನಲ್ಲೇ ಗುಂಡು ಹಾರಿದ ಸದ್ದು ಕೇಳಿತು. ಅದರೊಡನೆ ಒಂದು ಆತ್ಮ ಪ್ರಾಸ್ವರ್ಗೀಯವಾಯಿತು.

ಅದೇ ಸಮಯಕ್ಕೆ ಸರಿಯಾಗಿ ರಾಜಾರಾಮನಿಗೆ ಮನೆಯಲ್ಲಿ ಎಚ್ಚರವಾಯಿತು. ನೋಡಿದರೆ ಸ್ತ್ರೀ ಉಡುಪಿನಲ್ಲಿದ್ದಾನೆ. ಲಲಿತೆಯ ಬಟ್ಟೆ! ಬಹಳ ಆಶ್ಚರ್ಯವಾಯಿತು. ಬಳಿಯಲ್ಲೇ ರಾಮಗೋಪಾಲ ದುಃಖಭಾರದಿಂದ ತಲೆಯನ್ನು ಬಗ್ಗಿಸಿ ಕುಳಿತಿದ್ದನು.

"ಏನಿದು ರಾಮಗೋಪಾಲ್?" ಎಂದು ಕೇಳಿದನು.

ರಾಮಗೋಪಾಲನಿಂದ ನಡೆದ ಕತೆ ತಿಳಿಯಿತು. ಕೂಡಲೇ ಇಬ್ಬರೂ ವಾಯುವೇಗದಿಂದ ಜೈಲಿನೆಡೆಗೆ ಧಾವಿಸಿದರು.

ಆದರೆ, ಕಾಲ ಮಿಂಚಿಹೋಗಿತ್ತು.! ಲಲಿತೆಯ ನಗುಮೊಗದ ಶವ ಬಿದ್ದುಕೊಂಡಿತ್ತು.

ಅಧಿಕಾರಿಗಳ ಅಮಲೂ ಇಳಿಯುತ್ತ ಬಂದಿತ್ತು. ರಾಜಾರಾಮನನ್ನು ನೋಡಿ, ಅವರೂ ದಂಗಾದರು.

ರಾಜಾರಾಮ ಶವವನ್ನೀಕ್ಷಿಸಿದನು. ಕಂಬನಿ ಸುರಿಸಲಿಲ್ಲ. ದುಃಖಭಾರದಿಂದ ಕಣ್ಣೀರು ಹರಿಯಲಿಲ್ಲ. ಯಂತ್ರದಂತೆ ಶವವನ್ನು ಮುದ್ದಿಸಿದನು.

"ಅಯ್ಯೋ! ಅಯ್ಯೋ!! ಇನ್ನು ಅವಳು ದೊರೆಯಲುಂಟೆ? ದೊರೆಯಲುಂಟೆ?" ಎಂದು ಹಂಬಲಿಸಿದನು.

—: ಮುಗಿಯಿತು :—